# ಆನೆಗೊಂದಿ ಜಾನಪದ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್. ಸಂಪ್ರಬಂಧ)







ಸಮಾಜವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

# ಪರಿವಿಡಿ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

## ೧.೧. ಅಧ್ಯಯನದ ಉದ್ದೇಶ

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಆನೆಗೊಂದಿಯು ಹತ್ತು ಹಲವಾರು ವಿಶಿಷ್ಟವಾದ ಅಂಶಗಳಿಂದ ಅಪಾರವಾದ ಖ್ಯಾತಿಯನ್ನು ಜನಪ್ರಿಯತೆಯನ್ನು ಪಡೆದಿದೆ. ಚಾರಿತ್ರಿಕವಾಗಿ ಅತಿ ಪ್ರಾಚೀನ ಕಾಲದ ಜನವಸತಿ ಕೇಂದ್ರವಾಗಿ, ರಾಮಾಯಣ ಕಾಲದ ಕಿಷ್ಕಿಂದೆಯಾಗಿ, ಸಾಧುಸಂತರ, ಅನುಭಾವಿಗಳ, ದೈವಭಕ್ತರ ಪವಿತ್ರ ನೆಲೆಯಾಗಿ, ಹಲವಾರು ಅಚ್ಚರಿಗೊಳಿಸುವ ಸ್ಮಾರಕಗಳು, ಗವಿಚಿತ್ರಗಳು, ಶಿಲ್ಪಗಳು, ದಟ್ಟವಾದ ಬೆಟ್ಟದ ಸಾಲುಗಳು, ಕೋಟೆ ಕೊತ್ತಲಗಳು, ನದಿ, ಕೆರೆ, ಕಾಲುವೆ, ಬಾವಿ, ಮಣ್ಣು, ಖನಿಜ, ಸಸ್ಯ, ಪ್ರಾಣಿ ವೈವಿಧ್ಯ, ಆನೆಗೊಂದಿಯನ್ನು ಅಪ್ಪಿಕೊಂಡೇ ಹರಿಯುವ ತುಂಗಭದ್ರೆಯ ಸುಂದರ, ಮೌಲಿಕ ಹಾಗೂ ಅಚ್ಚರಿ ಮೂಡಿಸುವಂತಹ ಅಂಶಗಳನ್ನು ಆನೆಗೊಂದಿಯ ಪರಿಸರವು ತನ್ನ ಮಡಲಿನೊಳಗೆ ತುಂಬಿಕೊಂಡಿದೆ. ಇಂತಹ ಉತ್ಕೃಷ್ಟವಾದ ಅಂಶಗಳನ್ನು ಮೈಗೂಡಿಸಿಕೊಂಡಿರುವ ಆನೆಗೊಂದಿಯು ಸಹಜವಾಗಿಯೇ ನನ್ನನ್ನು ಆಕರ್ಷಿಸಿತು. ಇಂತಹ ವಿಶಿಷ್ಟತೆಯನ್ನು ಒಳಗೊಂಡ ಆನೆಗೊಂದಿ ಪರಿಸರದ ಬಗೆಗೆ ಈವರೆಗೆ ಕೆಲವು ಅಧ್ಯಯನಗಳು ನಡೆದಿವೆಯಾದರೂ ಅವು ಬಿಡಿ ಬಿಡಿ ಲೇಖನಗಳಲ್ಲಿ, ಅಲ್ಲೊಂದು ಇಲ್ಲೊಂದು ಕಂಡುಬರುತ್ತವೆ. ಆನೆಗೊಂದಿಯು ಹಂಪೆಯಷ್ಟೆ ಮಹತ್ವವನ್ನು ಪಡೆದಿದ್ದರೂ ಸಹ ಸಮಗ್ರವಾದ ಅಧ್ಯಯನವನ್ನು ಅದರಲ್ಲೂ ಜಾನಪದೀಯ ಅದ್ಯಯನವನ್ನು ಕೈಗೊಳ್ಳದಿರುವುದು ದುರದೃಷ್ಟಕರ ಸಂಗತಿಯಾಗಿದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಆನೆಗೊಂದಿಯ ಬಗೆಗೆ ಒಂದು ಸಮಗ್ರವಾದ ಅಧ್ಯಯನ ನಡೆಯಬೇಕಾದ ಅಗತ್ಯತೆ ನನಗೆ ಎದ್ದು ಕಂಡಿತು.

ಒಂದು ನಾಡಿನ ಸಂಸ್ಕೃತಿಯನ್ನು ಮೈವೆತ್ತಿ ನಿಲ್ಲಿಸಿರುವುದು ಆ ನಾಡಿನ ಜಾನಪದ ಅಂಶಗಳು, ಜನರ ಮೂಲಕ ಆ ಸಂಸ್ಕೃತಿಯ ಅಂಶಗಳು ಈ ಹಿನ್ನೆಲೆಯಲ್ಲಿ ಆನೆಗೊಂದಿ ಪರಿಸರದ ಜನಪದರ ಬದುಕು, ಭಾವನೆ, ಅವರು ವಾಸಿಸುವ ಪರಿಸರದ ಪೌರಾಣಿಕ, ಐತಿಹಾಸಿಕ ನೆಲೆಗಳ ಬಗೆಗೆ ಹೊಂದಿರುವ ವಿಚಾರಗಳು ಏನು, ಎಂಬಿತ್ಯಾದಿ ಅಂಶಗಳನ್ನು ಈ ಸಂದರ್ಭದಲ್ಲಿ ಅಧ್ಯಯನ ಮಾಡುವ ಮೂಲಕ ಆನೆಗೊಂದಿ ಪರಿಸರದ ಮೇಲೆ ಸ್ವಲ್ಪಮಟ್ಟಿಗೆ ಬೆಳಕನ್ನು ಚೆಲ್ಲುವಂತಹ ಒಂದು ಪುಟ್ಟ ಪ್ರಯತ್ನವನ್ನು ಈ ಮೂಲಕ ಮಾಡಿದ್ದೇನೆ.

ಆರಂಭದಲ್ಲಿ ವಿಶ್ವದೆಲ್ಲೆಡೆ ಮಾನವ ಜನಾಂಗ ಒಂದೇ ಮೂಲದಿಂದ ಬಂದುದಾದರಿಂದ ಒಂದೇ ಆಶಯ, ಗುರಿ, ಧ್ಯೇಯ, ಧೋರಣೆ, ಆಚಾರ ವಿಚಾರ, ರೂಢಿ, ಸಂಪ್ರದಾಯ, ವಿಧಿ ನಿಷೇಧ, ನಂಬಿಕೆ

ಹೊಂದಿರುವುದರಿಂದ ಇಡೀ ಮನುಕುಲದ ಗುಣಸ್ವಭಾವ, ಶೀಲ, ಸಂಸ್ಕೃತಿಯನ್ನರಿಯಲು ಜನರ ವೃತ್ತಿ, ಪ್ರವೃತ್ತಿ, ಕಲೆ ಸಾಹಿತ್ಯ, ಜೀವನ ವಿಧಾನ ಗೊತ್ತಾಗುವುದು ಒಂದು ಗ್ರಾಮದ ಜನಪದೀಯ ಅಧ್ಯಯನದಿಂದ.

ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ ಇತ್ಯಾದ ಮೂಲಾಂಶಗಳ ನೆಲೆಯನ್ನು ಕಂಡುಕೊಳ್ಳಲು ಈವರಗೆ ನಡೆದ ಅಧ್ಯಯನಗಳನ್ನು ಪರಾಮರ್ಶಿಸಿದಾಗ ಇವುಗಳೆಲ್ಲವು ಲಿಖಿತ ಮತ್ತು ಭೌತಿಕ ಆಧಾರಗಳ ಮೇಲೆ ರಚನೆಯಾಗಿರುವುದು ಸ್ಪಷ್ಟವಾಗುತ್ತದೆ. ಶಾಸನಗಳು, ಮಾಸ್ತಿಕಲ್ಲು, ವೀರಗಲ್ಲು, ಸಾಲೆಯ ಕಟ್ಟಡ, ಪಳೆಯುಳಿಕೆಗಳು, ಪ್ರವಾಸಿಗರ ಬರಹಗಳು, ಲಿಖಿತ ಸಾಹಿತ್ಯ ಕೃತಿಗಳು, ಗವಿ ಚಿತ್ರಗಳು, ಕಡತಗಳು ಇನ್ನೂ ಮುಂತಾದ ದಾಖಲೆಗಳ ಆಧಾರದಿಂದಲೇ ಈ ಪರಿಸರದ ಚರಿತ್ರೆ ಬರೆದಿದ್ದಾರೆ. ಈ ಬಗೆಯ ಬರವಣಿಗೆಯ ವಿಧಾನ ಸಾಂಪ್ರದಾಯಕವಾದುದು. ನಮ್ಮ ಇತಿಹಾಸತಜ್ಞರು, ಪುರಾತತ್ವ ಶಾಸ್ತ್ರಜ್ಞರೂ ಮತ್ತು ಸಂಸ್ಕೃತಿಯ ಕುರಿತು ಬರೆಯುವವರೆಲ್ಲರೂ ಸಾಮಾನ್ಯವಾಗಿ ಈ ಬಗೆಯ ಸಾಂಪ್ರದಾಯಿಕ ಹಾದಿಯನ್ನು ಹಿಡಿದೇ ಬರಯಲು ಹೊರಡುತ್ತಾರೆ. ಬ್ರಿಟೀಷರು ಕೇವಲ ಲಿಖಿತ ಪರಂಪರೆಯನ್ನು ಅನುಸರಿಸಿ ನಮ್ಮ ಇತಿಹಾಸ ಬರೆದಂತೆ, ನಮ್ಮವರೂ ಕೂಡ ಪಶ್ಚಿಮದ ಕ್ರಮಗಳನ್ನೇ ಅನುಸರಿಸಿ ಬರೆದ ಉದಾಹರಣೆಗಳಿವೆ.

ಆದರೆ ಈ ನಾಡಿನ ಕತೆಯೇ ಬೇರೆ ಇಲ್ಲಿನ ಚರಿತ್ರೆ ಇಲ್ಲಿನ ನಾಲಿಗೆಗಳಲ್ಲಿ ದಾಖಲಾಗಿರುತ್ತದೆ. ಅಂತಹ ಮೌಖಿಕ ದಾಖಲೆಗಳು ಲಿಖಿತ ದಾಖಲೆಗಳಷ್ಟೆ ಮಹತ್ವದ್ದಾಗಿವೆ. ಅಷ್ಟೇ ಅಲ್ಲ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಪ್ರಮುಖ ಆಕರಗಳೂ ಆಗಿವೆ. ಹೀಗಿದ್ದರೂ ವಸಾಹತೀಕರಣಕ್ಕೊಳಪಟ್ಟ ವಿದ್ವಾಂಸರು ಜನರ ನಡುವೆ ಇರುವ ಮೌಖಿಕ ದಾಖಲೆಗಳನ್ನು ನಿರ್ಲಕ್ಷಿಸಿಕೊಂಡೇ ಬಂದಿದ್ದಾರೆ. ಜನರು ಏನನ್ನು ನಂಬಿದ್ದಾರೋ ವಿದ್ವಾಂಸರು ಅದನ್ನು ನಂಬುತ್ತಿಲ್ಲ. ಮತ್ತು ವಿದ್ವಾಂಸರು ಏನನ್ನು ಹೇಳುತ್ತಿದ್ದಾರೋ ಜನ ಅದನ್ನು ನಂಬುತ್ತಿಲ್ಲ. ಈ ಬಗೆಯ ಬಿಕ್ಕಟ್ಟುಗಳಿಂದ ನಮಗೆ ಬಿಡುಗಡೆ ಇರುವಂತೆ ತೋರುವುದಿಲ್ಲ. ನಮ್ಮ ವಿದ್ಯಾಭ್ಯಾಸ ಪದ್ಧತಿಯ ತರ್ಕಬದ್ಧ ಅಂತ್ಯವಿದು.

ಚರಿತ್ರೆ, ಸಂಸ್ಕೃತಿ ಪರಂಪರೆಯನ್ನು ಕಂಡುಕೊಳ್ಳುವಾಗ ಭಾರತದಂತಹ ಮೌಖಿಕ ಪರಂಪರೆಯನ್ನು ನಿರ್ಲಕ್ಷಿಸಿಕೊಂಡು ಬಂದರೆ ಅನೇಕ ಬಗೆಯ ತೊಂದರೆಗಳನ್ನು ನಷ್ಟಗಳನ್ನು ಎದುರಿಸಬೇಕಾಗುತ್ತದೆ. ಅನಕ್ಷರಸ್ಥ ಪರಿಸರದಲ್ಲಿ ಲಿಖಿತ ಪರಂಪರೆಯನ್ನೇ ಆಧಾರವಾಗಿಟ್ಟುಕೊಂಡರೆ ಇತಿಹಾಸ ಪಾರ್ಶ್ವಿಕವಾಗುತ್ತದೆ. ಏಕೆಂದರೆ ವೃತ್ತಾಂತಗಳು ತೀರಾ ಕಡಿಮೆ. ಆಡಳಿತ ನಡೆಸುವವರ ಜೊತೆಗೆ ತಮ್ಮನ್ನು ಗುರುತಿಸಿಕೊಂಡ ಅಕ್ಷರಸ್ಥರು ಬಹುಸಂಖ್ಯಾತರಿಂದ ಸಹಜವಾಗಿ ದೂರ ಉಳಿಯುತ್ತಾರೆ. ಸಾಮಾನ್ಯವಾಗಿ ರಾಜರುಗಳು ನಡೆಸಿದ ವೈಭವ, ಯುದ್ಧಗಳು, ಕೆತ್ತಿಸಿದ ಮೂರ್ತಿ ಶಿಲ್ಪಗಳು, ನಡೆಸಿದ ಸಮಾರಂಭಗಳು, ಕಟ್ಟಿಸಿದ ದೇವಸ್ಥಾನಗಳು ಕೊಟ್ಟ ದತ್ತಿ, ದಾನ, ಹೋರಾಡಿ ಮಡಿದ ವೀರ ಯೋಧರ ಉಲ್ಲೇಖಗಳ ವಿವರಗಳಿಗೆ ಮಾತ್ರ ಸೀಮಿತವಾಗುತ್ತವೆ. ದೇವಸ್ಥಾನ ಕಟ್ಟಿಸಿದವರು ವಿವರಗಳಲ್ಲಿ ಬರುತ್ತಾರೆಯೇ ಹೊರತು ಕಟ್ಟಿದವರ ವಿವರಗಳಿಲ್ಲ. ಈ ನಿರ್ಮಾಣದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು ಬೆವರು, ರಕ್ತ ಸುರಿಸಿದವರ ಕುರಿತ ಮಾಹಿತಿ ಅಲಭ್ಯವಾಗುತ್ತದೆ. ಬಹುಸಂಖ್ಯಾತ ಪ್ರಜೆಗಳು ಅಥವಾ ಜನಸಾಮಾನ್ಯರು ಮತ್ತು ಅವರ ಬದುಕು, ಭಾವನೆ,

ಕಲೆ, ಧರ್ಮ, ದೈವ ಇತ್ಯಾದಿಗಳು ಪೂರ್ಣವಾಗಿ ನಿರಾಕರಣೆಗೆ ಒಳಪಟ್ಟಿರುತ್ತವೆ. ಇವರದೇ ಆದಂತಹ ಒಂದು ಚರಿತ್ರೆ ಇದ್ದರೂ ದಾಖಲಾಗದೆ ಹೋಗುತ್ತದೆ.

ಒಂದು ಪ್ರದೇಶದ ಜನ ಅಲ್ಲಿಯ ಸಂಸ್ಕೃತಿಯನ್ನು, ಚರಿತ್ರೆಯನ್ನು, ಪರಂಪರೆಯನ್ನು ಇನ್ನೂ ಸಾಕಷ್ಟು ಅಂಶಗಳನ್ನು ಮೌಖಿಕ ರೂಪದಲ್ಲಿ ಬಳಸಿಕೊಂಡು ಬಂದಿರುತ್ತಾರೆ. ಮಾತು ಆಡಿದರೆ ಆಯ್ತು, ಮುತ್ತು ಒಡೆದರೆ ಹೋಯ್ತು ಎಂಬ ಗಾದೆಯಿಂದ ಜನಪದರ ಮಾತಿನ ಬದ್ಧತೆ ಅಳೆಯಬಹುದು. ಲಿಖಿತ ಮಾಹಿತಿಯು ಒದಗಿಸುವಷ್ಟು ನಿಖರ ಮಾಹಿತಿಯನ್ನು ಮೌಖಿಕ ಪರಂಪರೆ ಒದಗಿಸುತ್ತಾ ಬಂದಿದೆ. ಆನೆ ಬಂತೊಂದಾನೆ ಯಾವೂರಾನೆ ಬಿಜಾಪುರ ಆನೆ. ಇದು ಕೇವಲ ಚಿಕ್ಕ ಮಕ್ಕಳನ್ನು ಸಂತೋಷ ಪಡಿಸಲಿಕ್ಕೆ ಮಾತ್ರ ಹುಟ್ಟಿಕೊಂಡ ಹಾಡಲ್ಲ. ಬಿಜಾಪುರ ಅರಸರ ದಾಳಿಕೋರ, ಅರಾಜಕ ಸ್ಥಳೀಯರ ಅಸಹಾಯಕರ ಪರಿಸ್ಥಿತಿಯ ವಿವರಗಳನ್ನೊದಗಿಸುತ್ತದೆ. ಇತಿಹಾಸದ ಇಂತಹ ಇನ್ನೂ ಅನೇಕ ನೆನಪುಗಳನ್ನು ಮಾತಿನ ಮೂಲಕ ಸುರಕ್ಷಿತವಾಗಿ ರಕ್ಷಿಸಿಕೊಂಡು ಬಂದಿದ್ದಾರೆ.

ಬಹಳ ಕುತೂಹಲದ ಅಂಶವೆಂದರೆ ಕೆಲವು ಸಂದರ್ಭಗಳಲ್ಲಿ ಮೌಖಿಕ ಮತ್ತು ಲಿಖಿತ ಸಾಮಗ್ರಿಗಳಲ್ಲಿ ಸಾಮ್ಯತೆ ಕಂಡುಬರುವುದಿಲ್ಲ. ಲಿಖಿತ ಇತಿಹಾಸಕ್ಕಿಂತ ಭಿನ್ನವಾದ ವಿವರಗಳನ್ನು ಮೌಖಿಕ ಸಾಮಗ್ರಿಗಳು ನೀಡುವುದು. ಆಳುವವರನ್ನು ಕುರಿತು ಶಾಸನಗಳು ಹೇಳುವ ಇತಿಹಾಸ ಮತ್ತು ಅವರನ್ನು ಕುರಿತು ಕಂಠಸ್ಥ ಪರಂಪರೆಯ ಐತಿಹ್ಯಕ್ಕೂ ಮಧ್ಯ ತುಂಬಾ ಅಂತರವಿರುತ್ತದೆ. ಡಾ. ವಿವೇಕ ರೈ ಅವರು ಸ್ಪಷ್ಟವಾಗಿ ಗುರುತಿಸುವಂತೆ ಆಳುವವರ, ಸ್ಥಾಪಿತ ಹಿತಾಸಕ್ತರ ಹತೋಟಿಯಲ್ಲಿರುವ ಲಿಖಿತ ಮಾಧ್ಯಮಗಳು ಪ್ರತಿಪಾದಿಸುವ ವಿಷಯಗಳಿಗೂ ಕಂಠಸ್ಥ ಪರಂಪರೆಯಲ್ಲಿ ದೊರೆಯುವ ಸಂಗತಿಗಳಿಗೂ ಹೊಂದಾಣಿಕೆ ಕಾಣಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಆನೆಗೊಂದಿ ಜನಪದರ ಬದುಕು, ಸಂಸ್ಕೃತಿ, ವೃತ್ತಿ, ಆಚಾರ ವಿಚಾರ, ಆನೆಗೊಂದಿಗಿರುವ ಐತಿಹಾಸಿಕ, ಪೌರಾಣಿಕ ಹಿನ್ನೆಲೆ ಇತ್ಯಾದಿಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದಲ್ಲಿ ಆನೆಗೊಂದಿ ಗ್ರಾಮ ಪರಿಸರವನ್ನು ಐತಿಹಾಸಿಕವಾಗಿ, ಪೌರಾಣಿಕವಾಗಿ, ಸಾಂಸ್ಕೃತಿಕವಾಗಿ, ಜನಪದೀಯವಾಗಿ, ಜನಪದರ ಬದುಕನ್ನು ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಳ್ಳಲಾಗಿದೆ. ಇಲ್ಲಿ ಲಿಖಿತ ಮಾಹಿತಿಯಂತೆ ಕಂಠಸ್ಥ ಪರಂಪರೆಯ ವಿವರಗಳೂ ಸಮೃದ್ಧವಾಗಿ ಸಿಗುತ್ತದೆ. ಈ ಭಾಗದ ಆದಿದೇವತೆಯಾದ ದುರ್ಗಾದೇವಿಯ ವಾಲಿಭಂಡಾರದ ಬಗ್ಗೆ ಐತಿಹ್ಯಗಳು, ಜನಪದ ಹಾಡು, ಸೋಬಾನೆ ಪದಗಳು, ಜಾನಪದದ ಕಣಿಯಂತೆ ಇಲ್ಲಿ ಹೆಪ್ಪುಗಟ್ಟಿವೆ. ಇಂತಹ ಶ್ರೀಮಂತ, ಜೀವಂತ ಸಾಹಿತ್ಯವನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸುವ ಕಾರ್ಯವನ್ನು ಮಾಡಲಾಗಿದೆ.

ಈ ಅಧ್ಯಯನವು ಒಂದು ಗ್ರಾಮ ಅಧ್ಯಯನವಾಗಿರುವುದರಿಂದ ಆನೆಗೊಂದಿ ಗ್ರಾಮವನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆನೆಗೊಂದಿ ಗ್ರಾಮವನ್ನು ಆಯ್ದುಕೊಂಡು ಅಲ್ಲಿಯ ಶಿಲಾಯುಗ, ಸೂಕ್ಷ್ಮ

ಶಿಲಾಯುಗದಿಂದ, ವಿಜಯನಗರ ಪೂರ್ವ ಇತಿಹಾಸ, ವಿಜಯನಗರ ಪತನಾನಂತರದ ಇತಿಹಾಸ ಹೀಗೆ ಕಾಲಗರ್ಭವನ್ನು ಭೇದಿಸಿದಾಗ ಸುಮಾರು ೧೦೦ ವರ್ಷಗಳ ಇತಿಹಾಸ ಆನೆಗೊಂದಿಗೆ ಇದೆಯೆಂದ ಸ್ಥಳೀಯರು ನಂಬಿದ್ದಾರೆ. ಇಂತಹ ಚಾರಿತ್ರಿಕ ಮಹತ್ವವನ್ನು ಪಡೆದ ಒಂದು ಮಹತ್ವಪೂರ್ಣ ಗ್ರಾಮ ಆನೆಗೊಂದಿಯನ್ನು ಇತಿಹಾಸಕಾರರು ದಾಖಲಿಸಿರುವುದು ಕೇವಲ ಐತಿಹಾಸಿಕ ದೃಷ್ಟಿಯಿಂದ ಮಾತ್ರ. ಹಾಗಾಗಿ ಅಲ್ಲಿಯ ಸಮಗ್ರ ಅಧ್ಯಯನದ ಮೂಲಕ ಜಾನಪದ ಅಧ್ಯಯನಕ್ಕೆ ಒಳಪಡಿಸುವ ಮಹತ್ವಕಾಂಕ್ಷೆ ಮೊದಲಿಸಿಂದಲೂ ನನ್ನ ಮನದಾಳದಲ್ಲಿತ್ತು. ಅಲ್ಲಿಯ ಪರಿಸರ, ಗ್ರಾಮ ಜೀವನ, ದೈವಗಳು, ಜನಪದ ಸಾಹಿತ್ಯ, ಕ್ರೀಡೆ, ಕಸುಬು, ಕುಟುಂಬ, ಜಾತಿ ಪದ್ಧತಿ, ಆಚರಣೆಗಳು, ವಿಧಿನಿಷೇಧಗಳು, ಕೃಷಿ ಸಮುದಾಯದ ರಾಶಿಪೂಜೆ, ಭೂಮಿ ಪೂಜೆ, ಸರಗ ಇನ್ನೂ ಮುಂತಾದ ವಿಶಿಷ್ಟ ಆಚರಣೆಗಳು ಜನಪದರ ಗಮನವನ್ನು ಸೆಳೆದಿವೆ. ಆನೆಗೊಂದಿಯ ದುರ್ಗಾದೇವಿ ಮತ್ತು ರಂಗನಾಥಸ್ವಾಮಿ ಸುತ್ತಮುತ್ತಲಿನ ಗ್ರಾಮಗಳ ಜನಪದರ ದೈವವಾಗಿ ಕಾಣಿಸಿಕೊಂಡಿರುವುದರಿಂದ ಈ ದೈವಗಳೊಂದಿಗಿರುವ ಭಕ್ತರ ವಿಶಿಷ್ಟವಾದ, ಸಾಂಸ್ಕೃತಿಕವಾದ ಭಕ್ತಿಯ ಪರಾಕಾಷ್ಠೆ ಮತ್ತು ಅನನ್ಯತೆಯನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಇಲ್ಲಿ ನಡೆಯುವ ರಂಗನಾಥಸ್ವಾಮಿ ಜಾತ್ರೆ ಮತ್ತು ಜನಪದರು ಕಂಡುಕೊಳ್ಳುವ ಭಕ್ತಿಯ ಭಾವನಾತ್ಮಕ ಸಂಬಂಧದ ಪರಿಯಾಗಿ ವಿಠಾಯಿ ಅಂಗಡಿ ಕುಂಕುಮ, ಅರಿಷಿಣ, ಬಳೆಗಳನ್ನು ಖರೀದಿಸುವ ಒಂದು ದೈವಿಕ ಭಾವನೆ ಇರುವ ಒಂದು ಸಂಪೂರ್ಣ ಗ್ರಾಮವಾಗಿ ಆನೆಗೊಂದಿಯನ್ನು ವಿಸ್ತೃತ ಅಧ್ಯಯನಕ್ಕೆ ಒಳಪಡಿಸಿ ಅಧ್ಯಯನ ಕೈಗೊಳ್ಳುವ ವ್ಯಾಪ್ತಿಯನ್ನು ಈ ಅಧ್ಯಯನವು ಒಳಗೊಂಡಿದೆ.

### ೧.೩. ಅಧ್ಯಯನದ ಮಹತ್ವ

ಅಕ್ಷರ ಇತಿಹಾಸ ಹೇಳುವ ವಿಚಾರಗಳಿಗಿಂತ ಭಿನ್ನವಾದ ವಿಚಾರ ಸರಣಿಯೊಂದು ಮೌಖಿಕ ರೂಪದಲ್ಲಿ ಜಾಗೃತಗೊಂಡಿರುತ್ತದೆ. ಇವುಗಳಲ್ಲಿ ಮೌಖಿಕ ವಿಚಾರಗಳು ನಿರಾಧಾರವೆಂಬ ಕಾರಣಕ್ಕೆ ಅಶಾಶ್ವತ ಎಂಬ ವಾದ ಪೂರ್ಣವಾಗಿ ಒಪ್ಪಿಕೊಳ್ಳಲಾಗುವುದಿಲ್ಲ. ಕಂಠಸ್ಥ ಪರಂಪರೆಯಲ್ಲಿ ಜನಪದರ ಸ್ಮರಣೆಯ ಭಾಗವಾಗಿ ಉಳಿದುಕೊಂಡು ಬಂದಿರುತ್ತದೆ. ಹೀಗಾಗಿ ನಮ್ಮ ಮುಂದೆ ಆನೆಗೊಂದಿ ತುಂಬಾ ಮಹತ್ವವಾಗಿ ಕಂಡುಬರುತ್ತದೆ. ಆನೆಗೊಂದಿ ಜನಪದರು ತಮ್ಮ ಇತಿಹಾಸವನ್ನು ತಮ್ಮದೇ ರೀತಿಯಲ್ಲಿ ನಿರ್ವಚಿಸಿಕೊಂಡಿರುತ್ತಾರೆ. ಹಾಗೆ ನಿರ್ವಚಿಸಿಕೊಂಡದ್ದನ್ನು ಅವರು ಕತೆ ಎಂದು ಹೇಳಿಕೊಳ್ಳುತ್ತಾರೆ. ಜನರು ನಿರೂಪಿಸುವ ಇಂತಹ ಕತೆಗಳಿಗೆ ಈಚಿನ ದಿನಗಳಲ್ಲಿ ವಿದ್ವಾಂಸರು ಐತಿಹ್ಯ ಎಂಬ ಪದ ಬಳಸಿಕೊಂಡು ಬಂದಿರುತ್ತಾರೆ. ಇತಿಹಾಸದ ನಿರೂಪಕರು ಲಿಖಿತ ದಾಖಲೆಗಳನ್ನು ಆಧರಿಸಿಕೊಂಡು ಒಂದು ಕಾಲದಲ್ಲಿ ನಡೆದ ಸತ್ಯಸಂಗತಿಯನ್ನು ತಾವು ಕಂಡಂತೆ ನಿರೂಪಿಸಿದರೆ, ಐತಿಹ್ಯದ ನಿರೂಪಕನು ಮೌಖಿಕ ಪರಂಪರೆಯ ದಾಖಲೆಗಳನ್ನು ಆಧರಿಸಿಕೊಂಡು ಒಂದು ಕಾಲದಲ್ಲಿ ನಡೆದ ಸತ್ಯಸಂಗತಿಯನ್ನು ತಾವು ಕಂಡಂತೆ ನಿರೂಪಿಸುತ್ತಾರೆ. ಲಿಖಿತ ದಾಖಲೆಗಳನ್ನು ಲಿಖಿತ ರೂಪದಲ್ಲಿ ಮರುಮಂಡನೆ ಮಾಡಿದರೆ, ಇನ್ನೊಂದು ಕಂಠಸ್ಥ ದಾಖಲೆಗಳನ್ನು ಮೌಖಿಕ ರೂಪದಲ್ಲಿ ಮಂಡಿಸುತ್ತದೆ. ಆಧಾರವಿಲ್ಲದೆ ಎರಡೂ ಬಗೆಯ ನಿರೂಪಣೆಗಳು ಸೃಷ್ಟಿಯಾಗಲಾರವು. ಅಕ್ಷರ ಇತಿಹಾಸ

ಮತ್ತು ಮೌಖಿಕ ಇತಿಹಾಸಗಳು ಮೇಲ್ನೋಟಕ್ಕೆ ನೇರ ಸಂಬಂಧವಿರುವಂತೆ ಕಂಡರೂ ಆಳವಾಗಿ ನೋಡಿದಾಗ ಅವುಗಳ ಮಧ್ಯದಲ್ಲಿರುವ ವ್ಯತ್ಯಾಸ ಗೋಚರವಾಗುತ್ತದೆ.

ಈ ಅರಿವಿನಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಆನೆಗೊಂದಿಯ ಬಗೆಗಿನ ಮೌಖಿಕ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಅತ್ಯಂತ ಮಹತ್ವಪೂರ್ಣವೆನಿಸಿದ ಆನೆಗೊಂದಿಯ ಬಗೆಗಿನ ಸಮೃದ್ಧವಾದ ಜನಪದ ಸಾಹಿತ್ಯವನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಆನೆಗೊಂದ ಗ್ರಾಮವನ್ನು ನನ್ನ ಅಧ್ಯಯನಕ್ಕಾಗಿ ಬಳಸಿಕೊಳ್ಳುವಾಗ ಮೊದಮೊದಲು ಅಲ್ಲಿಯ ವಿಷಯ ವಸ್ತುಗಳು ಬಹಳ ಸರಳವೆನ್ನುವಂತೆ ಕಂಡರೂ ಕೂಡಾ ಬರುಬರುತ್ತ ನನಗೆ ಅತ್ಯಂತ ಮೌಲ್ಯಯುತವಾದ ಅಧ್ಯಯನಕ್ಕೆ ಗುರಿಪಡಿಸಲೇಬೇಕಾದ ವಿಷಯವಸ್ತುವಾಗಿ ನನಗೆ ಕಂಡುಬಂದಿದೆ. ನನ್ನ ಈ ಅಧ್ಯಯನದಲ್ಲಿ ಆನೆಗೊಂದಿ ಗ್ರಾಮವನ್ನು, ಅಲ್ಲಿಯ ಜನಪದರನ್ನು, ಅಲ್ಲಿಯ ಜಾತ್ರೆ, ಹಬ್ಬ ಹರಿದಿನಗಳನ್ನು, ಐತಿಹಾಸಿಕ ಕೋಟೆ ಕೊತ್ತಲಗಳನ್ನು ಆನೆಗೊಂದಿ ಪರಿಸರದಲ್ಲಿರುವ ದೈವಗಳು ಮತ್ತು ಭಕ್ತರ ಅವಿನಾವಭಾವ ಸಂಬಂಧಗಳನ್ನು, ಅಲ್ಲಿಯ ಮೌಖಿಕ ಚರಿತ್ರೆಯನ್ನು ಆನೆಗೊಂದಿ ಬಗೆಗಿರುವ ಇತಿಹಾಸ, ಐತಿಹ್ಯ, ಆನೆಗೊಂದಿ ಜನಪದರಿಗೂ ಮತ್ತು ತುಂಗಭದ್ರಾ ನದಿಗೆ ಇರುವ ಪೂಜ್ಯ ಭಾವನೆಯನ್ನು, ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ನಾವು ನೋಡಿದಾಗ ಅತ್ಯಂತ ಮಹತ್ವದ್ದಾಗಿ ಕಂಡುಬಂದಿದೆ. ಹಾಗಾಗಿ ಆನೆಗೊಂದಿ ಜಾನಪದ ಕುರಿತ ಅಧ್ಯಯನವು ಅತ್ಯಂತ ಮಹತ್ವಪೂರ್ಣ ಅಧ್ಯಯನವೆಂದು ಆನೆಗೊಂದಿ ಗ್ರಾಮದ ಬಗ್ಗೆ ಬೆಳಕು ಚೆಲ್ಲುವ ಕಾರ್ಯವನ್ನು ಈ ಅಧ್ಯಯನದ ಮೂಲಕ ಮಾಡಲಾಗಿದೆ. ಈ ಅಧ್ಯಯನವು ಕೇವಲ ಸೈದ್ಧಾಂತಿಕ ಅಧ್ಯಯನವಲ್ಲದೆ ಪ್ರಾಯೋಗಿಕ ಅಧ್ಯಯನವನ್ನಾಗಿ ಮಾಡಿಕೊಂಡು ಇಡೀ ಗ್ರಾಮವನ್ನು ಸಂಪೂರ್ಣವಾಗಿ ಕ್ಷೇತ್ರಕಾರ್ಯದ ಮೂಲಕ ಅಲ್ಲಿಯ ಇತಿಹಾಸವನ್ನು, ಜನಸಂಖ್ಯೆಯನ್ನು ವಿದ್ಯಾವಂತರ ಮತ್ತು ಅವಿದ್ಯಾವಂತರ ಇತ್ಯಾದಿ ವಿವರಗಳನ್ನೊಳಗೊಂಡ ಇಡೀ ಗ್ರಾಮದ ಸ್ವವಿವರವನ್ನು ಕ್ಷೇತ್ರಕಾರ್ಯದ ಮೂಲಕ ಮಹತ್ವಪೂರ್ಣವಾದ ಆನೆಗೊಂದಿಯ ಸಮಗ್ರತೆಯನ್ನು, ಅದರ ಮೌಲ್ಯಯುತವಾದ ಮಹತ್ವವನ್ನು ಈ ಪ್ರಬಂಧದ ಮೂಲಕ ಕಂಡುಕೊಳ್ಳಲಾಗಿದೆ.

# ಅಧ್ಯಾಯ : ಎರಡು

# ಆನೆಗೊಂದಿ ಗ್ರಾಮದ ಸ್ವವಿವರ

# ಅಧ್ಯಾಯ ೨

# ಆನೆಗೊಂದಿ ಗ್ರಾಮದ ಸ್ಥವಿವರ

ಆನೆಗೊಂದಿಯು ಗಂಗಾವತಿ ತಾಲೂಕಿನ ಕೊಪ್ಪಳ ಜಿಲ್ಲೆಗೆ ಸೇರಿದ ಪ್ರದೇಶ. ತಾಲೂಕು ಕೇಂದ್ರದಿಂದ ಸುಮಾರು ೧೨ ಕಿ.ಮೀ. ದೂರದ ದಕ್ಷಿಣಕ್ಕಿದೆ. ತುಂಗಭದ್ರ ನದಿಯ ಉತ್ತರ ದಂಡೆಯ ಮೇಲಿದೆ. ಪ್ರಕೃತಿಯ ರಮಣೀಯವಾದ ಬೆಟ್ಟಸಾಲು, ಹಾಸುಗಲ್ಲು ಹಾಗೂ ಹೆಬ್ಬಂಡೆಗಳಿಂದ ಆವೃತ್ತಗೊಂಡಿದೆ. ಈ ಪ್ರದೇಶ ಆದಿಮಾನವನ ವಾಸಸ್ಥಾನವಾಗಿತ್ತು. ಇದಕ್ಕೆ ಸಂಬಂಧಿಸಿದಂತೆ ಈ ಪ್ರದೇಶದ ನದಿ ತೀರ, ಬೆಟ್ಟ ಗುಡ್ಡಗಳಲ್ಲಿ ಇಂದಿಗೂ ದೊರಕುವ ಬೃಹತ್ ಗವಿಗಳು, ಗವಿಗಳ ಬಂಡೆಗಳ ಇಳಿಜಾರಿನಲ್ಲಿ ಆದಿಮಾನವನು ಚಿತ್ರಿಸಿದ ಕೆಂಪು ಹಾಗೂ ಬಿಳಿಯ ಬಣ್ಣದ ಪ್ರಾಣಿಪಕ್ಷಿ ಮನುಷ್ಯನ ಬೇಟೆಯ ಚಿತ್ರಗಳು ಹೇರಳವಾಗಿ ಕಂಡುಬರುತ್ತವೆ. ದುರ್ಗಾ ಬೆಟ್ಟದ ತಪ್ಪಲು, ಬೆಟ್ಟಕ್ಕೆ ಸಾಗುವ ದಾರಿಯ ಕಲ್ಲುಗುಂಡುಗಳಲ್ಲಿ ಆದಿಮಾನವರು ಬರೆದ ಗೂಳಿ ಹಾಗೂ ಜಿಂಕೆ ನವಿಲಿನ ಚಿತ್ರಗಳು ಈ ಪ್ರದೇಶ ಆದಿಮಾನರ ನೆಲೆ ಎಂಬುದಕ್ಕೆ ಸಾಕ್ಷಿಯಾಗಿವೆ. ಆನೆಗೊಂದಿ ಮನುಕುಲದ ಚಾರಿತ್ರಿಕ ವಿಚಾರಗಳನ್ನು ಹೊಂದಿರುವ ಹೆಮ್ಮೆಯ ಸ್ಥಳವಾಗಿ ಕಂಡುಬರುತ್ತದೆ. ಆನೆಗೊಂದಿಯ ಭಾರತೀ ಪುರಾಣ, ಶಿವಪುರಾಣ, ವಿಷ್ಣು ಪುರಾಣ, ಜೈನ ಪುರಾಣಾದಿಯಾಗಿ ಹಲವಾರು ಪುರಾಣಗಳು ಈ ಸ್ಥಳದ ವಿಶೇಷತೆಯನ್ನು ಎತ್ತಿ ತೋರಿಸುತ್ತವೆ. ತ್ರೇತಾಯುಗದಲ್ಲಿ ಆನೆಗೊಂದಿಯನ್ನು ಕಿಷ್ಕಿಂದೆ ಎಂದು ಕರೆಯಲಾಗಿತ್ತು. ಈ ರಾಜ್ಯಕ್ಕೆ ವಾಲಿಸುಗ್ರೀವರೇ ದೊರೆಗಳಾಗಿದ್ದು ವಾಲಿ ಭಂಡಾರವೇ ಇಲ್ಲಿ ಇದ್ದುದಾಗಿ, ಶ್ರೀರಾಮನ ಭಂಟ ಆಂಜನೇಯನ ಜನ್ಮಸ್ಥಾನ ಇದಾಗಿತ್ತು ಎಂಬುವುದು ಇತಿಹಾಸದಿಂದ ತಿಳಿದುಬರುತ್ತದೆ. ಇಷ್ಟೆಲ್ಲಾ ಮಹತ್ವಪೂರ್ಣ ಅಂಶಗಳಿಂದ ಕೂಡಿದ ಗ್ರಾಮವಾಗಿ, ಸುಸಂಸ್ಕೃತ ಸಂಸ್ಕೃತಿಯನ್ನು ಹೊಂದಿರುವ ಗ್ರಾಮವಾಗಿ, ಪ್ರವಾಸಿಗರ ಕೇಂದ್ರವಾಗಿ ರೂಪ ತಳೆದಿದೆ. ಆನೆಗೊಂದಿಯ ಜನಸಂಖ್ಯೆ ೨೦೦೧ರ ಜನಗಣತಿಯ ಪ್ರಕಾರ ಪುರುಷರ ಸಂಖ್ಯೆ ೧೭೪೦, ಸ್ತ್ರೀಯರ ಸಂಖ್ಯೆ ೧೭೫೭ ಇದ್ದು ಅದರಲ್ಲಿ ಅಕ್ಷರಸ್ಥರ ಸಂಖ್ಯೆ, ಪುರುಷರು ೯೪೨, ಸ್ತ್ರೀಯರು ೯೩೬, ಅದೇ ರೀತಿಯಾಗಿ ಅನಕ್ಷರಸ್ಥರ ಸಂಖ್ಯೆ, ಪುರುಷರು ೭೯೮ ಇದ್ದು, ಸ್ತ್ರೀಯರು ೧೧೨೧ ಜನ ಅನಕ್ಷರಸ್ಥರು ಇರುತ್ತಾರೆ. ಆನೆಗೊಂದಿ ಗ್ರಾಮದ ಭೂಮಿಯ ವಿಸ್ತೀರ್ಣ ಈ ಕೆಳಗಿನಂತಿದೆ.

| | | |
|---|---|---|
| ಕೃಷಿ ಭೂಮಿ | ೨೧೪ | ಹೆಕ್ಟೇರ್‌ಗಳಿವೆ. |
| ಅರಣ್ಯ ಭೂಮಿ | ೪೦೫.೯ | ಹೆಕ್ಟೇರ್‌ಗಳಿವೆ. |
| ನೀರಾವರಿ ಭೂಮಿ | ೫೦ | ಹೆಕ್ಟೇರ್‌ಗಳಿವೆ. |
| ಒಣಭೂಮಿ (ಗ್ರಾಮಠಾಣಾ) | ೬.೫ | ಹೆಕ್ಟೇರ್‌ಗಳಿವೆ. |
| ಭೌಗೋಳಿಕ ಒಟ್ಟು ವಿಸ್ತೀರ್ಣ | ೭೧೫ | ಹೆಕ್ಟೇರ್‌ಗಳು ಆಗಿರುತ್ತವೆ. |

ಆನೆಗೊಂದಿಯ ಪ್ರಮುಖ ಬೆಳೆಗಳೆಂದರೆ, ಭತ್ತ, ಬಾಳೆ, ಶೇಂಗಾ ಮತ್ತು ಕಬ್ಬು ಆಗಿರುತ್ತದೆ. ಆನೆಗೊಂದಿ ಗ್ರಾಮದ ಮನೆಗಳ ವಿನ್ಯಾಸವೆಂದರೆ, ಆನೆಗೊಂದಿ ಪರಿಸರದಲ್ಲಿ ಸಾಮಾನ್ಯವಾಗಿ ಬೆಟ್ಟಗುಡ್ಡಗಳಿರುವುದರಿಂದ ಇಲ್ಲಿನ ಮನೆಗಳು ಕಲ್ಲಿನಿಂದ, ಇಟ್ಟಿಗೆಯಿಂದ ರಚಿಸಲ್ಪಟ್ಟವುಗಳಾಗಿರುತ್ತವೆ. ಕೆಲವು ಮನೆಗಳ ಮೇಲ್ಗಡೆ ಮೇಲ್ಮುದ್ದಿ, ಮಂಗಳೂರು ಹಂಚು, ಸಿಮೆಂಟು ತಗಡು ಅಥವಾ ಆರ್.ಸಿ.ಸಿ. ಹಾಕುವ ಸಂಪ್ರದಾಯವಿದೆ. ಚಪ್ಪರಕ್ಕೆ ಅಥವಾ ಗುಡಸಲಿಗೆ ಕಾಚಿ ಕಡ್ಡಿ ಹುಲ್ಲು ಅಥವಾ ಹೊಳೆಯ ಆಪು ಇವುಗಳನ್ನು ಬಳಸುವ ವಾಡಿಕೆ ಇದೆ. ಮೇಲ್ಮುದ್ದಿ ಹಾಕಿದ ಮನೆಗೆ ಸೂರಿಗೆ ಸೌಳು ಹಾಕುವ ರೂಢಿಗತವಾದ ಪದ್ಧತಿಯು ಕೂಡ ಇದೆ. ಆನೆಗೊಂದಿಯಲ್ಲಿ ವಾಸಿಸುವ ಒಟ್ಟು ಕುಟುಂಬಗಳ ಸಂಖ್ಯೆ ೭೬೮ ಇದೆ. ಬಡತನದಿಂದ ಬಳಲುವ ಕುಟುಂಬಗಳೇ ಅಧಿಕ. ಆನೆಗೊಂದಿಯ ಆರ್ಥಿಕ ಸ್ಥಿತಿಯನ್ನು ಗಮನಿಸಿದಾಗ ಕೃಷಿಕರು ೧೦೭೩ ಜನ ಇದ್ದರೆ, ಕೂಲಿಕಾರ್ಮಿಕರು ೧೦೮೭ ಜನರಿದ್ದಾರೆ. (೨೦೦೧ರ ಜನಗಣತಿಯ ಪ್ರಕಾರ) ಆದರೂ ಕೂಡಾ ನಗರದಲ್ಲಿರುವಂತೆ ಆನೆಗೊಂದಿ ಗ್ರಾಮದಲ್ಲಿಯೂ ನಿರುದ್ಯೋಗಿಗಳಿದ್ದಾರೆ. ನಿರುದ್ಯೋಗಿಗಳ ಸಂಖ್ಯೆ ೧೯೧೦ ಇರುತ್ತದೆ. ಶೈಕ್ಷಣಿಕವಾಗಿ ಆನೆಗೊಂದಿಯನ್ನು ಗುರ್ತಿಸಿದಾಗ ಅಂಗನವಾಡಿ ಕೇಂದ್ರ ೪ ಇದ್ದು ಅಭ್ಯಾಸಿಸುವ ಮಕ್ಕಳ ಸಂಖ್ಯೆ ೨೫೫ ಇರುತ್ತದೆ. ಸರಕಾರಿ ಮಾದರಿಯ ಹಿರಿಯ ಪ್ರಾಥಮಿಕ ಶಾಲೆ, ಸರಕಾರಿ ಪ್ರೌಢಶಾಲೆಗಳು ಇಲ್ಲಿದ್ದು ಆನೆಗೊಂದಿ, ಕಡೆ ಬಾಗಿಲು, ಚಿಕ್ಕರಾಂಪುರ, ಬಸವನದುರ್ಗ ಮುಂತಾದ ಗ್ರಾಮಗಳ ಮಕ್ಕಳು ಇಲ್ಲಿ ಅಭ್ಯಾಸ ಮಾಡುತ್ತಾರೆ. ಆನೆಗೊಂದಿ ಗ್ರಾಮದಲ್ಲಿ ಎಲ್ಲಾ ಸಮುದಾಯಗಳು ಒಟ್ಟುಗೂಡಿ ಸಾಮರಸ್ಯದ ಜೀವನವನ್ನು ಸಾಗಿಸುತ್ತಿದ್ದಾರೆ. ಆನೆಗೊಂದಿಯಲ್ಲಿ ವಾಸಿಸುವ ಜಾತಿಧರ್ಮಗಳೆಂದರೆ, ಹಿಂದೂ, ಮುಸ್ಲಿಂ, ಕ್ರೈಸ್ತ ಧರ್ಮಕ್ಕೆ ಸೇರಿದವರು ಮಾತ್ರ. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವವರೆಂದರೆ ಹಿಂದೂ ಧರ್ಮೀಯರು. ಜಾತಿವಾರು ಲೆಕ್ಕವನ್ನು ತೆಗೆದುಕೊಂಡಾಗ ಗಂಗಾಮತಸ್ತ (ಕಬ್ಬೇರು), ಕ್ಷತ್ರಿಯರು, ವೀರಶೈವರು, ನಾಯಕರು, ಬ್ರಾಹ್ಮಣರು, ವೈಶ್ಯರು ಮತ್ತು ಕುರುಬರನ್ನೊಳಗೊಂಡಂತೆ ಇತರ ಜಾತಿ ಸಮುದಾಯದವರು ಆನೆಗೊಂದಿ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ.

### ೨.೧. ಗ್ರಾಮದ ಪ್ರಾಚೀನತೆ, ಹೆಸರಿನ ಮೂಲ

ತುಂಗಭದ್ರ ನದಿಯ ಎಡದಂಡೆಯ ಮೇಲೆ ಇರುವ ಆನೆಗೊಂದಿಯು ಪ್ರಸಿದ್ಧ ವಿಜಯನಗರದ ಆರಂಭ ಕಾಲದಲ್ಲಿ ಪ್ರಮುಖ ಸ್ಥಳವಾಗಿತ್ತು. ಅಂತೆಯೇ ನ್ಯೂನಿಜ್ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಹೇಳಿದ್ದಾನೆ. ವಿಜಯನಗರದ ಅರಸರು ಇಲ್ಲಿ ಆನೆಗಳನ್ನು ಕಟ್ಟುತ್ತಿದ್ದರಿಂದ ಇದಕ್ಕೆ ಆನೆಗುಂದಿ ಎಂದು ಹೇಳಲಾಗುತ್ತಿದೆ. ಆದರೆ ಶಾಸನಗಳಲ್ಲಿ ಇದನ್ನು ಕುಂಜರಕೋಣ, ಹಸ್ತಿನಾವತಿ ಎಂತಲೂ ಕರೆಯಲಾಗುತ್ತದೆ. ವಿಜಯನಗರ ಪತನಾನಂತರ ಆನೆಗೊಂದಿಯನ್ನು ನರಪತಿ ಸಂಸ್ಥಾನವೆಂದು ಸಹ ಕರೆಯುತ್ತಿದ್ದರು. ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಮನೆತನಗಳು ಇಲ್ಲಿ ಆಳಿ ಹೋಗಿವೆ. ವಿದೇಶಿ ಪ್ರವಾಸಿಗರಾದ ಹ್ಯೂಯೆನ್‌ತ್ಸ್ಯಾಂಗನು ವಿಜಯನಗರ ಇತಿಹಾಸಕ್ಕಿಂತ ೬೦೦ ವರ್ಷಗಳ ಹಿಂದಿನ ಇತಿಹಾಸವನ್ನು ಆನೆಗೊಂದಿಯು ಹೊಂದಿದೆ ಎಂದು ತಮ್ಮ ಪ್ರವಾಸ ಕಥನದಲ್ಲಿ ಬರೆದಿದ್ದಾರೆ.

ತ್ರೇತಾಯುಗದಲ್ಲಿ ಆನೆಗೊಂದಿಯನ್ನು ರಾಮಾಯಣ ಕಾಲದ ಕಿಷ್ಕಿಂದೆ ಎಂದು ಕರೆಯಲಾಗುತ್ತಿತ್ತು. ಇಲ್ಲಿ ಕಾಣಸಿಗುವ ಅಂಜನಾದ್ರಿ ಬೆಟ್ಟ, ವಾಲಿ ದಿಬ್ಬ, ವಾಲಿಕಿಲ್ಲಾ, ವಾಲಿಭಂಡಾರ, ಶಬರಿಗುಹೆ, ಸೀತಾಸೆರಗು, ಹನುಮನ ಸೆಳವು ಮುಂತಾದ ಸ್ಥಳಗಳು ಈ ಮಾತಿಗೆ ಪುಷ್ಟಿಕೊಡುತ್ತವೆಂಬುದು ಇತಿಹಾಸ ತಜ್ಞರ ಅಭಿಪ್ರಾಯ. ವಿಜಯಧ್ವಜನ ಮೊಮ್ಮಗನಾದ ನರಸಿಂಹ ದೇವರಾಯನು ಕ್ರಿ.ಶ. ೧೧೭೯ ರಿಂದ ೧೨೪೬ರವರೆಗೆ ಸುಮಾರು ದೀರ್ಘಕಾಲದವರೆಗೆ ರಾಜ್ಯವಾಳುತ್ತ, ಕೋಟೆಕಟ್ಟಲು ಪ್ರಾಮುಖ್ಯತೆಯನ್ನು ಕೊಡುತ್ತ, ಆನೆಗೊಂದಿ ಸುತ್ತಮುತ್ತಾ ಹೆಬ್ಬಾಗಿಲುಗಳನ್ನು ನಿರ್ಮಿಸಿ, ದ್ವಾರಗಳನ್ನು ನಿರ್ಮಿಸಿ ಕಾವಲುಗಾರರನ್ನು ನೇಮಕ ಮಾಡಿದ ಬಗ್ಗೆ ಇತಿಹಾಸದಿಂದ ತಿಳಿಯಬಹುದಾಗಿದೆ. ನಾಗರೀಕ ಸೌಕರ್ಯ, ರಾಜ್ಯದ ಸ್ವಚ್ಛತೆಗೆ ವಿಶೇಷ ಗಮನ ಕೊಟ್ಟಿದ್ದಾಗಿ ಹಾಗೂ ವಿಫುಲವಾದ ಸಂಪತ್ತನ್ನು ಗಳಿಸಿದ್ದಾಗಿ ಈ ವಿಫುಲವಾದ ಸಂಪತ್ತಿನ ಸಂಕೇತವೇ ಎರಡು ಆನೆಗಳ ಮಧ್ಯ ಗಜಲಕ್ಷ್ಮಿ ಇದ್ದು ಗಜ ಎಂದರೆ 'ಆನೆ', 'ಗುಂದಿ' ಎಂದರೆ ಕಟ್ಟಿ ಹಾಕುವುದು ಎಂಬ ಅರ್ಥದಿಂದಾಗಿ ಆನೆಗುಂದಿಯೆಂಬ ಹೆಸರು ಬಂದಿರಬೇಕೆಂದು ಊಹಿಸಲಾಗಿದೆ. ಶ್ರೀರಾಜ ನರಸಿಂಹ ದೇವರಾಯನ ಕಾಲದಲ್ಲಿ ಹಿಮಾಚಲ ನಿವಾಸಿಯಾದ ಶ್ರೀ ವೇದಗುಪ್ತನು ಚಿಂತಾಮಣಿ ಮಠದ ಮೂಲ ಪುರುಷನಾಗಿದ್ದು, ಈತನು 'ಕಲ್ಯಾಣಪುರ'ವೆಂಬ ಹೆಸರು ಬದಲಾಯಿಸಿ ಕ್ರಿ.ಶ. ೧೧೭೯ ಹಾಗೂ ೧೨೪೬ರ ಮಧ್ಯ ಭಾಗದಲ್ಲಿ ಆನೆಗೊಂದಿಯೆಂದು ನಾಮಕರಣ ಮಾಡಿದ್ದುದಾಗಿ ಸ್ಕಂದ ಪುರಾಣದಲ್ಲಿ ವ್ಯಕ್ತವಾಗಿದೆ.

### ೨.೨. ಭೌಗೋಳಿಕ ಹಾಗೂ ನೈಸರ್ಗಿಕ ಮಾಹಿತಿ

ದಖ್ಖನ್ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕ ರಾಜ್ಯದ ಪಶ್ಚಿಮ ಬಯಲು ಪ್ರದೇಶದಲ್ಲಿ ಆನೆಗೊಂದಿಯು ಸಮಾವೇಶವಾಗುತ್ತದೆ. ಭೂ ವೈಜ್ಞಾನಿಕವಾಗಿ ಈ ಪ್ರದೇಶವನ್ನು ಒಳಗೊಂಡಂತೆ ದಕ್ಷಿಣ ಭಾರತದ ಪ್ರಸ್ಥಭೂಮಿಯನ್ನು ಅತ್ಯಂತ ಪ್ರಾಚೀನ ನಿರ್ಮಾಣವೆಂದೂ ಆದಿಕಲ್ಪ ಯುಗಕ್ಕೆ ಸೇರಿದುದೆಂದು ಸುಮಾರು ಮೂರುನೂರು ಕೋಟಿ ವರ್ಷ ಹಿರಿಯದೆಂದು ಭೂವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಸಾಗರದ ಭಾಗವಾಗಿದ್ದ ಈ ಪ್ರದೇಶ ಮೇಲೆದ್ದು ಕಾಲಾಂತರದಲ್ಲಿ ಹಲವಾರು ಮಾರ್ಪಾಡು ಹೊಂದಿ ಸಸ್ಯ ಹಾಗೂ ಪ್ರಾಣಿಗಳ ವಸತಿಗೆ ತಕ್ಕುದಾಗಿ ಇಂದಿನ ಸ್ಥಿತಿಗೆ ಬಂದಿದೆ. ಈ ಭೂಭಾಗವು ಸಮುದ್ರ ಪಾತಳಿಯಿಂದ (M.S.L.) ೨೩೫೬ ಅಡಿ ಎತ್ತರದಲ್ಲಿದೆ. ಈ ಪ್ರದೇಶವು ಆಯಕಟ್ಟಿನದಾಗಿದ್ದು ಬೆಟ್ಟಗುಡ್ಡಗಳು ಫಲವತ್ತಾದ ನೆಲ, ಸಮೃದ್ಧ ಜಲ, ಸಸ್ಯ, ಪ್ರಾಣಿ ಸಂಪತ್ತಿನಿಂದ ಕೂಡಿದೆ. ಆನೆಗೊಂದಿಯು ಗಂಗಾವತಿ ತಾಲೂಕಿನಲ್ಲಿ ಬರುವ ಗ್ರಾಮವಾಗಿದ್ದು, ೨೧೪ ಹೆಕ್ಟೇರ್ ಕೃಷಿ ಭೂಮಿ, ४೦೫.೯ ಹೆಕ್ಟೇರ್ ಅರಣ್ಯ, ೫೦ ಹೆಕ್ಟೇರ್ ನೀರಾವರಿ, ೬.೫ ಹೆಕ್ಟೇರ್ ಒಣಭೂಮಿ ಒಟ್ಟು ೭೧೫ ಹೆಕ್ಟೇರ್ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಆನೆಗೊಂದಿಯ ಪಶ್ಚಿಮದುದ್ದಕ್ಕೂ ತುಂಗಭದ್ರಾ ನದಿಯು ಹರಿದಿದೆ.

### ೨.೩. ಗ್ರಾಮದಲ್ಲಿರುವ ಕೋಟೆ

ಆನೆಗೊಂದಿಯ ಕೋಟೆಯು ಸು. ೫೦ ಚದರ ಕಿ.ಮೀ. ವ್ಯಾಪ್ತಿ ಹೊಂದಿದ್ದು, ಸುರಕ್ಷಿತ ಒಂಬತ್ತು ಮಹಾ ಹೆಬ್ಬಾಗಿಲುಗಳಿಂದ ಕೂಡಿದ್ದು, ಆನೆಗೊಂದಿ ಪಶ್ಚಿಮಕ್ಕೆ ಕೋಟೆ ಪ್ರಾರಂಭವಾಗಿ ಉತ್ತರ ಮಾರ್ಗವಾಗಿ

ದಕ್ಷಿಣಕ್ಕೆ ಬಂದು ಪೂರ್ವದಿಂದ ಎತ್ತರದವರೆಗೂ ವ್ಯಾಪಿಸಿದೆ. ಈ ಕೋಟೆಯ ಸುತ್ತಳತೆ ಸುಮಾರು ೧೦ ಕಿ.ಮೀ. ವ್ಯಾಪಿಸಿದೆ. ಆನೆಗೊಂದಿ ರಾಜರು ವಾಸ ಮಾಡುವ ಸ್ಥಳ ಸುಮಾರು ೪ ಕಿ.ಮೀ. ವ್ಯಾಪ್ತಿ ಇದೆ. ಈ ರಾಜರ ಸುತ್ತ ಐದು ಕಿ.ಮೀ. ವ್ಯಾಪ್ತಿಯಲ್ಲಿ ರಾಜಪುರೋಹಿತರು ವಾಸವಾಗಿದ್ದರು. ಒಂಬತ್ತು ಮಹಾದ್ವಾರಗಳಲ್ಲಿ ಕಾವಲುಗಾರರ ವ್ಯವಸ್ಥೆ ಇದ್ದು ಆನೆಗೊಂದಿ ಉತ್ತರಕ್ಕೆ ಒಂದು ಹೆಬ್ಬಾಗಿಲು ಇದ್ದು ಇದಕ್ಕೆ ಹೊನ್ನಿನ ಅಗಸಿ ಅಥವಾ ಹೊನ್ನಗಸಿ ಎಂದು ಕರೆಯುತ್ತಿದ್ದರು. ಇಲ್ಲಿನ ಕೋಟೆಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ನೋಡಬಹುದಾಗಿದೆ. ೧. ಊರ ಸುತ್ತಿನ ಕೋಟೆ, ೨. ಬೆಟ್ಟದ ಮೇಲಿನ ಉತ್ತರ ಕೋಟೆ, ೩. ಬೆಟ್ಟದ ಮೇಲಿನ ದಕ್ಷಿಣ ಕೋಟೆ.

## ೨.೪. ಅಗಸಿಗಳು

ಆನೆಗೊಂದಿ ಸುತ್ತಲೂ ಇರುವ ಕೋಟೆಗೆ ೭ ಅಗಸಿಗಳನ್ನು ನಿರ್ಮಾಣ ಮಾಡಲಾಗಿದೆ. ಕೆಲವರು ೯ ಇವೆ ಎಂದು ಹೇಳುತ್ತಾರಾದರೂ ಉಳಿದೆರಡರ ಬಗ್ಗೆ ಸರಿಯಾದ ಮಾಹಿತಿ ದೊರೆತಿಲ್ಲ. ಎಲ್ಲಾ ಪ್ರವೇಶ ದ್ವಾರಗಳಿಗೆ ಬಾಗಿಲುಗಳಿವೆ. ಊರೊಳಗೆ ಬ್ರಹ್ಮರಾಕ್ಷಸ ಬರಲು ಪ್ರಯತ್ನಿಸುತ್ತಿದ್ದಾಗ ಪ್ರವೇಶದ್ವಾರಗಳಲ್ಲೇ ಮೋಡಿ ಹಾಕಿ ತಡೆಯಲಾಗುತ್ತಿತ್ತಂತೆ ಎಂದು ಸ್ಥಳೀಯರು ಹೇಳುತ್ತಾರೆ. ಹೊನ್ನಗಸಿ ಅಥವಾ ಒಂದನೇ ಅಗಸಿಯಲ್ಲಿ ಆನೆಸವಾರಿ ಮಾಡುವ ದಂಪತಿಗಳು, ಜೋಳದ ತೆನೆ ಇರುವ ಕೆತ್ತನೆ ಇದೆ. ಈ ಹಿಂದೆ ಅಗಸಿ ಮುಖಾಂತರ ಬಂದವರಿಗೆ ಅಗಸಿಯಲ್ಲಿ ಏನನ್ನು ನೋಡಿ ಬಂದೆ ಎಂದು ಗ್ರಾಮಸ್ಥರು ಪ್ರಶ್ನೆ ಹಾಕುತ್ತಿದ್ದರಂತೆ, ಸಾಮಾನ್ಯವಾಗಿ ಅಲ್ಲಿ ಕುಳಿತುಬಂದವರು ಈ ಆನೆ ಸವಾರಿಯ ದಂಪತಿಗಳ ಮತ್ತು ಜೋಳದ ತೆನೆಯ ಕೆತ್ತನೆಯನ್ನು ನೋಡಿಯೇ ಬರುತ್ತಿದ್ದರೆಂಬುದು ಸ್ಥಳೀಯರ ಅಭಿಪ್ರಾಯವಾಗಿದೆ. ಎಲ್ಲಾ ಅಗಸಿಗಳಲ್ಲಿ ವಿಶ್ರಮಿಸಿಕೊಳ್ಳಲು ಕಟ್ಟೆಗಳು ಇವೆ. ಈಗ ಯಾವ ಅಗಸಿಗಳಿಗೂ ಬಾಗಿಲುಗಳು ಇಲ್ಲ. ಇಲ್ಲಿ ಇರುವ ಒಟ್ಟು ೭ ಅಗಸಿಗಳು ಈ ರೀತಿಯಾಗಿವೆ.

**೧. ಹೊನ್ನಗಸಿ, ೨. ಮುಕಡಮ್ಮನ ಅಗಸಿ, ೩. ಕಲ್ಲಗಸಿ, ೪. ಸುಂಕದ ಬಾಕ್ಲಿ ಅಗೆಸಿ, ೫. ಮುರಕಲ ಅಗಸಿ, ೬. ಕಡೆಬಾಕ್ಲಿ ಅಗಸಿ, ೭. ಅಂಬಿಗರ ಹೊಳೆ ಅಗಸಿ.**

## ೨.೫. ಗ್ರಾಮದ ಚಾರಿತ್ರಿಕ ನೆಲೆಗಳು

ಆನೆಗೊಂದಿಯು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ್ದು, ಇಲ್ಲಿ ಅನೇಕ ಐತಿಹಾಸಿಕವಾದ ನೆಲೆಗಳನ್ನು ಕಾಣಬಹುದಾಗಿದೆ. ಗಗನ ಮಹಲ್, ಲಕ್ಷ್ಮೀ ವಿಲಾಸ, ೬೪ ಕಾಲಿನ ಮಂಟಪ, ಜೈನ ಬಸದಿ, ಚಿಂತಾಮಣಿ ಮಠ, ಅವಧೂತ ಮಠ, ಚಂದ್ರಮೌಳೇಶ್ವರ ಗುಡಿ, ಗವಿ ರಂಗನಾಥ ದೇವಾಲಯ, ಕಲ್ಲಿನ ಸೇತುವೆ, ವ್ಯಾಸರಾಯರ ಮಠ, ಘಟ್ಟಿಕೋಟೆ ದುರ್ಗಾ ದೇವಸ್ಥಾನ, ರಂಗನಾಥಸ್ವಾಮಿ ದೇವಸ್ಥಾನ, ಹುಚ್ಚಪ್ಪಯ್ಯನ ಮಠ, ನವ ವೃಂದಾವನ, ಚಂದ್ರರಾಯರನ ಗುಡಿ, ನಾಲ್ಕು ಮಹಾದ್ವಾರಗಳುಳ್ಳ ಕೋಟೆಗಳು, ರಾಜರ ಮೂರು ಮನೆಗಳು, ಆನೆ ಸಾಲು,- ಒಂಟೆ ಸಾಲು, ರಂಗಯ್ಯನ ಬಾಗಿಲು, ಚನ್ನಕೇಶವ ದೇವಾಲಯ, ಗಣೇಶ

ದೇವಾಲಯಗಳು, ಆಂಜನೇಯ ದೇವಾಲಯಗಳು, ಏಳು ಅಗಸಿಗಳು. ಪ್ರಮುಖ ಚಾರಿತ್ರಿಕ ನೆಲೆಗಳು ಅಧ್ಯಾಯ ೨ರಲ್ಲಿ ಐತಿಹ್ಯಗಳ ಸಂದರ್ಭದಲ್ಲಿ ವಿವರಿಸಲಾಗಿದೆ. ಉಳಿದ ಕೆಲವು ಪ್ರಮುಖ ನೆಲೆಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

**ಹುಚ್ಚಪ್ಪಯ್ಯನ ಮಠ :** ಆನೆಗೊಂದಿ ಕೋಟೆಯ ದಕ್ಷಿಣ ದ್ವಾರಕ್ಕೆ ಹೋಗುವ ದಾರಿಯಲ್ಲಿ ತೋಟವೊಂದರಲ್ಲಿ ಈ ಕಟ್ಟಡವಿದೆ. ಇದು ಕಂಬಗಳ ಮತ್ತು ಮಧ್ಯದ ಮೇಲ್ಛಾವಣಿಯ ವಿಶಿಷ್ಟ ಕೆತ್ತನೆಯಿಂದ, ವರ್ಣಚಿತ್ರಗಳಿಂದ ಈಗ ಉಳಿದಿಲ್ಲ. ವಿಷ್ಣು, ಮಹೇಶ್ವರ, ಮನ್ಮಥ, ನಟರಾಜ, ದುರ್ಗಿ, ವರಹಾ, ಕಾಳಿ, ಸರಸ್ವತಿ, ಚಾಮುಂಡಿ, ವೀರಭದ್ರ, ಬೇಟೆ ದೃಶ್ಯ, ಯುದ್ಧ, ಕೋಲಾಟದ ದೃಶ್ಯಗಳಿಂದ ಆಕರ್ಷಿಸುತ್ತದೆ.

**ಚಿಂತಾಮಣಿ :** ಆನೆಗೊಂದಿಯ ಇನ್ನೊಂದು ರಮಣೀಯ ತಾಣ ಈ ಚಿಂತಾಮಣಿ ಆಶ್ರಮ. ತುಂಗಭದ್ರೆಯ ದಡದೊಡನೆ ವಿಸ್ತರಿಸಿರುವ ಈ ಮಠದ ಪೀಠ ಪರಂಪರೆ ಬಹು ಪ್ರಾಚೀನತೆಯನ್ನು ಹೊಂದಿದೆ. ಇಲ್ಲಿ ರುದ್ರಾಕ್ಷಿ ಮಂಟಪ, ಲಕ್ಷ್ಮೀ ನರಸಿಂಹ ಮತ್ತು ಗಣೇಶ ದೇವಾಲಯಗಳು ಆಕರ್ಷಕವಾಗಿವೆ.

**ಗವಿ ರಂಗನಾಥ :** ಮೂಲ ರಂಗನಾಥ ಇದಾಗಿದ್ದು, ಶಿವಪುರ ರಸ್ತೆಯ ಎಡಭಾಗದ ಬೆಟ್ಟದಲ್ಲಿ ಈ ದೇವಾಲಯವಿದೆ. ಇಲ್ಲಿ ಎರಡು ಅತ್ಯಂತ ತಂಪಾದ ಗುಹೆಗಳು ಮತ್ತು ಒಂದು ಸಿಹಿ ನೀರಿನ ತಂಪಾದ ಕೊಳವಿದೆ. ಬಂಡೆಗಳಲ್ಲಿ ಜೈನ ನಿಷದಿ ಮತ್ತು ಶಾಸನಗಳಿವೆ. ಮೊದಲು ಅತ್ಯಂತ ವಿಜೃಂಭಣೆಯಿಂದ ಇಲ್ಲಿ ರಥೋತ್ಸವ ನಡೆಯುತ್ತಿತ್ತೆಂದು ಸ್ಥಳೀಯರು ಹೇಳುತ್ತಾರೆ.

**ಕಲ್ಲಿನ ಸೇತುವೆ :** ಆನೆಗೊಂದಿ ಪಶ್ಚಿಮಕ್ಕೆ ೧೪ನೆಯ ಶತಮಾನದಲ್ಲಿ ಎರಡನೆಯ ದೇವರಾಯನ ಕಾಲಕ್ಕೆ ಈ ಸೇತುವೆಯಿಂದ ತುಂಗಭದ್ರ ನದಿಯ ಆಚೆ ಇರುವ ದಕ್ಷಿಣದ ವಿಜಯನಗರಕ್ಕೆ ನೀರಿನ ವ್ಯವಸ್ಥೆಯನ್ನು ಒದಗಿಸಲು ಈ ಸೇತುವೆಯನ್ನು ಕಟ್ಟಲ್ಪಟ್ಟಿದೆ.

**ಅರಮನೆಗಳು :** ಇಲ್ಲಿ ಮೂರು ಅರಮನೆಗಳಿದ್ದು ಎರಡು ಶಿಥಿಲಾವಸ್ಥೆಯಲ್ಲಿವೆ. ಒಂದು ಅರಮನೆಯ ಮೂಲ ಸ್ವರೂಪ ಬದಲಾಯಿಸಿ ನವೀಕರಣಗೊಳಿಸಲಾಗಿದೆ. ಆನೆಗೊಂದಿ ಸಂಸ್ಥಾನದ ವಂಶಜರು ಈಗಲೂ ಇಲ್ಲಿ ವಾಸಿಸುತ್ತಿದ್ದಾರೆ.

## ೨.೬. ಗ್ರಾಮದ ಪೌರಾಣಿಕ ನೆಲೆಗಳು

ತ್ರೇತಾಯುಗದಲ್ಲಿ ಆನೆಗೊಂದಿಯನ್ನು ಕಿಷ್ಕಿಂದೆ ಎಂದು ಕರೆಯಲಾಗುತ್ತಿತ್ತು. ವಾಲಿಸುಗ್ರೀವರ ಸಾಮ್ರಾಜ್ಯವೆಂತಲೂ, ಹನುಮ ಜನಿಸಿದ ನಾಡೆಂದೂ, ಶ್ರೀರಾಮನು ಇಲ್ಲಿ ಸಂಚರಿಸಿದ ಸ್ಥಳವೆಂತಲೂ ಪುರಾಣ ಐತಿಹ್ಯಗಳಲ್ಲಿಯಷ್ಟೆ ಅಲ್ಲದೆ ಭೌತಿಕವಾಗಿಯೂ ಅನೇಕ ಅಂಶಗಳು ಇಲ್ಲಿ ವ್ಯಕ್ತವಾಗುತ್ತವೆ ಎಂದು ಇತಿಹಾಸ ತಜ್ಞರು ಅಭಿಪ್ರಾಯಪಡುತ್ತಾರೆ. ಐತಿಹ್ಯಗಳ ಕುರಿತಾದ ವಿವರಗಳಲ್ಲಿ ಪ್ರಮುಖ ಪೌರಾಣಿಕ ನೆಲೆಗಳ ಬಗ್ಗೆ ವಿವರಿಸಿರುವವರಿಂದ ಪುನಃ ಇಲ್ಲಿ ವಿವರಿಸಲಾಗಿಲ್ಲ. ಕೇವಲ ಈ ಕೆಳಕಂಡಂತೆ ನೆಲೆಗಳನ್ನು ಹೆಸರಿಸಲಾಗಿದೆ.

ಅಂಜನಾದ್ರಿ ಬೆಟ್ಟ, ಹನುಮನ ಸೆಳವು, ವಾಲಿಭಂಡಾರ, ವಾಲಿಖಿಲ್ಲಾ, ವಾಲಿದಿಬ್ಬ, ಪಂಪಾ ಸರೋವರ, ಮುದುಕಿ ವಟ್ಟಿಲು, ಸೀತೆ ಸೆರಗು, ಶಬರಿಗುಹೆ ಮುಂತಾದವುಗಳು.

## ೨.೭. ಗ್ರಾಮದ ಸಾಂಸ್ಕೃತಿಕ ನೆಲೆಗಳು

**ಗಗನ ಮಹಲ್** : ಈಗಾಗಲೆ ಐತಿಹ್ಯಗಳಲ್ಲಿ ವಿವರಿಸಲಾಗಿರುವಂತೆ ಗಗನ್‌ಮಹಲ್‌ನ ಮುಂಭಾಗದಲ್ಲಿ ರಾಜ, ರಾಣಿಯರ, ಪ್ರಜೆಗಳ ಸಮ್ಮುಖದಲ್ಲಿ ಮನರಂಜನೆಯನ್ನು ನಡೆಸಲಾಗುತ್ತಿತ್ತು. ಕುಸ್ತಿ, ದೊಂಬರಾಟ, ನೃತ್ಯ, ಹುಲಿ ಚಿರತೆ ಬೇಟೆ, ಸಾಹಸ ಪ್ರದರ್ಶನ ಮುಂತಾದವುಗಳು ಇಲ್ಲಿ ಪ್ರದರ್ಶನಗೊಳ್ಳುತ್ತಿದ್ದವು.

**ಆನೆಗೊಂದಿ ಉತ್ಸವ** : ಆನೆಗೊಂದಿಯ ಐತಿಹಾಸಿಕ ರಂಗನಾಥ ಸ್ವಾಮಿ ದೇವಾಲಯದ ಉತ್ತರ ದ್ವಾರದ ಮಂಟಪದಲ್ಲಿ ಸರ್ಕಾರವು ಹಲವು ವರ್ಷಗಳಿಂದ ಆನೆಗೊಂದಿ ಉತ್ಸವವನ್ನು ಪ್ರತಿವರ್ಷ ನಡೆಸುತ್ತಾ ಬಂದಿದೆ. ಈ ಉತ್ಸವವು ಜನಪ್ರಿಯಗೊಳ್ಳುತ್ತ ಬಂದಮೇಲೆ ಇದೇ ಸ್ಥಳದಲ್ಲಿ ಉತ್ಸವ ನಡೆಸಲು ಸ್ಥಳದ ಅಭಾವದಿಂದಾಗಿ ಆನೆಗೊಂದಿಯ ಪಶ್ಚಿಮ ಭಾಗದಲ್ಲಿ ಅಂಬಿಗರ ಹೊಳೆಗೆ ಹೋಗುವ ಬೈಪಾಸ್ ರಸ್ತೆಯ ಪಕ್ಕದಲ್ಲಿ ಬೃಹತ್ ವೇದಿಕೆ ನಿರ್ಮಿಸಿ ಉತ್ಸವ ನಡೆಸಲಾಗುತ್ತಿದೆ. ಇಲ್ಲಿ ಭಾರತೀಯ ಜನಪದ ಕಲೆಗಳು, ಪ್ರಾದೇಶಿಕ ಜನಪದ ಕಲೆಗಳು, ಸಂಗೀತ, ಸಾಹಿತ್ಯ, ನಾಟಕ ಮುಂತಾದವುಗಳು ಪ್ರದರ್ಶನಗೊಳ್ಳುತ್ತವೆ. ಸಾಲು ಮಳಿಗೆಗಳಲ್ಲಿ ವಿವಿಧ ಇಲಾಖೆಗಳ, ಸಂಘ ಸಂಸ್ಥೆಗಳ, ವ್ಯಕ್ತಿಗತವಾದ ಕಲಾ ಪ್ರದರ್ಶನಗಳು, ತಂತ್ರಜ್ಞಾನ ಇತ್ಯಾದಿ ಪ್ರದರ್ಶನವು ಏರ್ಪಟ್ಟಿರುತ್ತದೆ. ಉತ್ಸವಕ್ಕೆ ಜಿಲ್ಲೆಯಾದ್ಯಂತ ಸಹಸ್ರಾರು ಸಂಖ್ಯೆಯಲ್ಲಿ ಜನರು ವೀಕ್ಷಿಸಲು ಬರುವುದುಂಟು.

**ರಸ್ತೆಯ ಬಯಲು ಪ್ರದೇಶ** : ಆನೆಗೊಂದಿಯಲ್ಲಿ ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಕಲಾಪ್ರದರ್ಶನಗಳು ನಡೆಯುತ್ತವೆ. ಬಯಲಾಟ, ನಾಟಕ, ಗೊಂದಲಿಗರ ಆಟ, ಕುಸ್ತಿ ಮುಂತಾದ ಈ ಎಲ್ಲ ಕಲಾ ಪ್ರದರ್ಶನಗಳು ಗ್ರಾಮದ ಕೆಲವು ರಸ್ತೆಯ ವಿಶಾಲ ಪ್ರದೇಶಗಳಲ್ಲಿ ಬಯಲು ರಂಗಮಂದಿರದಲ್ಲಿ ಪ್ರದರ್ಶನಗೊಳ್ಳುತ್ತವೆ.

## ೨.೮. ಕೆರೆ, ಕಾಲುವೆ ಬಾವಿಗಳು

ಗುಡ್ಡ ಪರ್ವತಗಳು ಹೆಚ್ಚಾಗಿ ಕಂಡುಬಂದಂತೆ ಆನೆಗೊಂದಿಯ ಪರಿಸರದಲ್ಲಿ ಕೆರೆಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಇದು ನೀರಾವರಿ ಪ್ರದೇಶವಾಗಿರುವುದರಿಂದ ಹಾಗೂ ಪಕ್ಕದಲ್ಲಿ ತುಂಗಾ ನದಿ ಇರುವುದರಿಂದ ಇಲ್ಲಿ ಕೆರೆಗಳ ಮೇಲೆ ಅವಲಂಬನೆ ಕಡಿಮೆ. ಆನೆಗೊಂದಿ ಪಕ್ಕದ ಕಡೆ ಬಾಗಿಲ ಹತ್ತಿರ ವಜ್ರಕೆರೆಯೊಂದಿದೆ. ಇಲ್ಲಿ ವಜ್ರ ಸಿಗುತ್ತಿತ್ತು. ಆದ್ದರಿಂದ ಇದಕ್ಕೆ ವಜ್ರಕೆರೆ ಎಂದು ಹೆಸರುಬಂದಿದೆ ಎಂಬುವುದು ಗ್ರಾಮಸ್ಥರ ಅಭಿಪ್ರಾಯ. ಈಗಲೂ ವಜ್ರ ಹುಡುಕಿಕೊಂಡು ಜನರು ಇಲ್ಲಿಗೆ ಬರುತ್ತಾರೆಂದು ಇಲ್ಲಿನ ಜನ ಹೇಳುತ್ತಾರೆ. ಇನ್ನುಳಿದ ಕೆರೆಗಳೆಂದರೆ, ದ್ಯಾಮಾರಕುಂಟೆ, ತೆಪ್ಪದ ಕೆರೆ, ಅಂಜನಳ್ಳಿ ಕೆರೆ. ಕೃಷಿ ಚಟುವಟಿಕೆಗೆ, ಕುಡಿಯುವ ನೀರಿಗಾಗಿ ಕಾಲುವೆಗಳ ವ್ಯವಸ್ಥೆ ಇತ್ತು. ಇಂದಿಗೂ ಇಲ್ಲಿ ವಿಜಯನಗರ ಕಾಲುವೆ, ಹಳೇ ಕಾಲುವೆಗಳನ್ನು, ಹನುಮನಹಳ್ಳಿಯ ಹತ್ತಿರದ ಸೇತುವೆಯನ್ನು ನೋಡಬಹುದಾಗಿದೆ.

ಆನೆಗೊಂದಿಯಲ್ಲಿ ಬಾವಿಗಳು ಸಾಕಷ್ಟಿವೆ. ಅವುಗಳಲ್ಲಿ ಕಳ್ಳಿಬಾವಿ, ವೆಂಕಟೇಶ್ವರ ಗುಡಿ ಬಾವಿ, ಸುಂಕದ ಬಾಕ್ಲಿ ಬಾವಿ, ಕನ್ನೆರಮ್ಮನ ಬಾವಿ, ಉತ್ತರಾಧಿ ಮಠದ ಹಿಂಬದ ಬಾವಿ, ನರೇಗಲ್ ಬಸಣ್ಣನ ಮನೆ ಹಿಂದಿನ ಬಾವಿ, ಕುಂಬಾರ ಬಾವಿ, ಜಡೇರ್ ಬಾವಿ, ಛತ್ರ ಬಾವಿ. ಇವುಗಳಲ್ಲಿ ಕೆಲವು ಬಾವಿಗಳನ್ನು ಈಗಲೂ ಬಳಸುತ್ತಾರೆ. ನದಿ ನೀರಿನ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಊರಿನ ಹತ್ತಿರದ ಶೃಂಗಾರ ಕುಂಟೆ, ತಿಮ್ಮಯ್ಯನ ಕುಂಟೆಯಲ್ಲಿ ನೀರಿದ್ದರೆ ಊರೊಳಗಿನ ಬಾವಿಗಳಿಗೆ ನೀರು ಬರುತ್ತದೆ ಎಂಬುದು ಸ್ಥಳೀಯ ನಂಬಿಕೆಯಾಗಿದೆ.

## ೨.೯. ಬೆಟ್ಟ, ಅರಣ್ಯ, ಸಸ್ಯ, ಪ್ರಾಣಿಗಳು ಮತ್ತು ಖನಿಜಗಳು

ಆನೆಗೊಂದಿಯ ಬೆಟ್ಟಗಳು ಏಳುಗುಡ್ಡಗಳ ಸಾಲಿನಲ್ಲಿ ಒಂದಾಗಿದೆ. ಗಂಗಾವತಿ ತಾಲೂಕಿನಲ್ಲಿ ಪೂರ್ವಪಶ್ಚಿಮವಾಗಿ ಏಳುಗುಡ್ಡದ ಬೆಟ್ಟದ ಸಾಲುಗಳು ಸುಮಾರು ೪೦ ಕಿ.ಮೀ. ಎಡಬಿಡದೆ ವಿಸ್ತರಿಸಿದೆ. ಅಲ್ಲಲ್ಲಿ ಬಿಡಿ ಬೆಟ್ಟಗಳೂ ಇವೆ. ಇವೆಲ್ಲ ಪ್ರಧಾನವಾಗಿ ಕಣಶಿಲೆಯ ರಚನೆಗಳು, ಇವುಗಳ ನಡುವೆ ಕಪ್ಪುಶಿಲೆಯ ಶ್ರೇಣಿಗಳನ್ನು ಕಾಣಬಹುದಾಗಿದೆ. ಆನೆಗೊಂದಿ ಪ್ರದೇಶವು ೪೦೫.೯ ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದೆ. ಈ ಪ್ರದೇಶದಲ್ಲಿ ಪ್ರಧಾನವಾಗಿ ಜಾಲಾರಿ, ಹೊನ್ನೆ, ಮತ್ತಿ, ಅಳಲೆ, ಬಾಗಿ, ಮರಡಿ, ಬೇವು, ಜಾಲಿ, ಕಕ್ಕೆ, ಹುಣಸೆ, ಸೀತಾಫಲ, ಮತ್ತಿತರ ಗಿಡಗಳನ್ನು, ಕರಡಿ, ನರಿ, ತೋಳ, ಕಪ್ಪು ಕೆಂಪು ಮುಖದ ಮಂಗಗಳು, ಮೊಲ, ಮುಳ್ಳುಹಂದಿ, ಕತ್ತೆ, ಕಿರುಬ, ಚಿಪ್ಪುಹಂದಿ ಪ್ಯಾಂಗೋಲಿನ್ ಹೆಬ್ಬಾವು, ಕೆರೆಹಾವು, ನಾಗರಹಾವು, ನವಿಲು ಮುಂತಾದ ಪ್ರಾಣಿಪಕ್ಷಿಗಳು ಕಂಡುಬರುತ್ತವೆ. ಆನೆಗೊಂದಿ ಸಮೀಪದಲ್ಲಿ ಕೊರಂಡು ರೂಬಿ ಶಿಲೆಗಳು ದೊರೆಯುತ್ತವೆ. ಇಲ್ಲಿ ಶಿಲೆಗಳು ಜಗತ್ತಿನ ಅತಿ ಪುರಾತನವಾದ ಶಿಲೆಗಳಲ್ಲೊಂದು ಎಂದು ಪರಿಗಣಿಸಲ್ಪಡುತ್ತವೆ. ಇಲ್ಲಿ ಬರಿದಾಗದ ನಸುಗೆಂಪು ಮತ್ತು ಬೂದಿಬಣ್ಣದ ಗ್ರಾನೈಟ್ ಶಿಲೆಗಳ ಅಪಾರ ಸಂಪತ್ತಿದೆ. ಉತ್ತಮ ಮತ್ತು ಮಧ್ಯಮ ಗುಣಮಟ್ಟದ ಕಣಶಿಲೆಗಳಿವೆ. ಆನೆಗೊಂದಿಯ ಸುತ್ತಲೂ ಇರುವ ಕೆಲವು ಪ್ರಮುಖ ಗುಡ್ಡಗಳು ಈ ರೀತಿಯಾಗಿವೆ.

**೧. ತ್ರಾಸಿನ ಕಲ್ಲುಗುಡ್ಡ (ಊರಮುಂದೆ), ೨. ವಾಲಿಪರ್ವತ, ೩. ಋಷ್ಯಮೂಕ ಪರ್ವತ, ೪. ತಾರಾ ಪರ್ವತ, ೫. ಎಲ್ಲಮ್ಮನ ಗುಡ್ಡ, ೬. ಅಂಜನಾದ್ರಿ ಪರ್ವತ, ೭. ಮದ್ದೇರಗುಡ, ೮. ಗ್ವಾಡೇಮರದ ಕಲ್ಲು, ೯. ನಾಗಾಜಪ್ಪನ ಗುಡ್ಡ, ೧೦. ಜೇನಕ್ಕಿಗುಡ್ಡ, ೧೧. ದ್ಯಾಮಾರಿ ಕುಂಟೆ ಇತ್ಯಾದಿ.**

## ೨.೧೦. ಆಧುನಿಕ ಅಪೂರ್ಣಗೊಂಡ 'ಸ್ಥಿರ ತಂತಿ ಸೇತುವೆ' (ಕೇಬಲ್ ಸ್ಟೆಯ್ಡ್ ಬ್ರಿಡ್ಜ್)

ವೀರಪ್ಪ ಮೋಯ್ಲಿ ಸರ್ಕಾರದ ಅವಧಿಯಲ್ಲಿ ಸೇತುವೆಯ ನಿರ್ಮಾಣ ಕಾರ್ಯ ಆರಂಭವಾಗಿದೆ. ೨೨೬ ಮೀಟರ್ ಉದ್ದವಿರುವ ಈ ಸೇತುವೆಯ ನಿರ್ಮಾಣ ವೆಚ್ಚ ೨೫೦ ಲಕ್ಷ ರೂಪಾಯಿಗಳಿವೆ. ಇದರ ರಚನಾ ವಿನ್ಯಾಸ ತುಂಬಾ ವಿಶಿಷ್ಟವಾಗಿದೆ.

ಆನೆಗೊಂದಿಯ ಉತ್ತರ ಭಾಗದ ತುಂಗಭದ್ರ ಅಂಬಿಗರ ಹೊಳೆ (ನದಿ)ಗೆ ಅಡ್ಡಲಾಗಿ ನಿರ್ಮಾಣ ಮಾಡಲಾಗಿರುವ ಈ ಸೇತುವೆ ಭಾರತದಲ್ಲೇ ವಿಶಿಷ್ಟ ಸೇತುವೆಗಳಲ್ಲೊಂದು ಎನ್ನಲಾಗಿದೆ. ವೀರಪ್ಪ ಮೋಯ್ಲಿ

ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ದಿನಾಂಕ ೨೪.೧೧.೧೯೯೩ರಂದು ಶಂಕುಸ್ಥಾಪನೆಯಾಗಿ ನಂತರ ನಿರ್ಮಾಣಕಾರ್ಯ ಆರಂಭವಾಗಿದೆ. ಈ ಸೇತುವೆ ಪೂರ್ಣಗೊಳ್ಳಲು ಇನ್ನು ೫೦-೬೦ ಅಡಿ ಬಾಕಿ ಉಳಿದಿರುವ ಹಂತದಲ್ಲಿದ್ದಾಗ ನದಿಗೆ ಪ್ರವಾಹ ನುಗ್ಗಿ ನಿರ್ಮಾಣಕ್ಕೆ ಆಧಾರವಾಗಿಟ್ಟ ಕಬ್ಬಿಣದ ಸರಳುಗಳು ನದಿಯಲ್ಲಿ ಕೊಚ್ಚಿಹೋಗಿವೆ. ಮತ್ತೆ ಪುನಾರಂಭಿಸುವಷ್ಟರಲ್ಲಿ ಯುನೆಸ್ಕೋ ತಂಡ ಹಂಪಿಯ ಪ್ರಾಚೀನ ಪರಂಪರೆಗೆ ಈ ಸೇತುವೆ ಅಡ್ಡಿ ಉಂಟು ಮಾಡುತ್ತದೆ ಎಂಬ ಕಾರಣದಿಂದ ನಿರ್ಮಾಣ ಕಾರ್ಯಕ್ಕೆ ಬಿಡಬೇಕು ಅಥವಾ ಈ ಸೇತುವೆಯ ಮುಖಾಂತರ ಹೊಸಪೇಟೆಗೆ ಹೋಗುವ ಮಾರ್ಗ ಬದಲಾಯಿಸಬೇಕು, ಇಲ್ಲದಿದ್ದರೆ ವಿಶ್ವ ಪರಂಪರೆಯ ಪಟ್ಟಿಯಿಂದ ಹಂಪಿಯನ್ನು ಕೈಬಿಡುವುದಾಗಿ ಹೇಳಿತು. ಈ ಕಾರಣದಿಂದಾಗಿ ಸೇತುವೆ ನಿರ್ಮಾಣ ಕಾರ್ಯ ವಿಳಂಬವಾಯಿತು. ಈಗ ಯುನೆಸ್ಕೋದ ನಿಯಮದಂತೆ ಕಟ್ಟಲು ಒಪ್ಪಿರುವುದರಿಂದ ಸೇತುವೆ ಪೂರ್ಣಗೊಳಿಸಲು ಯಾವುದೇ ಅಡ್ಡಿ ಇಲ್ಲ. ಹಂಪಿ, ಹೊಸಪೇಟೆ ಹತ್ತಿರವಾಗುವುದರಿಂದ ಸೇತುವೆಯು ಈ ಭಾಗದ ಜನರಿಗೆ ಹೆಚ್ಚು ಉಪಯೋಗವಾಗಲಿದೆ ಎಂಬುದು ಸ್ಥಳೀಯರ ಅಭಿಪ್ರಾಯ.

### ೨.೧೧. ಸಂಘ-ಸಂಸ್ಥೆಗಳು

**ಹರಿಹರ ದೇವರಾಯಲು ಯುವಕ ಸಂಘ, ಆನೆಗೊಂದಿ :** ಸುಮಾರು ೫೦ ವರ್ಷಗಳಿಂದಲೂ ಕ್ರಿಯಾಶೀಲವಾಗಿ ಈ ಸಂಘವು ಕಾರ್ಯನಿರ್ವಹಿಸುತ್ತಾ ಬಂದಿದೆ. ಕಲೆ, ಸಾಹಿತ್ಯ, ಸಂಗೀತ, ಕ್ರೀಡೆ, ಪ್ರತಿಭಾ ಪುರಸ್ಕಾರ, ಸಸಿ ನೆಡುವುದು, ಅರವಟ್ಟಿಗೆ ನೆಡೆಸುವುದು, ರಕ್ತದಾನ ಶಿಬಿರ ಹಮ್ಮಿಕೊಳ್ಳುವುದು ಹೀಗೆ ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿರುವುದು ಈ ಸಂಘದ ಹೆಮ್ಮೆಯ ವಿಷಯವಾಗಿದೆ. ಅಧ್ಯಕ್ಷರಾದ ಜಿ. ವಿಷ್ಣುವರ್ಧನ್, ಕಾರ್ಯದರ್ಶಿ ಬಿ. ಹನ್ಮಂತಪ್ಪ, ಖಜಾಂಚಿ ಲಂಬೂಹುಸೇನ್, ಸದಸ್ಯರಾದ ಡಿ.ಪಿ. ಶ್ರೀನಿವಾಸ್, ಜನಾರ್ಧನ ಮುಂತಾದವರು ಇದ್ದಾರೆ. ಮತ್ತು ಇದು ಗ್ರಾಮ ಪ್ರತಿನಿಧಿಸುವ ಸಂಘವಾಗಿದ್ದು ಸುಮಾರು ೬೦ ಜನ ಸದಸ್ಯರು ಈ ಸಂಘದಲ್ಲಿದ್ದಾರೆಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ.

**ವನಿತಾ ಯುವತಿ ಮಂಡಳಿ :** ಸ್ವಯಂ ಉದ್ಯೋಗ ತರಬೇತಿ ಕೊಡುವುದರಲ್ಲಿ ವಿಶೇಷ ಕಾಳಜಿ ವಹಿಸುವುದಲ್ಲದೆ, ಮಹಿಳೆಯರಿಗೆ ಕ್ರೀಡೆ, ಸ್ಪರ್ಧೆ, ಜಾಗೃತಿ, ಶಿಬಿರ ಹೀಗೆ ಅನೇಕ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಸಂಘವು ಈಗ ೪೫ ವರ್ಷಗಳನ್ನು ಪೂರೈಸಿದೆ. ಸಂಘದ ಅಧ್ಯಕ್ಷರಾದ ಎಂ. ಚಂದ್ರಕಾಂತಮ್ಮ, ಸದಸ್ಯರಾದ ಅಕ್ಕಮಹಾದೇವಿ, ಡಿ.ಪಿ. ಸುವರ್ಣಲತಾ, ಕೆ. ರಾಜೇಶ್ವರಿ ಇನ್ನೂ ಮುಂತಾದ ಸದಸ್ಯ ಪದಾಧಿಕಾರಿಗಳು ಇನ್ನೂ ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ನಡೆಸಲು ಯೋಜನೆಗಳನ್ನು ರೂಪಿಸಿದ್ದಾರೆ.

**ವಿಜಯ ವ್ಯಾಸರಾಯ ಟ್ರಸ್ಟ್ :** ಶ್ರೀಮತಿ ಲಲಿತಾರಾಣಿ ಶ್ರೀರಂಗದೇವರಾಯಲುರವರು ಈ ಟ್ರಸ್ಟ್‌ನ ಅಧ್ಯಕ್ಷರಾಗಿ, ತಿರುಕಪ್ಪ, ಸುದರ್ಶನ ಮುಂತಾದವರು ಟ್ರಸ್ಟಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು, ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ಟ್ರಸ್ಟ್‌ನ ಮುಖಾಂತರ ಮಾಡುವ ಉದ್ದೇಶವನ್ನು ಹೊಂದಿದ್ದಾರೆ.

**ಕಿಷ್ಕಿಂದಾ ಟ್ರಸ್ಟ್ ಆನೆಗೊಂದಿ :** ಸಂಘಟಿತ ಜೀವನದ ಬಗ್ಗೆ ಒಲವು, ಸಮಾಜ ಸೇವೆಯ ಬಗೆಗೆ ವಿಶೇಷ ಆಸಕ್ತಿ ವಹಿಸುವ ಶಮಾಪವರ್‌ರವರು ೧೯೯೭ರಲ್ಲಿ ಈ ಸಂಸ್ಥೆಯನ್ನು ಆರಂಭಿಸಿದರು. ಮಹಿಳೆಯರಲ್ಲಿ

ಸಾಮಾಜಿಕ, ಆರ್ಥಿಕ ಜಾಗೃತಿಗೆ ಟ್ರಸ್ಟ್‌ನಲ್ಲಿ ಹೆಚ್ಚಿನ ಒತ್ತು ಕೊಡಲಾಯಿತು. ೧೫ ಜನರಿಗೊಂದು ತಂಡದಂತೆ ಅನೇಕ ತಂಡಗಳನ್ನು ರಚಿಸಿ ಬಾಳೆಯ ದಿಂಡಿನಿಂದ, ಬಾಳೆಯ ನಾರಿನಿಂದ ದಾರ ಮಾಡುವುದು, ಪಿಪಿದ ಬ್ಯಾಗುಗಳನ್ನು ತಯಾರಿಸಲು ತರಬೇತಿ ನೀಡುವ ಮೂಲಕ, ಕಸವಾಗಿ ಹೋಗುವ ವಸ್ತುವಿನಲ್ಲಿ ಅದ್ಭುತ ಕಲಾಸೃಷ್ಟಿ ಮಾಡಿ, ಕಲಾ ನೈಪುಣ್ಯತೆ ಮೆರೆದಿದ್ದಾರೆ. ಬೀದಿನಾಟಕಗಳ ಮೂಲಕ ಸಮಾಜಕ್ಕೆ ಉತ್ತಮ ಸಂದೇಶ ಬೀರಿದ್ದಾರೆ. ಮುಖ್ಯವಾಗಿ ಆರ್ಥಿಕ ಸ್ವಾವಲಂಬನೆಗೆ ಕಾರಣೀಭೂತರಾಗಿದ್ದಾರೆ. ಅರ್ಥಪೂರ್ಣ ಸೇವೆಯಲ್ಲಿ ತೊಡಗಿದ ಶಮಾರವರು ಮಹಿಳಾ ಸೇವಾರ್ಥರಿಗೊಂದು ಮಾದರಿ. ಇದೇ ರೀತಿ ರಾಮರಾಜುವರ ನೇತೃತ್ವದಲ್ಲಿ ಕೃಷ್ಣದೇವರಾಯ ರಿಕ್ರಿಯೇಷನ್ ಕ್ಲಬ್, ಬಾಲಯ್ಯ, ಷಡಕ್ಷರಯ್ಯರವರ ನೇತೃತ್ವದಲ್ಲಿ ಗೆಳೆಯರ ಬಳಗ ಎಂಬ ಸಂಘಟನೆಗಳೂ ಸಹ ಅಸ್ತಿತ್ವದಲ್ಲಿವೆ. ಆನೆಗೊಂದಿ ಗ್ರಾಮದ ಅಭಿವೃದ್ಧಿಯ ವಿಷಯದಲ್ಲಿ ಪೂರಕವಾಗಿ ಈ ಸಂಘಸಂಸ್ಥೆಗಳು ಕೆಲಸ ಮಾಡುತ್ತಿವೆ.

# ಅಧ್ಯಾಯ ೩

# ಐತಿಹಾಸಿಕವಾಗಿ ಆನೆಗೊಂದಿ

## ೩.೧. ಐತಿಹಾಸಿಕವಾಗಿ ಆನೆಗೊಂದಿ

ಆನೆಗೊಂದಿಯನ್ನು ನಾನು ಇಲ್ಲಿ ಜಾನಪದೀಯ ಅಧ್ಯಯನಕ್ಕೆ ಒಳಪಡಿಸುತ್ತಿರುವ ಹಿನ್ನೆಲೆಯಲ್ಲಿ ಅಕ್ಷರ ಇತಿಹಾಸ ಹೇಳುವ ಕಾಲಘಟ್ಟಗಳ, ರಾಜ ಮಹಾರಾಜರ ವಿವರಗಳ ವಿಸ್ತೃತ ಅಧ್ಯಯನಕ್ಕೆ ಕೈ ಹಾಕಿಲ್ಲ. ಅಧ್ಯಯನದ ಅವಶ್ಯಕತೆಯ ದೃಷ್ಟಿಯಿಂದ ಸಂಕ್ಷಿಪ್ತ ಪರಿಚಯವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ತುಂಗಭದ್ರಾ ನದಿಯ ಉತ್ತರ ದಡದಲ್ಲಿರುವ ಆನೆಗೊಂದಿಯು ರಮಣೀಯ ಬೆಟ್ಟ ಸಾಲುಗಳು, ಹಾಸುಗಲ್ಲುಗಳು ಹಾಗೂ ಹೆಬ್ಬಂಡೆಗಳಿಂದ ಆವೃತ್ತವಾಗಿದೆ. ಗ್ರಾಮವನ್ನು ಅಪ್ಪಿಕೊಂಡು ತುಂಗೆ ಹರಿಯುತ್ತಿದ್ದಾಳೆ. ಈ ಪ್ರದೇಶ ಆದಿ ಮಾನವನ ನೆಲೆಯಾಗಿತ್ತೆಂದು ಜನರು ಇಲ್ಲಿನ ಕೆಲವು ಗವಿಚಿತ್ರಗಳು, ಕಲ್ಲಿನ ಆಯುಧಗಳ ಆಧಾರದ ಮೇಲೆ ಹೇಳುತ್ತಾರೆ. ಬೆಟ್ಟಗುಡ್ಡಗಳಲ್ಲಿ ಇಂದಿಗೂ ದೊರಕುವ ಬೃಹತ್ ಗವಿಗಳು, ಗವಿಗಳ ಬಂಡೆಯ ಇಳಿಜಾರಿನಲ್ಲಿ ಆದಿಮಾನವರು ಚಿತ್ರಿಸಿದ ಕೆಂಪು ಹಾಗೂ ಬಿಳಿಯ ಬಣ್ಣದ ಪ್ರಾಣಿ, ಪಕ್ಷಿ, ಮನುಷ್ಯನ ಬೇಟೆಯ ಚಿತ್ರಗಳು ಹೇರಳವಾಗಿ ಕಂಡುಬರುತ್ತವೆ. ಅಲ್ಲದೆ ಶಿಲಾಯುಗದ ಸೂಕ್ಷ್ಮ ಶಿಲಾಯುಗದ ಕಲ್ಲಿನ ಆಯುಧಗಳು, ಆಯುಧಗಳನ್ನು ತಯಾರಿಸಲು ಬಳಸಿದ ಕಲ್ಲಿನ ಚೂರುಗಳು ಕಂಡುಬರುತ್ತವೆ. ಇಂದಿಗೂ ಈ ಪ್ರದೇಶದಲ್ಲಿ ಶೋಧಿಸಲಾಗದೆ ಉಳಿದ ಎಷ್ಟೋ ಆದಿ ಮಾನವನ ನೆಲೆಗಳು ಕಂಡುಬರುತ್ತವೆ. ದುರ್ಗಾ ಬೆಟ್ಟದ ತಪ್ಪಲು, ಬೆಟ್ಟಕ್ಕೆ ಸಾಗುವ ದಾರಿಯ ಕಲ್ಲು ಗುಂಡುಗಳಲ್ಲಿ ಆದಿಮಾನವರು ಬರೆದ ಗೂಳಿ, ಜಿಂಕೆ ಹಾಗೂ ನವಿಲಿನ ಚಿತ್ರಗಳಿವೆ. ಇದೇ ರೀತಿ ದುರ್ಗಾಬೆಟ್ಟದ ಕುದುರೆ ಲಾಯದ ಸಮೀಪದಲ್ಲಿ, ಚಿಂತಾಮಣಿ ಮಠದ ಪಕ್ಕದ ಬೃಹತ್ ಗವಿಗಳು ಆದಿಮಾನವರ ವಾಸದ ನೆಲೆಗಳೆಂದು ಗುರುತಿಸಲಾಗಿದೆ. ಪಂಪಾಸರೋವರ, ಅಂಜನಾದ್ರಿ ಬೆಟ್ಟಗಳಲ್ಲೂ ಆದಿಮಾನವನ ನೆಲೆಗಳು ಗೋಚರಿಸಿವೆ. ಪ್ರಾಗಿತಿಹಾಸದ ಮೂಲವಾಗಿ ಆನೆಗೊಂದಿಯು ವಿಶೇಷ ಗಮನವನ್ನು ಸೆಳೆಯುತ್ತಿರುವುದು ಗಮನಾರ್ಹ.

ತ್ರೇತಾಯುಗದಲ್ಲಿ ಆನೆಗೊಂದಿಯನ್ನು ಕಿಷ್ಕಿಂದೆ ಎಂದು ಕರೆಯಲಾಗುತ್ತಿತ್ತೆಂದು ಹೇಳಲಾಗುತ್ತದೆ. ಆಂಜನೇಯನ ಜನ್ಮ ಸ್ಥಳವಾದ ಅಂಜನಾದ್ರಿ ಬೆಟ್ಟ, ಹನುಮನ ಸೆಳವು, ಸೇತುವೆ, ವಾಲಿಭಂಡಾರ, ವಾಲಿದಿಬ್ಬ, ವಾಲಿಕಾಷ್ಟ, ಶಬರಿಗುಹೆ ಹೀಗೆ ಅನೇಕ ಭೌತಿಕ ನಿದರ್ಶನಗಳಿಂದಾಗಿ ಇದು ಕಿಷ್ಕಿಂದಾ ಕ್ಷೇತ್ರವೆಂದು ಸ್ಥಳೀಯರು ಬಲವಾಗಿ ನಂಬುತ್ತಾರೆ. ಆನೆಗೊಂದಿ ಪರಿಸರದಲ್ಲಿ ಈ ಕಾರಣದಿಂದಲೇ ಎಲ್ಲೆಂದರಲ್ಲಿ ಆಂಜನೇಯ ದೈವಗಳನ್ನು ಕಾಣಬಹುದಾಗಿದೆ. ಈ ಬಗ್ಗೆ ಅಚ್ಚರಿ ಮೂಡಿಸಬಹುದಾದಂತಹ ಐತಿಹ್ಯಗಳು ಸಾಕಷ್ಟಿವೆ.

ಆನೆಗೊಂದಿಯು ಕೇವಲ ಪ್ರಾಗಿತಿಹಾಸ, ಪೌರಾಣಿಕ ಹಿನ್ನೆಲೆಯನ್ನು ಮಾತ್ರ ಹೊಂದಿರದೆ ವಿಜಯನಗರದ ಕಾಲಕ್ಕಿಂತಲೂ ಸುಮಾರು ೬೦೦ ವರ್ಷಗಳ ಪೂರ್ವದ ಇತಿಹಾಸವನ್ನು ಹೊಂದಿದೆ. ವಿಜಯನಗರದ ಅವನತಿಯ ನಂತರವೂ ಇದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದುದ್ದಾಗಿದೆ ಎಂಬುದು ಇಲ್ಲಿಯ ಜನರ ಹೆಮ್ಮೆಯ ವಿಚಾರ.

ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಪತನಾನಂತರ ಕನಕಗಿರಿ ರಾಜ್ಯ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಮುಂದುವರೆಯುತ್ತದೆ. ಆದರೆ ವಿಜಯನಗರದ ಅರವೀಡು ವಂಶಜರು ಚಂದ್ರಗಿರಿ, ಪೆನುಗೊಂಡೆಗೆ ಪಲಾಯನ ಮಾಡಿ ಅಲ್ಲಿಂದ ಆಡಳಿತ ಮುಂದುವರೆಸುತ್ತಾರೆ. ಆನೆಗೊಂದಿಯಲ್ಲಿ ಬಿಜಾಪುರ ಸುಲ್ತಾನನ ಪ್ರತಿನಿಧಿ ನೇಮಕವಾದರೂ ಗಂಗಾವತಿ ಪ್ರದೇಶದ ಚಂದ್ರಗಿರಿಯ ಅರವೀಡು ವಂಶದ ರಾಜರ ನಿಯಂತ್ರಣದಿಂದ ಸಂಪೂರ್ಣ ತಪ್ಪಿರಲಿಲ್ಲವೆಂದು ಕ್ರಿ.ಶ. ೧೬೧೨ರಲ್ಲಿ ಮೊದಲನೆಯ ವೆಂಕಟಪತಿ ದೇವರಾಯನು ಬುಕ್ಕಸಾಗರದ ಕರಿಸಿದ್ದೇಶ್ವರ ಮಠಕ್ಕೆ ಗಂಗಾವತಿ ತಾಲ್ಲೂಕಿನ ಕಲ್ಗುಡಿ ಗ್ರಾಮವನ್ನು ಜಂಗಮಾರ್ಚನೆಗೆಂದು ದಾನ ನೀಡಿದ ಸಂಗತಿಯಿಂದ ತಿಳಿಯಬಹುದು. (ಈ ಕಾರಣಕ್ಕಾಗಿ ಕಲ್ಗುಡಿಯು ಜಂಗಮರ ಕಲ್ಗುಡಿಯಾಗಿರಬೇಕು.) ಸ್ಥಳೀಯ ಜನರ ತೀವ್ರ ಪ್ರತಿರೋಧದಿಂದಾಗಿ ಆನೆಗೊಂದಿಯಲ್ಲಿದ್ದ ಆದಿಲ್‌ಶಾಹಿಯ ಪ್ರತಿನಿಧಿ ಪಲಾಯನ ಮಾಡಲು ಅರವೀಡು ವಂಶದ ಅಳಿಯ ರಾಮರಾಯನ ಮಗ ನಾಲ್ಕನೇ ರಂಗನ ವಂಶಸ್ಥರ ಆಳ್ವಿಕೆಗೆ ಒಳಪಟ್ಟಿತು. ೧೨ನೇ ಶತಮಾನದಲ್ಲಿ ಮೊಗಲರ ಚಕ್ರವರ್ತಿಯ ವಶದಲ್ಲಿದ್ದು, ೧೬೫೭ರಲ್ಲಿ ಬಿಜಾಪುರದ ದಂಡಾಧಿಪತಿ ಷಹಜಿಯು ೧೭೪೯ರಲ್ಲಿ ಮರಾಠ ಪೇಶ್ವೆಗಳ, ೧೭೭೪ರಲ್ಲಿ ಹೈದರಾಲಿಯ ಮತ್ತು ೧೭೮೬ರಲ್ಲಿ ಟಿಪ್ಪುಸುಲ್ತಾನನ ವಶವಾಯಿತು. ೧೭೫೦ರಲ್ಲಿ ಬ್ರಿಟೀಷರು, ಹೈದರಾಬಾದಿನಲ್ಲಿ ನಿಜಾಮ ಮತ್ತು ಪೇಶ್ವೆಯವರ ನಡುವೆ ಆದ ಒಪ್ಪಂದದಲ್ಲಿ ಆನೆಗೊಂದಿ ಸಂಸ್ಥಾನವನ್ನು ಪುನಃ ಪ್ರತಿಷ್ಠಾಪಿಸಲಾಯಿತು. ಅದಕ್ಕೆ ಶ್ರೀಮದ್ ರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ವೀರತಿರುಮಲ ವಿದ್ಯಾ ವಿಜಯನಗರ ನರಪತಿ ಸಂಸ್ಥಾನವೆಂದು ಹೆಸರಿತ್ತು. ಈ ಸಂಸ್ಥಾನದ ರಾಣಿ ಕುಪ್ಪಮ್ಮನವರು ಜನಾನುರಾಗಿಯಾಗಿದ್ದರು. ರಾಣಿ ಕುಪ್ಪಮ್ಮನವರ ಗಂಡ ಕೃಷ್ಣದೇವರಾಯನು ಚಿಕ್ಕವರಿರುವಾಗಲೇ ತೀರಿಕೊಂಡದ್ದರಿಂದ ಆನೆಗೊಂದಿ ಸಂಸ್ಥಾನಕ್ಕೆ ಶ್ರೀಮತಿ ರಾಣಿ ಕುಪ್ಪಮ್ಮನವರೇ ಮುಂದುವರೆಯುತ್ತಾರೆ. ಶ್ರೀ ಕೃಷ್ಣದೇವರಾಯನಿಗೆ ಇಬ್ಬರು ಹೆಂಡಿರು. ಒಬ್ಬರು ಕುಪ್ಪಮ್ಮ ಇನ್ನೊಬ್ಬರು ಇಜ್ಜಮ್ಮ. ಇವರಿಬ್ಬರಿಗೂ ಮಕ್ಕಳಿಲ್ಲದ ಕಾರಣ ಇವರ ತಮ್ಮ ಶ್ರೀ ಪಂಪಾವತಿ ರಾಜ (ಇವರ ಇನ್ನೊಂದು ಹೆಸರು ಶ್ರೀ ರಂಗದೇವರಾಯ ಎಂತಲೂ ಇದೆ) ಇವರಿಗೆ ಮೂರು ಜನ ಗಂಡು ಮಕ್ಕಳು, ಇಬ್ಬರು ಹೆಣ್ಣುಮಕ್ಕಳು. ಅವರು ಹೆಸರು ಇಂತಿವೆ. ೧. ರಾಜ ದರ್ಬಾರ ಶ್ರೀ ರಾಜ ಕೃಷ್ಣದೇವರಾಯ, ೨. ಶ್ರೀರಾಜ ತಿರುಮಲ ದೇವರಾಯ, ೩. ಶ್ರೀ ರಾಜ ವೆಂಕಟದೇವರಾಯ, ಇವರಲ್ಲದೆ ಇಬ್ಬರು ಹೆಣ್ಣುಮಕ್ಕಳು. ಶ್ರೀಮತಿ ರಾಣಿ ಕುಪ್ಪಮ್ಮನವರು ಆನೆಗೊಂದಿ ಸಂಸ್ಥಾನಕ್ಕೆ ಮಕ್ಕಳಿಲ್ಲದ ಕಾರಣ ತನ್ನ ತಮ್ಮನಾದ ಶ್ರೀರಂಗದೇವರಾಯನನ್ನು ದತ್ತಕ್ಕೆ ಸ್ವೀಕಾರ ಮಾಡುತ್ತಾರೆ. ಅಂದಿನಿಂದ ರಾಜಾ ಶ್ರೀರಂಗದೇವರಾಯನು ಯುವರಾಜನಿಗೆ ನೇಮಕವಾಗುತ್ತಾನೆ. ಸ್ವತಂತ್ರ ನಂತರ ಇವರ ಮನೆತನದ ಗೌರವ ಗುರ್ತಿಸಿ ರಾಜ್ಯ ಸರಕಾರ

ಗೌರವ ಧನವನ್ನು (ಪಿಂಚಣಿ) ಕೊಡಲಾರಂಭಿಸಿತು. ಶ್ರೀಕೃಷ್ಣದೇವರಾಯ ರಾಜನಾದ ನಂತರ ಈ ಭಾಗ ಹೈದರಾಬಾದ್ ಪ್ರಾಂತ್ಯಕ್ಕೆ ಸೇರುತ್ತದೆ. ಆನೆಗೊಂದಿ ಸಂಸ್ಥಾನ ಆಗಿನ ರಾಯಚೂರು ಜಿಲ್ಲೆ ಈಗಿನ ಕೊಪ್ಪಳ ಜಿಲ್ಲೆ ಹಾಗೂ ಬಳ್ಳಾರಿ ಜಿಲ್ಲೆಗಳು ಕೇಂದ್ರ ಬಿಂದುವಾಗಿದ್ದು ಸಂಸ್ಥಾನದ ಕಾಲಕ್ಕೆ ಆನೆಗೊಂದಿ ಕಂದಾಯ ೬ ಲಕ್ಷಗಳ ಮೇಲ್ಪಟ್ಟು ವಸೂಲಿ ಇದ್ದುದಾಗಿ ತಿಳಿಯುತ್ತದೆ. ಸಂಸ್ಥಾನದ ಅವಧಿಯ ನ್ಯಾಯಾಂಗ ವ್ಯವಸ್ಥೆ, ಆಡಳಿತ ವ್ಯವಸ್ಥೆ, ರಕ್ಷಣಾ ವ್ಯವಸ್ಥೆ, ಧರ್ಮ ಸಹಿಷ್ಣುತೆ, ಆರ್ಥಿಕ ವ್ಯವಸ್ಥೆ ಮುಂತಾದವುಗಳು ಉತ್ತಮವಾಗಿದ್ದವು. ಒಟ್ಟಾರೆಯಾಗಿ ಆನೆಗೊಂದಿ ಸಂಸ್ಥಾನವು ರಾಜ ಮಹಾರಾಜರ ಉತ್ತಮ ಆಡಳಿತ ಮತ್ತು ಶೌರ್ಯ ಪರಾಕ್ರಮಗಳಿಗೆ ಸಾಕ್ಷಿಯಾಗಿತ್ತು ಎಂಬುದು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. ಆನೆಗೊಂದಿ ಸಂಸ್ಥಾನದ ವಂಶಜರಾದ ಶ್ರೀರಾಜಾ ಅಚ್ಯುತದೇವರಾಯ, ಶ್ರೀರಾಮ ದೇವರಾಯ, ಶ್ರೀ ಶ್ರೀರಂಗದೇವರಾಯಲುರವನ್ನು ಇನ್ನೂ ಮುಂತಾದವರನ್ನು ಈಗಲೂ ನಾವು ಕಾಣಬಹುದಾಗಿದೆ.

ಅತ್ಯಂತ ಪ್ರಸಿದ್ಧ ಚಾರಿತ್ರಿಕ ಸ್ಥಳವಾದ ಆನೆಗೊಂದಿಯು ವಿಜಯನಗರದ ಮೊದಲ ರಾಜಧಾನಿಯಾಗಿತ್ತು. ಆನೆಗೊಂದಿಯ ಚಾರಿತ್ರಿಕ ಕಾಲದಲ್ಲಿ ಕಲ್ಯಾಣ ಚಾಲುಕ್ಯರು, ವಿಜಯನಗರ ಅರಸರ ಆಳ್ವಿಕೆಗೆ ಒಳಗಾಗಿತ್ತು. ನಂತರ ಮರಾಠರ, ಟಿಪ್ಪುಸುಲ್ತಾನನ ಅಧೀನದಲ್ಲಿತ್ತು. ವಿಜಯನಗರ ಪತನಾನಂತರ ಅರವೀಡು ಮನೆತನದವರು ಇಲ್ಲಿ ಆಳ್ವಿಕೆ ನಡೆಸಿದರು. ೧೭೫೦ರಲ್ಲಿ ಬ್ರಿಟೀಷರು ಹೈದರಾಬಾದಿನ ನಿಜಾಮ ಮತ್ತು ಪೇಶ್ವೆಯವರ ನಡುವೆ ಆದ ಒಪ್ಪಂದದಂತೆ ಆನೆಗೊಂದಿ ಸಂಸ್ಥಾನವನ್ನು ಪುನಃ ಪ್ರತಿಷ್ಠಾಪಿಸಲಾಯಿತು. ಅದಕ್ಕೆ ಶ್ರೀಮದ್ ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರಪ್ರತಾಪ ವೀರತಿರುಮಲ ವಿದ್ಯಾ ವಿಜಯನಗರ ನರಪತಿ ಸಂಸ್ಥಾನವೆಂದು ಹೆಸರಿತ್ತು. ಈ ಸಂಸ್ಥಾನದ ರಾಣಿ ಕುಪ್ಪಮ್ಮನವರು ಜನಾನುರಾಗಿಯಾಗಿದ್ದರೆಂದು ಜನ ಈಗಲೂ ಹೇಳುತ್ತಾರೆ. ರಾಜಕೀಯ ಅನೇಕ ಸ್ಥಿತ್ಯಂತರಗಳನ್ನು ಕಂಡ ಆನೆಗೊಂದಿ ಸಂಸ್ಥಾನ ಹುಲಿಹೈದರ್‌ದಂತೆ ೧೯೪೮ರಲ್ಲಿ ಹೈದರಾಬಾದ್ ವಿಮೋಚನೆಯೊಂದಿಗೆ ಭಾರತ ಸರಕಾರದಲ್ಲಿ ವಿಲೀನವಾಯಿತು. ಇಂತಹ ಸುದೀರ್ಘ ಇತಿಹಾಸವನ್ನು ಹೊಂದಿ, ಐತಿಹಾಸಿಕವಾಗಿ, ಪೌರಾಣಿಕವಾಗಿ, ಸಾಂಸ್ಕೃತಿಕವಾಗಿ ಸಮೃದ್ಧಿ ಹೊಂದಿದ ಆನೆಗೊಂದಿಯಲ್ಲಿ ಜನಪದರ ಬದುಕು, ಭಾವನೆ, ಐತಿಹಾಸಿಕ, ಪೌರಾಣಿಕವಾಗಿ ಹೊಂದಿದ ಭಾವನೆಗಳು, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ ಸಂಬಂಧಗಳು ಹೇಗಿದ್ದವು ಎಂಬುದನ್ನು ಮುಂದಿನ ಭಾಗದಲ್ಲಿ ವಿವರವಾಗಿ ನೋಡಬಹುದಾಗಿದೆ.

### ೩.೨. ಆನೆಗೊಂದಿಯ ಹುಟ್ಟು ಅಥವಾ ಮೂಲ

ವಿಜಯನಗರದ ಮೊದಲ ರಾಜಧಾನಿಯಾಗಿ ಆನೆಗೊಂದಿ ಪ್ರಸಿದ್ಧಿ ಪಡೆಯಿತು. ಅಂತೆಯೇ ನ್ಯೂನಿಜ್ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಹೇಳಿದ್ದಾನೆ. ವಿಜಯನಗರ ಕಾಲದಲ್ಲಿ ಅರಸರು ಇಲ್ಲಿ ಆನೆಗಳನ್ನು ಕಟ್ಟುತ್ತಿದ್ದರಿಂದ ಇದಕ್ಕೆ ಆನೆಗೊಂದಿ ಎಂದು ಹೆಸರು ಬಂದಿತೆಂದು ಹೇಳಲಾಗುತ್ತದೆ. ಶಾಸನಗಳಲ್ಲಿ ಇದನ್ನು ಕುಂಜರಕೋಣ, ಹಸ್ತಿನಾವತಿ ಎಂತಲೂ ಕರೆಯಲಾಗಿದೆ. ಆನೆಗೊಂದಿಯನ್ನು ೧೦-೧೧ನೇ ಶತಮಾನಗಳಲ್ಲಿ ಕಲ್ಯಾಣ ಚಾಲುಕ್ಯರ ಅರಸ ಆಹವಮಲ್ಲ ಎರಡನೇ ತೈಲನ ಶಾಸನವೊಂದು

ಪಂಪಾಸರೋವರದ ಬಳಿ ಇದೆ. ವಿಜಯನಗರದ ಪತನಾನಂತರ ಅರವೀಡು ಸಂತತಿಯ ವಂಶಜರು ಆನೆಗೊಂದಿಯನ್ನು ತಮ್ಮ ಅದೀನಕ್ಕೆ ತೆಗೆದುಕೊಂಡು ಆಳಿದರು. ಇವರ ಕಾಲದಲ್ಲಿ ಆನೆಗೊಂದಿ ನರಪತಿ ಸಂಸ್ಥಾನವೆಂದು ಕರೆಯಲ್ಪಡುತ್ತಿತ್ತು.

**ಜಾನಪದ ತ್ರಿಪದಿಯಲ್ಲಿ**

ಹಂಪಿಯ ಹೊಳಿಚಂದ ಪಂಪನ ಗುಡಿಚಂದ
ಹೇಮಾದ್ರಿ ಚಂದ ಪರಿಸಿಗೆ ಆನೆಗೊಂದಿ
ರಾಜರಿಗೆ ಚಂದ ಪ್ರಜೆಗಳು
ಎಂಬಲ್ಲಿ ಆನೆಗೊಂದಿ ಹೆಸರು ಕಂಡುಬರುತ್ತದೆ.

ಐತಿಹಾಸಿಕವಾಗಿ ಇದರ ಹೆಸರು ಅನೇಕ ಪಲ್ಲಟಗಳಿಗೊಳಗಾಗಿ ಇಂದು ರೂಢಿಯಲ್ಲಿ ಆನೆಗುಂದಿಯಾಗಿ ಉಳಿದಿದೆ.

**ಆನೆಗೊಂದಿ ಜಹಗೀರಾಗಿ ರೂಪುಗೊಂಡಿದ್ದು :** ೧೭೯೦ರ ಹೈದರಾಬಾದ್ ನಿಜಾಮ ಮತ್ತು ಮರಾಠ ಪೇಶ್ವಗಳ ನಡುವೆ ಆದ ಒಪ್ಪಂದದಂತೆ ಆನೆಗೊಂದಿಯನ್ನು ಜಹಗೀರನ್ನಾಗಿ ರೂಪಿಸಲಾಗಿತ್ತು.

### ೩.೩. ಪುರಾಣಗಳು

**ಸ್ಕಂದ ಪುರಾಣ:** ಆನೆಗೊಂದಿಯ ಪಶ್ಚಿಮ ಭಾಗದಲ್ಲಿರುವ ಈಗಿನ ಪಂಪಾಸರೋವರ ಆಗಿನ ಪ್ರಸಿದ್ಧ ಪುಣ್ಯ ಕ್ಷೇತ್ರವಾದ ಪಂಪಾಕ್ಷೇತ್ರವೆನಿಸಿತ್ತೆಂದು ಸ್ಕಂದ ಪುರಾಣಾದಿಯಾಗಿ ಅನೇಕ ಸಂದರ್ಭ ಸನ್ನಿವೇಶಗಳಿಂದ ತಿಳಿದು ಬರುತ್ತದೆ. ಆನೆಗೊಂದಿ ಸ್ಥಳ ಪುರಾಣಗಳಲ್ಲಿ ನದಿ, ಬೆಟ್ಟ, ಋಷಿಗಳ ಉಲ್ಲೇಖವಿದೆ. ಸ್ಕಂಧ ಪುರಾಣದಲ್ಲಿ ಪಂಪಾಮಹಾತ್ಮೆಯ ವರ್ಣನೆಯಿದೆ. ಪಂಪಾ ಮಹಾತ್ಮೆಯಲ್ಲಿ ಹಂಪೆಯ ಪರಿಸರ ಹಾಗೂ ಕ್ಷೇತ್ರ ಮಹಿಮೆಯ ವರ್ಣನೆಯನ್ನು ಸಾಂಗವಾಗಿ ಚಿತ್ರಿಸಲಾಗಿದೆ. ಬ್ರಹ್ಮನ ಮಗಳಾದ ಪಂಪಾದೇವಿ, ಶಿವನನ್ನು ಮದುವೆಯಾಗಲು ಹೇಮಕೂಟದ ಉತ್ತರಕ್ಕಿರುವ ಅರ್ಧಕೋಶ ದೂರದಲ್ಲಿ ವಿಪ್ರಕೂಟವೆಂಬ ಪರ್ವತದ ಬಳಿಯ ಸರೋವರದ ಈಗಿನ ಪಂಪಾಸರೋವರ ದಡದಲ್ಲಿ ಉಗ್ರವಾದ ತಪಸ್ಸು ಆಚರಿಸುತ್ತಾಳೆ. ಅವಳ ತಪಸ್ಸಿಗೆ ಮೆಚ್ಚಿದ ಶಿವ ಅವಳ ಇಚ್ಚೆಯಂತೆ ವಿವಾಹವಾಗಿ ಪಂಪಾವತಿ ಎನಿಸಿಕೊಳ್ಳುತ್ತಾನೆ. ಈ ಸ್ಥಳವನ್ನು ಪಂಪಾ ಕ್ಷೇತ್ರವೆಂದು ಕರೆದು ಅವಳು ತಪಸ್ಸು ಮಾಡಿದ ಸ್ಥಳವನ್ನು ಪಂಪಾ ಸರೋವರವೆಂದು ಖ್ಯಾತಿಯಾಗಲೆಂದು ವರ ಕೊಡುತ್ತಾನೆ. ನಂತರ ಇದು ಪಂಪಾದೇವಿ, ಪಂಪಾಪತಿ, ಪಂಪಾಕ್ಷೇತ್ರ, ಪಂಪಾಸರೋವರ, ಪಂಪಾಪುರವೆಂಬ ಮೊದಲಾದ ಹೆಸರಿನಿಂದ ಪ್ರಖ್ಯಾತಿಯಾಯಿತು. ಈ ಕ್ಷೇತ್ರದಲ್ಲಿ ೩ ಕೋಟಿ ತೀರ್ಥಗಳಿದ್ದು ಕಾಶಿಗಂಗೆಗೆ ಸಮಾನವೆನಿಸಿದ ತುಂಗಭದ್ರಾ ಎಂಬ ಪುಣ್ಯನದಿ ಹರಿಯುತ್ತದೆ. ಋಷಿಗಳ ಪೂರ್ವಾಶ್ರಮಗಳು ವಿರಾಜಿಸುತ್ತಿವೆ. ಇದು ಶಂಭುವಿನ ತಪೋಭೂಮಿಯೂ ಹೌದು. ಪಂಪಾಪತಿ, ಕಿನ್ನರೇಶ್ವರ, ಜಾಂಬುವಂತೇಶ್ವರ, ಸೋಮನಾಥ, ವಾಣಿಭದ್ರೇಶ್ವರ ಈ ಪಂಚಲಿಂಗಗಳು ಭಕ್ತರಿಗೆ ಮುಕ್ತಿಗೊಳಿಸುವಂತಹ ಸದಾಶಿವನ ಪಂಚಮುಖವಾಗಿ ಅವಿರ್ಭವಿಸಿ ಚಂದ್ರಾರ್ಕಾಗ್ನಿ ಕೋಟಿ ಪ್ರಕಾಶಗಳಿಂದ ಕಂಗೊಳಿಸುತ್ತವೆ. ಹೀಗೆ ಪೌರಾಣಿಕ ಶ್ರೇಷ್ಠತೆಯನ್ನು ಪಡೆಯಿತೆಂದು ವಿಧವಿಧವಾಗಿ

ಈ ಕ್ಷೇತ್ರವನ್ನು ಸ್ಕಂದ ಪುರಾಣ ವರ್ಣಿಸಿದೆ. ಇಂತಹ ಪವಿತ್ರ ಕ್ಷೇತ್ರದ ವರ್ಣನೆಯು ಸ್ಕಂದ ಪುರಾಣದಲ್ಲಿ ಬಂದಿರುವುದು ಈ ಭಾಗದ ಜನಪದರಿಗೆ ಹೆಮ್ಮೆಯ ಸಂಗತಿ ಎನಿಸಿದೆ.

**ವಿವಾಹ ಪುರಾಣ:** ಆನೆಗೊಂದಿಯ ಪಕ್ಕದ ಕಡೆಬಾಗಿಲಿನ ಬಳಿಯ ಹೊಲದಲ್ಲಿ ದೊರೆತ ತಾಮ್ರ ಶಾಸನದಲ್ಲಿ 'ವಿವಾಹ ಪುರಾಣ' ಹಾಗೂ 'ಅಮೃತ ಮಥನ ಪುರಾಣ'ಗಳೆಂಬ ಎರಡು ಕೃತಿ ರಚನೆಗಳಿರುವುದು ವಿಶೇಷ. ಎಂಟು ಪಟಗಳಲ್ಲಿರುವ ಶಾಸನದ ಕಾಲವನ್ನು ಕನ್ನಡ ಲಿಪಿ ಹಾಗೂ ಭಾಷೆಯ ಆಧಾರದಿಂದ ಇದು ಕ್ರಿ.ಶ.೧೩ನೆಯ ಶತಮಾನದೆಂದು ಹೇಳಬಹುದು. ಒಟ್ಟು ೨೬೯ ಸಾಲಿನಲ್ಲಿ ಎರಡು ಕೃತಿಗಳನ್ನು ರಚಿಸಲಾಗಿದೆ. ಇವುಗಳ ಸಾರಾಂಶ ಹೀಗಿದೆ. ತಾಮ್ರ ಶಾಸನವು ಕುಂಭೇಶ್ವರ ದೇವರ ಆರಾಧಕರಾದ ಆಯ್ಯಾ ಮಂತ್ರ ಪ್ರಶಸ್ತಿಯೊಂದಿಗೆ ಪ್ರಾರಂಭವಾಗುತ್ತದೆ. ಆಯ್ಯಾ ಮಂತ್ರ ಕುಂಬಾರ ಕುಲವು ಮಹದೇವ ಹಾಗೂ ಗಿರಿ ದೇವಿಯರ ವಿವಾಹದ ನಿಮಿತ್ಯವಾಗಿ ಹುಟ್ಟಿತೆಂದು ತಿಳಿಸಿ ಈ ಶಿವ ಪಾರ್ವತಿಯರ ಕಲ್ಯಾಣದ ವಿಷಯವನ್ನು ವಿವಾಹ ಪುರಾಣವೆಂದು ಬಣ್ಣಿಸಲಾಗಿದೆ.

ಕೃತ ಯುಗದ ದೇವ ಮಾನವರಿಗೆ ವ್ಯತ್ಯಾಸವಿರಲಿಲ್ಲ. ಷಡ್ದರ್ಶನ ಸಮಯವಾಗಲಿ ನೊಂಪಿ ವೃತ್ತಗಳಾಗಲಿ, ಶಿವದೀಕ್ಷೆಯಾಗಲಿ ಇರಲಿಲ್ಲ. ಬಾಸಿಂಗ, ಪೂಜೆ, ಸೊಂನಲಗೆಯಾಗಲಿ ಇರಲಿಲ್ಲ. ಗಿರಿರಾಜ (ಹಿಮಾಲಯ)ನ ಪುತ್ರಿದೇವಿ (ಪಾರ್ವತಿ) ಮಹದೇವನನ್ನು ಪಡೆಯಲು ನಿರ್ಧರಿಸಿ ಪರ್ವತದ ಬಳಿಗೆ ತಪಸ್ಸನ್ನಾಚರಿಸಲು ಬರುವಳು. ಆ ಪರ್ವತದಲ್ಲಿ ಪ್ರಾಣಿಗಳು ಜಾತಿ ವೈರವನ್ನು ಬಿಟ್ಟು ಒಟ್ಟಿಗೆ ಸಂತೋಷದಿಂದ ವಿಹರಿಸುತ್ತಿದ್ದವು. ಕ್ರೂರ ಮೃಗಗಳಿಗೆ ಅಂಜದೆ ಪಾರ್ವತಿ ದೇವಿಯು ಪಂಚಾಗ್ನಿ ಮಧ್ಯದಲ್ಲಿ ತಪಸ್ಸಿಗೆ ನಿಲ್ಲುವಳು. ಇತ್ತ ಮಹಾದೇವನು ಬೇಟೆಯಾಡಬೇಕೆಂದು ಬೇಡನ ವೇಷದಲ್ಲಿ ಕಾಮದೇವ ಹಾಗೂ ಇತರ ದೇವತೆಗಳೊಂದಿಗೆ ಗಿರಿರಾಜ ಪುತ್ರಿ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬರುತ್ತಾನೆ. ಪಂಚಾಗ್ನಿ ಮಧ್ಯ ತಪಸ್ಸನ್ನಾಚರಿಸುತ್ತಿದ್ದ ಕನ್ಯೆಯನ್ನು ಕಂಡ ಮಹದೇವನು ಆಕೆಯೆಡೆಗೆ ಮೋಹಿತನಾಗಿ, ಮದುವೆಯಾಗಬೇಕೆಂದು ಬಯಸುತ್ತಾನೆ. ಆಗ ಕಾಮದೇವನು ಗಿರಿರಾಜನ ಬಳಿ ರಾಯಭಾರಕ್ಕಾಗಿ ಹಿರಿಯನಾದ ನಾರಾಯಣ, ಪುರಾಣ ಪುರುಷ ಬ್ರಹ್ಮ ಬುದ್ಧಿವಂತನಾದ ಬೃಹಸ್ಪತಿ, ದೇವೇಂದ್ರ ಈ ನಾಲ್ವರನ್ನು ಕಳುಹಿಸಿದನು. ಇವರು ಗಿರಿರಾಜನ ಆಸ್ಥಾನಕ್ಕೆ ತೆರಳಿ ಮಹಾದೇವನ ಆಸೆಯನ್ನು ತಿಳಿಸುತ್ತಾರೆ. ಗಿರಿರಾಜನು ಮಗಳನ್ನು ಕೊಡಲು ಒಪ್ಪುತ್ತಾನೆ. ಮಹದೇವನು ಅಷ್ಟ ದಿಕ್ಪಾಲಕರು ಹಾಗೂ ದೇವತೆಗಳೊಂದಿಗೆ ಗಿರಿರಾಜನ ನಗರವನ್ನು ಪ್ರವೇಶಿಸುತ್ತಾನೆ. ದೇವತೆಗಳು ಶಿವನನ್ನು ಶೃಂಗಾರ ಮಾಡಿ ಪುರದಲ್ಲಿ ಮೆರವಣಿಗೆ ಮಾಡಿಕೊಂಡು ವಿವಾಹ ಮಂಟಪಕ್ಕೆ ಕರೆತರುತ್ತಾರೆ. ಮದುವೆ ಮಂಟಪದಲ್ಲಿ ಧಾರೆಯನೆರೆಯಲು ಬೇಕಾದ ಕಳಸ, ಜಗುಲಿಗೆ ಹೂಜೆಗಳಿರಲಿಲ್ಲ. ಆಗ ಶಿವನು ತನ್ನ ದಿವ್ಯ ದೃಷ್ಟಿಯಿಂದ ನಾರಾಯಣನ ಕೈಯ್ಯಲ್ಲಿಯ ಚಕ್ರವನ್ನು ತಿಗುರಿ ಮಾಡಿ, ಬ್ರಹ್ಮನ ಪುಸ್ತಕದ ಕಂಬಿಯನ್ನು ತಿಗುರಿಗೆ ಆಧಾರದ ಕಂಬಿಯನ್ನಾಗಿಸಿ ಮಹಾದೇವನ ಲಾಕುಳ ದಂಡವನ್ನು ತಿಗುರಿ ತಿರುಗಿಸುವ ಕೋಲನ್ನಾಗಿಸಿ, ದೇವರ ಕಚ್ಚುಟವನ್ನು ಬನ್ನ ಕಲೆಯನ್ನಾಗಿಸಿ, ಬ್ರಹ್ಮನ ಕೃಷ್ಣಾಜಿನವನ್ನು ಮಮ್ಮಾರ್ಮಾಡಿ, ತನ್ನ ಕೊರಳ ಯಜ್ಞೋಪವೀತವನ್ನು ಕೊರೆದಾರವನ್ನಾಗಿಸಿ, ತ್ರಿಪುರವನ್ನು ಸುಟ್ಟು

ಬೂದಿಯಿಂದ ಕರೋಟ ಮಾಡಿ, ತ್ರಿಪುರ ರಾಕ್ಷಸರ ಕನ್ನಡಿ ಎಲುಬನ್ನು ಸಣಾಹು ಮಾಡಿ, ಗುಂಡಿಗಳನ್ನು ಗುಂಡ ಮಾಡಿ, ಸೂರ್ಯನಿಂದ ಪಡೆದ ಗಾಳಿಯಿಂದ ಹೊಲೆಯನ್ನು ಸೃಷ್ಟಿಸಿ ಯಮನ ಕೋಣಸಿಂದ ಮಣ್ಣನ್ನು ಎಚ್ಚಿಸಿ, ಹೂಜೆ, ಸೊನ್ನಲಿಗೆ, ಕುಂಭ ಮೊದಲಾದ ವಸ್ತುಗಳನ್ನು ಮಾಡಲಾಯಿತು. ಆ ಬಾಂಡಗಳನ್ನು ಸುಟ್ಟು ಬಣ್ಣಗಳಿಂದ ಅಲಂಕರಿಸಲಾಯಿತು. ಆಗ ಗಿರಿರಾಜನು ಮಹದೇವರ ಪಾದಗಳನ್ನು ತೊಳೆದ ಯಜ್ಞೋಪವೀತ ದೂರ್ವೆಗಳನ್ನು ಕೊಟ್ಟು, ಒಳಗೆ ಕರೆದೊಯ್ದು ವೇದವನ್ನೋದುತ್ತಾ ಅಕ್ಕಿಯ ಪಡಗೆಯನ್ನು ಪರಿಸುತ್ತಾನೆ. ಮದುವೆ ಮಂಟಪದಲ್ಲಿ ಜಗಲಿಯ ಮೇಲೆ ದೇವಿಯ ಮಹದೇವನ ಬಲಭಾಗದಲ್ಲಿ ಕೂಡುವಳು. ವಿಶ್ವಾಮಿತ್ರನು ಅಶ್ವಥ ಪತ್ರಗಳನ್ನು ತಂದು ಜಾಜದಿಂದ ಸಮಚತುರಸ್ರ ಮಂಡಲವನ್ನು ಮಾಡಿ ಅಗ್ರೋದಕವನ್ನು ತುಂಬಿದ ಕಳಸವನ್ನು ಇಡುವನು. ವಿಶಿಷ್ಟ ಮುನಿಯ ಅಗ್ನಿಯನ್ನು ತಂದು ಮಂಡಲದ ಮೇಲಿಡುವನು. ವಿಶ್ವಾಮಿತ್ರನು ತಾಮ್ರದ ಬಟ್ಟಲುಗಳಲ್ಲಿ ಆಗ್ರೋದಕ ಮತ್ತು ತೈಲಗಳನ್ನು ಹಾಗೂ ಅಶ್ವಥ ಪತ್ರಗಳನ್ನು ತೆಗೆದುಕೊಂಡು ಇತರ ಋಷಿಗಳೊಡಗೂಡಿ ಮಂತ್ರಗಳನ್ನು ಹೇಳಿ ಹೋಮವನ್ನು ಮಾಡುತ್ತಾನೆ. ನಂತರ ಬಲಭಾಗದಲ್ಲಿನ ದೇವಿಯನ್ನು ಎಡದೆಸೆಗೆ ತಂದು ವೇದಾರ್ಥದಿಂದ ಅಗ್ನಿಯನ್ನು ಸ್ತುತಿಸಿ, ನವಗ್ರಹ ಪೂಜೆಯನ್ನು ಮಾಡಿ ಮದುವೆಯನ್ನು ಮುಗಿಸುತ್ತಾನೆ. ಮಹದೇವನು ಗಿರಿಜಾ ಸಮೇತ ನಂದಿಯನ್ನೇರಿ ಕೈಲಾಸಕ್ಕೆ ಹೊರಡುತ್ತಾನೆ. ಶಿವ ಪಾರ್ವತಿಯರ ವಿವಾಹಕ್ಕೆ ಸಂಬಂಧಿಸಿದಂತೆ ಹಂಪೆಯಲ್ಲಿದ್ದ ಹರಿಹರನು ೧೩ನೇ ಶತಮಾನದಲ್ಲಿ ಗಿರಿಜಾ ಕಲ್ಯಾಣವನ್ನು ರಚಿಸಿದ್ದಾನೆ. ಸ್ವಲ್ಪ ಮಟ್ಟಿಗೆ ಶಾಸನದ ಈ ವಿಷಯ ಗಿರಿಜಾ ಕಲ್ಯಾಣವನ್ನು ಹೋಲುತ್ತದೆ.

**ಅಮೃತ ಮಥನ ಪುರಾಣ**

ಆನೆಗೊಂದಿ ಪರಿಸರದ ಕಡೆಬಾಗಿಲಿನಲ್ಲಿ ದೊರೆತ ಮತ್ತೊಂದು ತಾಮ್ರಶಾಸನದಲ್ಲಿ ಅಮೃತಮಥನ ಪುರಾಣ ಪ್ರಾರಂಭವಾಗುತ್ತದೆ. ಶಾಸನದಲ್ಲಿ ೨೧ಲನೇ ಸಾಲಿನಿಂದ ಅಮೃತ ಮಥನ ಪುರಾಣ ಪ್ರಾರಂಭವಾಗುತ್ತದೆ. ಸುರಾಸುರರು ಬೃಹಸ್ಪತಿ ಮತ್ತು ಶುಕ್ರನನ್ನು ಕರೆದು ಅಮೃತವನ್ನು ಮಥಿಸಲು ಆಲೋಚಿಸುತ್ತಾರೆ. ಆಗ ಇಬ್ಬರು ಶಿವನನ್ನು ಬಿಟ್ಟು ಈ ಕಾರ್ಯವನ್ನು ಮಾಡಲು ಅಸಾಧ್ಯವಿಲ್ಲವೆಂದು ತಿಳಿಸುತ್ತಾರೆ. ಆಗ ಹರಿ ಬ್ರಹ್ಮ ದೇವೇಂದ್ರ ಮುಂತಾದ ದೇವತೆಗಳು ಮತ್ತು ಶುಂಭ ವಿಶುಂಭ, ಕೈಟಭ, ಸಿಂಹಾಸುರ, ಗಜಾಸುರ, ವ್ಯಾಘ್ರಸುರ, ಮುಂತಾದ ರಾಕ್ಷಸರು ಶಿವನಲ್ಲಿಗೆ ಬಂದು ಜಯಕಾರ ಹೇಳಿ, ಸ್ತುತಿಸಿ, ನಮಸ್ಕರಿಸಿ, ಅಮೃತ ಮಥನವನ್ನು ಮಾಡುವ ಯೋಚನೆಯನ್ನು ತಿಳಿಸುವರು. ಸುರಶೈಲವನ್ನು (ಮಂದಾರ ಪರ್ವತ) ಕಡಗೋಲವನ್ನಾಗಿ ಮಾಡಿ, ಉರಗ ರಾಜ (ವಾಸುಕಿಸರ್ಪ) ಹಗ್ಗವನ್ನಾಗಿ ಮಾಡಿ, ಹರಿಯನ್ನು ಅಮೃತವನ್ನು ತರಲು ನಿಯಮಿಸಲಾಗುವುದು. ಹರಿತರುವ ಅಮೃತವನ್ನು ತರಲು ನಿಯಮಿಸಲಾಗುವದು. ಹರಿತರುವ ಅಮೃತವನ್ನು ತುಂಬಿಡುವುದಕ್ಕಾಗಿ ಗಿರಿಜೆ ಒಂದು ದೊಡ್ಡ ಕುಂಭವನ್ನು ಕೊಡುವಳು. ದೇವತೆಗಳೆಲ್ಲ ವಾಸುಕಿಯ ತಲೆಭಾಗವನ್ನು ಹಿಡಿದು ನಿಲ್ಲುವರು. ಇದನ್ನು ಕಂಡು ಅಸುರರಾದ ಸಿಂಹಾಸುರ, ವ್ಯಾಘ್ರಾಸುರ ಮತ್ತು ಮಹಿಷಾಸುರ ಕೋಪಗೊಳ್ಳುವರು. ಅಸುರರು ತಮಗೆ ತಲೆಭಾಗಬೇಕೆಂದು ಕೇಳಿದಾಗ ದೇವತೆಗಳು ಅದನ್ನು

ಬಿಟ್ಟು ಬಾಲದ ಭಾಗವನ್ನು ಹಿಡಿಯುವರು. ಸಮುದ್ರ ಮಥನ ಪ್ರಾರಂಭವಾಗಲು ಸಮುದ್ರದಿಂದ (ಸಿರಿ), ವಾಣಿ (ಸರಸ್ವತಿ), ರಂಭೆ, ಸುರಭಿ, ಕಲ್ಪದ್ರುಮ, ಪಂಚಜನ್ಯ, ಸುರಗಜ, ತಾವರೆ, ಸಾರಂಗ, ಚಂದ್ರಹಾಸ, ವಜ್ರ, ೧೮ ಪಟ್ಟಣ, ೧೮ ಜಾತಿಗಳು ಅಮೃತದಲ್ಲಿ ಹುಟ್ಟುವದು. ಮಥನದಿಂದ ಹುಟ್ಟಿದ ವಸ್ತುಗಳಲ್ಲಿ ನಾರಾಯಣರಿಗೆ ಲಕ್ಷ್ಮೀ, ಪಾಂಚಜನ್ಯನೆಂಬ ಶಂಖ, ಸುದರ್ಶನವೆಂಬ ಚಕ್ರ, ಕಾಮೋದರೆ ಎಂಬ ಗದೆ, ಸಾರಂಗವೆಂಬ ಬಿಲ್ಲನ್ನು, ಬ್ರಹ್ಮನಿಗೆ ಸರಸ್ವತಿ, ಪಾಶ, ಅಂಕುಶ, ಪುಸ್ತಕವನ್ನು ದೇವೇಂದ್ರನಿಗೆ ರಂಭೆ, ಐರಾವತವೆಂಬ ಆನೆ, ಚೈತ್ರ ರಥವೆಂಬ ಕುದುರೆ, ವಜ್ರವನ್ನು, ಅಗ್ನಿ ದೇವನಿಗೆ ಟಗರನ್ನು, ಯಮನಿಗೆ ಕಾಲದಂಡ, ಕೋಣವನ್ನು, ನೈರುತ್ಯನಿಗೆ ರಾಕ್ಷಸನನ್ನು ವರುಣನಿಗೆ ಮಕರನನ್ನು, ವಾಯುದೇವನಿಗೆ ಎರಳೆ ಜಿಂಕೆಯನ್ನು, ಕುಬೇರನಿಗೆ ಕುದುರೆಯನ್ನು, ಈಶಾನ್ಯನಿಗೆ ನಂದಿಯನ್ನು ದೇವತೆಗಳಿಗೆ ಕಾಮಧೇನು ಕಲ್ಪವೃಕ್ಷ ಸೂರ್ಯನಿಗೆ ತಾವರೆ, ಚಂದ್ರಹಾಸ ಖಡ್ಗವನ್ನು ಕೊಟ್ಟು ೧೮ ಪಟ್ಟಣಗಳನ್ನು ಭೂಮಿಯ ಮೇಲೆ ನಿಲ್ಲಿಸಿ ಶಿವನು ಕೈಲಾಸಕ್ಕೆ ಹೋಗುತ್ತಾನೆ. ವಿವಾಹಪುರಾಣದಲ್ಲಿ ಶಿವನು ಕಾಮದೇವನನ್ನು ಸುಡುವ ಸಂಗತಿ ಇಲ್ಲ. ಬದಲಿಗೆ ಕಾಮದೇವನೇ ಶಿವನ ವಿವಾಹಕ್ಕೆ ರಾಯಭಾರಿಗಳನ್ನು ಕಳುಹಿಸುತ್ತಾನೆ. ಹಾಗೆ ಅಮೃತ ಮಥನ ಪುರಾಣದಲ್ಲಿ ಶಿವನು ಹಾಲಾಹಲವನ್ನು ಕುಡಿಯುವ ವಿಷಯವಿಲ್ಲ.

# ಅಧ್ಯಾಯ : ನಾಲ್ಕು

# ಆನೆಗೊಂದಿಗೆ ಸಂಬಂಧಿಸಿದ ಜನಪದ ಸಾಹಿತ್ಯ

ಅಧ್ಯಾಯ ೪

# ಆನೆಗೊಂದಿಗೆ ಸಂಬಂಧಿಸಿದ ಜನಪದ ಸಾಹಿತ್ಯ

ಆನೆಗೊಂದಿ ಜಾನಪದಕ್ಕೆ ಸಂಬಂಧಿಸಿದ ಹಾಗೆ ಈ ಕೆಳಗಿನ ಮೌಖಿಕ ಸಾಹಿತ್ಯ ಪ್ರಕಾರಗಳು ಲಭ್ಯವಿವೆ. ಕಾವ್ಯಗಳು, ಕಥನ ಕಾವ್ಯಗಳು, ತ್ರಿಪದಿಗಳು, ಐತಿಹ್ಯಗಳು, ಗಾದೆಗಳು ಮತ್ತು ಶಿಶು ಪ್ರಾಸಗಳು ಇತ್ಯಾದಿ.

## ೪.೧. ಕಾವ್ಯಗಳು

ಆನೆಗೊಂದಿಯು ರಾಮಾಯಣ ಕಾಲದ ಕಿಷ್ಕಿಂದೆ ಎಂಬುದು ಈ ಭಾಗದಲ್ಲಿ ಜನಜನಿತ. ಆದುದರಿಂದ ಐತಿಹಾಸಿಕ ಆನೆಗೊಂದಿಗೆ ಕಾವ್ಯಗಳಲ್ಲಿ ಪೌರಾಣಿಕ ಆಯಾಮಗಳನ್ನು ನೀಡಿದೆ. ರಾಮಾಯಣದ ಸನ್ನಿವೇಶಗಳನ್ನು ಸಾರುವ ಇಲ್ಲಿಯ ಪ್ರತಿಯೊಂದು ಐತಿಹ್ಯಗಳು ಈ ಭಾಗದ ಜನರಿಗೆ ಇತಿಹಾಸಕ್ಕಿಂತಲೂ ರಾಮಾಯಣದ ಕಥಾನಕವೇ ಹೆಚ್ಚು ಒಲವು ಮೂಡಿಸಿದೆ. ಆನೆಗೊಂದಿಯ ಬೆಟ್ಟ ಸಮೂಹಗಳು ರಾಮಾಯಣದ ವಾನರರು ಸೇತುವೆಗಾಗಿ ತಂದು ಬಿಟ್ಟ ಕಲ್ಲುಗಳು. ಅಂದಿನ ವಾನರರೇ ಇಂದಿಗೂ ಈ ಪ್ರದೇಶದಲ್ಲಿ ಕೋತಿಗಳ ರೂಪದಲ್ಲಿ ವಿಹರಿಸುತ್ತಾರೆ ಎಂದು ನಂಬಿದ ಜನತೆಯಲ್ಲಿ ಈ ಬಗ್ಗೆ ಹಾಡುವ ಹಾಡುಗಳನ್ನು ಗಮನಿಸಬಹುದು.

### ವಿಧಿಯವ್ವನ ಹಾಡು

ಈ ಗ್ರಾಮದಲ್ಲಿ ವಿದಿಯವ್ವನ ಹಾಡು ದೊರಕುತ್ತದೆ. ಇದರ ಒಂದು ಪಾಠ ಈ ರೀತಿಯಾಗಿದೆ.

ವಿದಿಯವ್ವ ವಿಧಿಯವ್ವ ಹಣೆ ಬರಹ ಏನು ಬರೆದೇ ಸುವ್ವಿ
ವಿದಿಯವ್ವ ವಿಧಿಯವ್ವ ಏನೇನ ಬರೆದೇ

ನಿನಗೆ ನಿಮ್ಮ ತಂಗೀಗೆ ಒಂದೇಲೆ ಬರದೀನಿ
ನಿನಗೆ ನಿಮ್ಮ ತಂಗೀಗೆ ಲಗ್ನಾವ ಬರದೀನಿ
ಹಾಗಂತ ಮಾತ ಕೇಳಿ ತೋಟದಾರಿ ಹಿಡಿದಾನೆ
ತೋಟವಾರಿ ಹಿಡಿದ್ಯಾನೆ ತೋಟದಾರಿ ಹೋಗ್ಯಾನೆ
ತೋಟದ್ಯಾಕ್ಕೆ ಹೋಗ್ಯಾನೆ ಬಾಳಿದೆಲೆಯ ಕೊಯ್ದಾನೆ
ಬಾಳಿದೆಲೆಯ ಕೊಯ್ದಾನೆ ತೊಟ್ಟಾಲ ಕಟ್ಟಾನೆ
ತೊಟ್ಟಲ ಕಟ್ಯಾನೆ ಕೂಸ ತೆಗೆದು ತೊಟ್ಟಲಕ್ಕ ಹಾಕಿ
ಕೂಸ ತೆಗೆದು ತೊಟ್ಟಲಕ್ಕ ಹಾಕಿ ತಲೆ ಮ್ಯಾಲೆ ಹೊತ್ತಾನೆ

ತಲೆಮ್ಯಾಲೆ ಹೊತ್ತಾನೆ ಹೊಳಿದಾರಿ ಹಿಡುದಾನೆ
ಹೊಳಿದಾರಿ ಹಿಡುದಾನೆ ಹೊಳಿಯಾಕ ಹೋಗ್ಯಾನೆ
ಹೊಳಿಯಾಕ ಹೋಗ್ಯಾನೆ ಹೊಳಿಯಾಕ ಬಿಟ್ಯಾನೆ
ಹೊಳಿಯಾಕ ಬಿಟ್ಯಾನೆ ಮನಿದಾರಿ ಹಿಡಿದಾನೆ

ಆನೆಗೊಂದಿ ಗೌಡರಿಗೆ ಆರು ಮಂದಿ ದಾಸೀರೇ
ಆರು ಮಂದಿ ದಾಸೀರೇ ಹೊಳೆ ನೀರಿಗೆ ಬಂದಾರೆ
ಹೊಳೆ ನೀರಿಗೆ ಬಂದಾರೆ ಕೂಸಾವ ಕಂಡಾರೆ
ನಿಂಗವ್ವ ನೀನಡಿಯೇ ನೀಲವ್ವ ನೀನಡಿಯೆ
ಗಂಗವ್ವ ನೀನಡಿಯೇ ಗೌರವ್ವ ನೀನಡಿಯೆ
ಗಂಗವ್ವ ಹಿಡುದಾಳೆ ಗೌರವ್ವ ಹಿಡುದಾಳೆ
ಗೌರವ್ವ ಹಿಡುದಾಳೆ ಗೌಡರ ಮನಿಗೊಯ್ದಾರೆ
ಗೌಡರ ಮುನಿಗೊಯ್ದಾರೇ ಗೌಡರ ಜ್ವಾಪಾನ ಮಾಡಿ

ಇಪ್ಪತ್ತು ವರುಷಕ್ಕೆ ಪ್ರಾಯಕ್ಕೆ ಬಂದಾನು ಮಗನು
ಹದಿನಾರು ವರುಷಕ್ಕೆ ಪ್ರಾಯಕ್ಕೆ ಬಂದಾಳು ಮಗಳೆ
ಪ್ರಾಯಕ್ಕೆ ಬಂದಾಳ ಮಗಳೆ ಪತ್ತರ ಬರದಾರೆ
ಮದುವೀಯ ಮಾಡುತ್ತೇವೆ
ಬಂದಂತ ಪತ್ತರವಾ ಬೇಗನೋದಿಕೊಂಡು
ಏಯವ್ವ ಏಯವ್ವ ಮದುವಿಯಾಗಿ ಬರತ್ತೀನಿ
ಲಗ್ನವಾಗಿ ಬರತ್ತೀನಿ
ಅಲ್ಲಿಂದ ಆ ಮಗ ಆನಿಗೊಂದಿಗೆ ಬಂದಾನೆ
ಹಾದಿಗೆ ಹಂದರ ಹಾಕಿ ಬೀದಿಗೆ ಚಾಳ್ಯಾವ ಕಟ್ಟಿ
ಬೀದಿಗೆ ಚಾಳ್ಯಾವ ಕಟ್ಟಿ ಮದುವೀಯ ಮಾಡ್ಯಾರೆ
ಬೀದಿಗೆ ಚಾಳ್ಯಾವ ಕಟಿ ಲಗ್ನವ ಮಾಡ್ಯಾರೆ
ಮದುವೀಯ ಮಾಡ್ಯಾರೆ ಅವರಿಬ್ಬರಿಗೂ ಮಾತನಾಡಿ
ಅವರಿಬ್ಬರು ಮಾತನಾಡಿ
ತಂದಿ ಇಲ್ಲವೇನೆ ತಾಯಿ ಇಲ್ಲವೇನೇ
ನಿನಗೆ ಅಕ್ಕಿಲ್ಲವೇನೋ, ನಿನಗ ತಂಗಿಲ್ಲವೇನೋ

ಇದ್ದೊಬ್ಬ ತಂಗೀನ ಹೊಳಿಗೆ ಬಿಟ್ಟು ಬಂದೆ
ಆನೆಗೊಂದಿ ಹೊಳಿಯಾಗೆ ಹರುದಾ ಬಂದೋಳು ನಾನು
ಬರದಂತ ಬರವಣಿಗೆ ಎಂದೆಂದಿಗೂ ತಪ್ಪಲಿಲ್ಲ

ಈ ಹಾಡಿನಲ್ಲಿ ಆನೆಗೊಂದಿಯ ಗೌಡರ ಮಗಸಿಗೆ ತಂಗಿಯ ಜೊತೆಗೆ ಲಗ್ನ ಎಂದು ವಿಧಿಯವ್ವ ಹೇಳುತ್ತಾಳೆ. ಅದನ್ನು ತಪ್ಪಿಸಲು ಅಣ್ಣನು ತಂಗಿಯನ್ನು ಬಾಳೆ ಎಲೆಯ ಮೇಲಿರಿಸಿ ಹೊಳೆಯಲ್ಲಿ ಹರಿಯ ಬಿಡುತ್ತಾನೆ. ಹೊಳೆಯಲ್ಲಿ ತೇಲಿದ ಮಗು ಆನೆಗೊಂದಿ ಗೌಡರ ಆರು ಮಂದಿ ದಾಸಿಯರಿಗೆ ಸಿಗುತ್ತದೆ. ಮಗು ಮತ್ತೆ ಗೌಡರ ಮನೆ ಸೇರುತ್ತದೆ. ಮದುವೆ ನಿಶ್ಚಯವಾಗುತ್ತದೆ. ಮದುವೆಯಾದ ನಂತರ ಗಂಡ ಹೆಂಡರಿಗೆ ಅಣ್ಣ ತಂಗಿ ಎಂದು ತಿಳಿಯುತ್ತದೆ. "ಬರದಂತ ಬರವಣಿಗೆ ತಪ್ಪಲಿಲ್ಲ" ಎಂದು ಇಬ್ಬರೂ ಅಂದುಕೊಳ್ಳುತ್ತಾರೆ. ಹಾಡು ಇಲ್ಲಿಗೆ ಮುಗಿಯುತ್ತದೆ. ಈ ಹಾಡಿನೊಳಗೆ ಇರುವ ಕಡೆಯು ಆನೆಗೊಂದಿ ಪರಿಸರದಲ್ಲಿ ಜನಪ್ರಿಯವಾಗಿದೆ. ಈ ಕತೆಯನ್ನು ನಿರೂಪಿಸುವ ಜನರ ಪ್ರಕಾರ "ಅಣ್ಣನು ತಂಗಿಯನ್ನು ಮದುವೆ ಆದಂದಿನಿಂದಲೇ ಆನೆಗೊಂದಿ ಸಂಸ್ಥಾನವು ನಾಶ ಆಯಿತು." ಇದು ಕುತೂಹಲಕರ ಸಂಗತಿಯಾಗಿದೆ. ಏಕೆಂದರೆ ಜನಪದ ನಿರೂಪಕರು ಸಂಸ್ಥಾನವೊಂದರ ಅಳಿವನ್ನು ಅದರ ನೈತಿಕ ಪತನದಲ್ಲಿ ಗುರುತಿಸಲು ಇಚ್ಛಿಸಿದ್ದಾರೆ. ಅಣ್ಣ ತಂಗಿಯರ ಮದುವೆಯನ್ನು ಸಂಸ್ಕೃತಿಯಲ್ಲಿ ಉದ್ದಕ್ಕೂ ನಿವಾರಿಸಿಕೊಂಡು ಬರಲಾಗಿದೆ. 'ಬಂಧುತ್ವ' (Kinship) ವ್ಯವಸ್ಥೆಯು ಏನನ್ನು ಕಾಪಾಡಿಕೊಂಡು ಬರಲು ಹವಣಿಸಿದೆಯೋ, ಅದನ್ನು ಹಾಡಿನಲ್ಲಿ ನಿರಾಕರಿಸಲಾಗಿದೆ ಮತ್ತು ಹಾಗೆ ನಿರಾಕರಿಸುವುದರ ಮೂಲಕ ಸಂಸ್ಥಾನವೊಂದರ ನಾಶಕ್ಕೆ ಕಾರಣಗಳನ್ನು ಕಲ್ಪಿಸಲಾಗಿದೆ. ಸಂಸ್ಥಾನಗಳು ಯುದ್ಧಗಳಿಂದ ಪತನವಾಗುತ್ತವೆ ಎಂದು ಲಿಖಿತ ಇತಿಹಾಸ ಸಾರಿದರೆ, ಜನಪದ ಇತಿಹಾಸವು ಸಂಸ್ಥಾನದ ಅಳಿವನ್ನು ಅದರ ಪತನಮುಖಿ ನೈತಿಕತೆಯಲ್ಲಿ ಗುರುತಿಸುತ್ತದೆ. ವಿಧಿಯವ್ವನ ಹಾಡು ಈ ಮಾತಿಗೇ ಸಾಕ್ಷಿ.

**ಜೋಗುಳ ಹಾಡು**

ತೊಗರೆ ಚಿನ್ನವ ತೊಗಿರೆ ರನ್ನನ
ಗುಡಿಯಯ್ಯನ ತೊಗಿರೆ

ಚಿನ್ನದ ಗುಡಿಯಯ್ಯನ ತೊಗಿರೆ
ಸಣ್ಣ ಮಲಕೋಜಿನ ಹರಿಯೆಂದು ತೂಗಿರೆ
ಹರನೆಂದು ತೂಗಿರೆ ಹರಿಹರಯ್ಯನ ತೂಗಿರೆ
ಹರಿಕೃಷ್ಣರಾಯನ ಹರದಿ ಹರಿಹರದಯ್ಯನ
ಮಾನ್ಯರು ಬಂದು ತೊಗಿರೆ

ದುಂಡು ಬಟ್ಟಲದಾಗ ಗೊಂಡೇವದ ಹಾಸಿಗೆ
ಗಂಗಾಧರನೆಂದು ತೊಗಿರೆ
ಗಂಗಾಧರನೆಂದು, ನಂದಿಕೇಶ್ವರನೆಂದು
ಜಂಬುಲಿಂಗನೆಂದು ತೂಗಿರೆ
ಜಂಬುಲಿಂಗನೆಂದು ತೂಗಿರೆ

ಕಬ್ಬುಣದ ತೊಟ್ಟಲಕ ಜಗಮಿಣಿಗಳಾರೆ

ಇಬ್ಬರು ತೂಗಿದರೆ ಮಲಗವನೆ

ಇಬ್ಬರು ತೂಗಿದರೆ ಮಲಗವನೆ

ಹಂಪಿಯ ವಿರೂಪಾಕ್ಷನೆಂದು ತೂಗಿರೆ

ಹಂಪಿಯ ವಿರೂಪಾಕ್ಷನೆಂದು ತೂಗಿರೆ

ಹರಳಿಗೊನ್ನುಂಗುರ ಬೆರಳಿಗೊನ್ನುಂಗರ

ಬೆರಳ ಚೀಪ್ಸಿ ಚೀಪ್ಸಿ ಪಾಡಿರೆ

ಬೆರಳ ಚೀಪ್ಸಿ ಚೀಪ್ಸಿ ಪಾಡಕಂದಮ್ಮನ

ಸರಳ ಬೈತಲೇರು ತೂಗಿರೆ

ಸರಳ ಬೈತಲೇರು ತೂಗಿರೆ

ಈ ಹಾಡಿನಲ್ಲಿ ಪ್ರಸ್ತಾಪಿಸಲಾದ ಹರಿಕೃಷ್ಣರಾಯ, ಹರಿಹರದಯ್ಯನ ಎಂಬ ಹೆಸರುಗಳು ಆನೆಗೊಂದಿ, ಹಂಪೆಯ ಅರಸರನ್ನು ನೆನಪಿಸುತ್ತವೆ. ವಿರೂಪಾಕ್ಷನು ಸೇರಿದಂತೆ ಪಂಚಲಿಂಗಗಳನ್ನು ನೆನೆಯಲಾಗಿದೆ. ಅರಸರು, ಈ ಭಾಗದ ದೈವಗಳು, ಜನತೆಗೆ ಅಪಾರ ಅಚ್ಚು ಮೆಚ್ಚಾಗಿದ್ದವೆಂದು ಈ ಹಾಡಿನಿಂದ ತಿಳಿಯಬಹುದಾಗಿದೆ.

**ಶಿಶುಪ್ರಾಸ**

ಆನೆಗೊಂದಿ, ಹಂಪಿ ಹಾಗೂ ಇಲ್ಲಿನ ಅಕ್ಕಪಕ್ಕದ ಪ್ರದೇಶಗಳಲ್ಲಿ ಈ ಭಾಗಕ್ಕೆ ಸಂಬಂಧಿಸಿದ ಶಿಶುಪ್ರಾಸವೊಂದು ಹೀಗಿದೆ

ಆನಿ ಬಂತ್ ಆನಿ

ಯಾವೂರ್ ಆನಿ

ಬಿಜಾಪೂರ್ ಆನಿ

ಇಲ್ಲಿಗ್ಯಾಕ ಬಂತು

ಹಾದಿ ತಪ್ಪಿ ಬಂತು

ಹಾದಿಗೊಂದುಡ್ನು

ಬೀದಿಗೊಂದುಡ್ನು

ಲಟ ಲಟ ಮುರದು

ಸೇರ್‌ಕೊಬ್ರಿ ತಂದು

ಹುಡುಗರ ಕೈಯಾಗ ಕೊಟ್ಟು

ರಜಾಕರರ ದಾಳಿ ಮತ್ತು ಲೂಟಿಯನ್ನು ಮಾಡಿದ ವಿವರಣೆಗಳು ಇಲ್ಲಿವೆ. ಚಿಕ್ಕ ಮಕ್ಕಳನ್ನು ಆಡಿಸುವಾಗ ಹಾಡುವ ಜನಪ್ರಿಯ ಹಾಡು ಇದಾಗಿದೆ.

**ಹುಯ್ಯೋ ಹುಯ್ಯೋ ಮಳೆರಾಯ**

ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತ್ವಾಟಕ ನೀರಿಲ್ಲ

ಬಾರೋ ಬಾರೋ ಮಳೆರಾಯ
ಬಾಳೆತ್ವಾಟಕೆ ನೀರಿಲ್ಲ

ಚುಚ್ಚೊ ಚುಚ್ಚೊ ಮಳೆರಾಯ
ಪಚ್ಚೆ ಪಯಿರಿಗೆ ನೀರಿಲ್ಲ

ಕೊಚ್ಚೊ ಕೊಚ್ಚೊ ಮಳೆರಾಯ
ಕುಡಿಯೋ ಬಾವಿಗೆ ನೀರಿಲ್ಲ

ಮಳೆ ಬಾರದೆ ಇದ್ದಾಗ ಜನಪದರು ಹಾಡುವ ಹಾಡು ಇದಾಗಿದೆ.

**ರತ್ತೊ ರತ್ತೊ ರಾಯನ ಮಗಳೆ**

ರತ್ತೊ ರತ್ತೊ
ರಾಯನ ಮಗಳೆ

ಬಿತ್ತೊ ಬಿತ್ತೊ
ಭೀಮನ ಮಗಳೆ

ಹದಿನಾರೆಂಬೆ
ಕಾಸಾಲಾರೆ
ಕಡಿಯಲಾರೆ

ಬೈಟ್ಕಂಬ
ಬಾಳೆಕಂಬ

ಕುಕ್ಕನೆ ಕೂತ್ಕೊ
ಕೂರೆ ಬಸವಿ

ಚಿಕ್ಕ ಚಿಕ್ಕ ಹೆಣ್ಣುಮಕ್ಕಳು ಆಟವಾಡುವಾಗ ಈ ಹಾಡು ಹಾಡುತ್ತಾರೆ.

**ಕೈ ಕೈ ಎಲ್ಲಿಗೋದವು**

ಕೈ ಕೈ ಎಲ್ಲಿಗೋದವು
ಕದಿನ ಮೂಲೆಗೋದವು

ಕದ ಏನ್ಕೊಡ್ತ?

ಚಕ್ಕೆ ಕೊಡ್ತು

ಒಲೆ ಏನ್ಕೊಡ್ತು?

ಒಲೆ ಬೂದಿ ಕೊಡ್ತು

ಬೂದಿ ಏನ್ಮಾಡ್ದೆ?

ಬೂದಿ ತಿಪ್ಪಿಗಾಕ್ದೆ

ತಿಪ್ಪಿ ಏನ್ಕೊಡ್ತು?

ತಿಪ್ಪಿ ಗೊಬ್ರ ಕೊಡ್ತು

ಗೊಬ್ರ ಏನ್ಮಾಡ್ದೆ?

ಗೊಬ್ರ ಹೊಲಕಾಕ್ದೆ

ಹೊಲ ಏನ್ಕೊಡ್ತು?

ಹೊಲ ಗರ್ಕಿಕೊಡ್ತು

ಗರ್ಕಿ ಏನ್ಮಾಡ್ದೆ?

ಗರ್ಕಿ ಆರುತಮ್ನ ಆಕಿಳಿಗಾಕ್ದೆ

ಆ ಕರ ಏನ್ಕೊಡ್ತು?

ಆಕಳ ಹಾಲು ಬೆಣ್ಣೆ ಕೊಡ್ತು

ಹಾಲು ಬೆಣ್ಣೆ ಏನ್ಮಾಡ್ದೆ

ಆರು ತಮ್ನ ಕೂಸಿಗ್ಕೊಟ್ಟೆ

ಆರುತಮ್ನ ಏನ್ಕೊಟ್ಟ

ಒಂದಕ್ಕ ದ್ವಾಸೆ ಕೊಟ್ಟ

ಒಂದು ಮುರ್ಕು ದ್ವಾಸೆ ಕೊಟ್ಟ

ಅರ್ಕು ಮುರ್ಕು ದ್ವಾಸೆ ಏನ್ಮಾಡ್ದೆ

ಅರ್ಕು ದ್ವಾಸೆ ತಿಂದೆ

ಮುರ್ಕು ದ್ವಾಸೆ ತಲೆ ಮ್ಯಾಲೆ ಇಟ್ಕಂಡಿದ್ದೆ

ಕಾಗೆ ಎತ್ಕಂತು

ಕಾಗೆ ಏನ್ಕೊಡ್ತು?

ಕಾಗೆ ಬಿಲ್ಕೊಡ್ತು

ಬಿಲ್ಲ ಏನ್ಮಾಡ್ದೆ?

ಬ್ಯಾಟಿಗಾರಂಗ ಕೊಟ್ಟೆ

ಬ್ಯಾಟಿಗಾರ ಏನ್ಕೊಟ್ಟ

ಒಂದೆಣ್ನು ಒಂದ್ಗಂಡ್ಕೊಟ್ಟ

ಹೆಣ್ನು ಗಂಡು ಏನ್ಮಾಡ್ದೆ

ಗಂಡ ತಳ್ಬುಟ್ಟೆ

ಕೆರೆ ಕಿತ್ತೊದ್ರೊ

ಕೋಳಿ ಮೊಟ್ಟೆ ಈರುಳ್ಳಿ

ಕುದಿಸಿ ಕಟ್ಬೇನಿ

ಕೈಕೈ ಬಂದೂ

ಕೈಕೈ ಬಂದೂ

ಕೋಳಿಸಿದ್ದಣ್ಣ

ಚಿಕ್ಕಮಕ್ಕಳು ಆಟ ಆಡುವಾಗ ಈಗಲೂ ಹಾಡುವ ಪ್ರಚಲಿತವಾದ ಹಾಡು ಇದಾಗಿದೆ.

**ಸವಾಲ್‌ಪದ**

ಕೇಳಿ ದೈವಾ ದ್ಯಾಸಿಟ್ಟು ಕೇಳ್ರಿ

ಮಾಡದೆ ಗುಲ್ಲಾ

ಅಂದವಾದ ವಿಜಯ ಸಾಮ್ರಾಜ್ಯದ ಲೀಲಾ

ಹಿಂದೆ ಚಂದ್ರಗಿರಿ ಪಟ್ಟಣವೆಂಬುದು

ಇರುವದು ನಿದಿರಾ

ಅಂದು ಆಳುತ್ತಿದ್ದ ನರಸಿಂಹದೇವರಾಯ ಭೂಪಾಲಾ

ಮಹಾಮಂತ್ರಿ ತಿಮ್ಮರಸ ಇದ್ದನಲ್ಲಾ

ರಾಜನಿಗೆ ಇಬ್ಬರು ಸತಿಯೆ ಇದ್ದರಲ್ಲಾ

ಒಬ್ಬ ಸತಿಯೂ ದಾಸಿಯಾಗಿ ಕಳೆಯುತ ಕಾಲ

ಹಿರಿ ಮಡದಿಗೆ ಒಬ್ಬೆ ಮಗನು ಹುಟ್ಟಿದನಲ್ಲಾ

ಶ್ರೀ ಕೃಷ್ಣದೇವರಾಯನ ಈ ಮಾತು ಸುಳ್ಳಲ್ಲ

ಸ್ವಾಮಿ ಶಿವನ ಕರುಣದಿಂದ ಬೆಳೆಯುತ ಬಾಲಾ

ರಾಮರಾಯ ಶ್ರೀರಂಗರಾಯ ಕೇಳ್ರಿ ಇನ್ನ ಮೇಲ

ಅಚ್ಚುತರಾಯ ಇವರು ಮೂವರು ಒಂದಿನ ಕಾಲ

ಶ್ರೀಕೃಷ್ಣದೇವರಾಯಗೆ ಇವರು ಮೂಲ
ದಾಸಿ ಮಗನು ಇವನು ನಮಗೆ ಸರಿಯಲ್ಲ
ನಮ್ಮ ಮಗನು ಇವನು ನಮಗೆ ಸರಿಯಲ್ಲ
ನಮ್ಮ ರಾಜ್ಯದೊಳಗ ಭಾಗ ಸಿಗಬಾರದಲ್ಲ
ಮೂರು ಮಂದಿ ಕೂಡಿ ಒಂದಿನ ತೆಗೆದರು ಒಂದೆ ಅಕಲಾ

ಅಡವಿಗೆ ಒಯ್ದು ಶ್ರೀಕೃಷ್ಣದೇವರ ಕಣ್ಣು ಕೀಳ್ಬೇಕಲ್ಲಾ
ಹಿಂಗೆ ಕಠಿಣಾ ಆಜ್ಞೆ ಮಾಡ್ಯಾರ ಈ ಮಾತು ಸುಳ್ಳಲ್ಲ
ಮಹಾಮಂತ್ರಿ ಶ್ರೀಕೃಷ್ಣದೇವರಾಯ ಕರಕೊಂಡು ಹಿಂಬಾಲಾ
ಹೋಗು ಹೋಗುತ ಮಹಾಮಂತ್ರಿ ತೆಗೆದನೊಂದು ಅಕಲಾ
ವಿದ್ಯಾರಣ್ಯ ಗುರುಗಳ ಹತ್ತಿರ ಹೋಗಿಬಿಟ್ಟನಲ್ಲ
ಕುರಿಯ ಕಣ್ಣು ಕಿತ್ತಿ ರಾಜರಿಗೆ ತೋರಿದ ಕಣ್ಗಳ
ಖಡ್ಗವ ಮೂರು ಮಂದಿ ಕಣ್ಣುಗಳ ನೋಡಿ ಆದರು ಖುಷಿಯ

ಮೂರ ಹರಣ ದಯಾದಿಂದ ಅಲ್ಲಿ ಬೆಳೆಯುತ ಬಾಲ
ವಿದ್ಯಾರಣ್ಯ ಗುರುಗಳು ವಿದ್ಯಾಬುದ್ಧಿ ಕಲಿಸ್ವರಲ್ಲಾ
ಹೊನ್ನಿನ ಮಳೆಸುರದಿತ್ತು ಶಿವನ ಕರುಣ ವಿದ್ದಿತಲ್ಲಾ
ಹೀಗೆ ನಮ್ಮ ದೌಲತ್ತುಪುರದ ಕವಿಗಳು ಎಲ್ಲ
ದೈವ ದ್ಯಾಸಿಟ್ಟು ಕೇಳ್ರಿ ಮಾಡದೆ ಗುಲ್ಲ.

## ೪.೨. ಕೋಲಾಟದ ಹಾಡುಗಳು

### ೧. ವಿರುಪಯ್ಯ ಲಿಂಗ

ದಾಳಂಬರು ನೋಡಿ ನಗುತಿರುವ
ವಿರುಪಯ್ಯ ದಾಳಂಬರು
ಒಂದೇ ಕಂಬದಾಗೆ ಹದಿನಾರು ಕಂಬವು
ಕಂಬ ಕಂಬೆಲ್ಲ ಗೋಪುರವೋ ವಿರುಪಯ್ಯ ಲಿಂಗ

ಅಚ್ಚು ಕಟ್ಟಿದ ತೇರು
ನಿಚ್ಚಯ ಮಾಡಲಿಲ್ಲ
ಪಂಪಾಪತಿ ಎಂಬ ಗೋಪುರವೋ ವಿರುಪಯ್ಯ ಲಿಂಗ

ಅಚ್ಚು ಅಚ್ಚು ಚೆಲ್ಲದಚ್ಚು
ಅಚ್ಚಿನ ಮ್ಯಾಲೊಂದು ಪಾರಿವಾಳ

ಮುಚ್ಚಿ ಮುಚ್ಚಿ ಕಣ್ಣ ತೆರವಾದೋ ವಿರುಪಯ್ಯ ಲಿಂಗ

ಆನೆಗೊಂದಿಯ ಮ್ಯಾಲೆ ಹಾಡ್ಯಾಳೆ ಡೊಂಬತಿ

ನೋಡ ಬಂದಣ್ಣ ಉಣವೋಳಕ್ಕಯ್ಯ

ವಿದ್ಯೆದಕ್ಕ ತದ್ದೀನಿತೊಂ

೨. ಬನ್ನಿ ಹಬ್ಬ

ಬನ್ನಿ ಮುಡಿಯೋಣು ಬಾರ ಕೋಲು ಕೋಲ

ಚಿನ್ನ ತರುವೋಣು ಬಾರ ಕೋಲುಕೋಲ ||ಪ||

ಊರ ಅಗಸಿಯ ದಾಟಿ, ಮಲ್ಲ ಗುಡಿಯನು ಸೇರಿ

ಕಾಡ ಸಂಪತ್ತು ತರಬನ್ನಿ |ಕೋ| ||೧||

ರಂಗನಾಥಗೆ ಬನ್ನಿ ದುರ್ಗಾಮಾತೆಗೆ ಬನ್ನಿ

ಗಂಗಾದೇವಿಗೆ ಸಿರಿಬನ್ನಿ |ಕೋ| ||೨||

ಬೆಳೆದ ಬೆಳಸಿಗೆ (ಬಾಳಿಗೆ) ಬನ್ನಿ ಭೂಮಿತಾಯಿಗೆ ಬನ್ನಿ

ನಾಡ ಸಂಪತ್ತು |ಕೋ| ||೩||

ಅರಸರ ಅಂಗಳಕ ಸರಸರಂಗ ಹೊಯ್ದು

ಹೊರಸಿ ತಂದಾರ ಸಿರಿಬನ್ನಿ |ಕೋ| ||೪||

ದೇವದೇವರ ಬನ್ನಿ ದೈವ ದೈವದ ಬನ್ನಿ

ನಾವು ಮುಡಿವದು ನಮಬನ್ನಿ |ಕೋ| ||೫||

ಹಡೆದ ತಾಯಿಗೆ ಬನ್ನಿ, ಹಡೆದ ತಂದೆಗೆ ಬನ್ನಿ

ಪಡೆದ ಗಂಡನಿಗೆ ನಮ ಬನ್ನಿ |ಕೋ| ||೬||

ಚಿನ್ನದ ಕೈಕಡಗ, ಚನ್ನೇರು ಇಟಗೊಂಡು

ಚಿನ್ನದಾಭರಣ ನಡಬಾಗಿ |ಕೋ| ||೭||

ಗೆಜ್ಜಿ ಗೆಜ್ಜಿ ಹಾಕಿ, ಗುಜ್ಜೇರು ನಾರೇರು ಕುಣಿದಾರ

ವಜ್ಜರ ವಡ್ಯಾಣ ಘುಲ್ ಘುಲ್ |ಕೋ| ||೮||

ನಾವು ಕುಣಿಯಾಣ ಬನ್ನಿ ಹ್ಯಾಂವ ಮರಿಯಾಣ ಬನ್ನಿ

ಜೀವ ಒಂದಾಗಿ ಇರಬನ್ನಿ |ಕೋ| ||೯||

ಇದು ಮುಡಿಯುವ ಬನ್ನಿ ಮುಂದೆ ಮಗ ಹೊನ್ನಾಗಿ

ಕುಂದಣದಾರೂತಿ ಬೆಳಗುದಕ |ಕೋ| ||೧೦||

## ಕೋಲಾಟದ ಪದ

### ೩. ಹನುಮನ ಸಾಹಸ

ತಾನಾನು ತಂದು ನಾನಾನೋ ಸೈ
ತಾನಾನು ತಂದು ನಾನಾನೋ ||ಪ||

ಅಡವೀಯ ಗಂಜನದೆವಿ ಗಿಡಗಾನ ಹಡೆದಾಳು
ತೊಡೆಯ ತೊಳೆಯೋಕೆ ನೀರಿಲ್ಲ ಹನುಮಣ್ಣ
ಸುತ್ತಲ ಸಮುದ್ರ ತಿರಿವ್ಯಾನೊ ||೧||

ಕಟ್ಯಾಗಂಜನದೇವಿ ಪುತ್ರನ ಹಡೆದಾಳು
ಹೊಟ್ಟೆ ತೊಳೆಯೋಕೆ ನೀರಿಲ್ಲ ಹನುಮಂತ
ಸುತ್ತೇಳು ಸಮುದ್ರ ತಿರುವ್ಯಾನು ||೨||

ಹುಟ್ಟುಗಲ್ಲಿನ ಮ್ಯಾಲೆ ಹುಟ್ಟಿದಂಗೈದಾನೆ
ದಿಟ್ಟನಾಮದ ಹನುಮಣ್ಣ ಲಂಕೆಯ
ಸುಟ್ಟು ಬಂದೂರ ಒರಗ್ಯಾನೊ ||೩||

ಕರಿಯ ಬಂಡಿಯ ಮಯಾಲೆ ಮದರಂಗ ಹೊಯ್ದಾನೆ
ಹರಿಯ ನಾಮದ ಹನುಮಣ್ಣ ಲಂಕೆಯ
ಉರಿಸಿ ಬಂದೂರ ಒರಗ್ಯಾನೋ ||೪||

ಕ್ಯಾಡಂಗ ನಿವನೆಂದು ಕೇಡು ನುಡಿಯಲಿ ಬೇಡಿ
ನೋಡಿರೇನವ್ವ ಅವನ ಸಾಹಸ ಹಂಪಿಯ
ಕ್ಯಾಟೀಯ ಕಿತ್ತು ಉರಿದಾನೋ ||೫||

ಇದು ಮಂಗನೆಂದು ಕುಂದು ನುಡಿಯು ಬೇಡಿ
ನೋಡಿರೇನವ್ವ ಅವನ ಸಾಹಸ ಹಂಪಿಯ
ಗುಡಿಯನ್ನೇ ಕಿತ್ತು ವೊಗೆದಾನು ||೬||

## ಕೋಲಾಟದ ಪದ

### ೪. ಅಂದಕ್ಕಾನೆಗೊಂದಿ

ಕೋಲೇ ಕೋಲೇ ಕೋಲು ಕೋಲಣ್ಣ ಕೋಲೆ
ಕೋಲೇ ಕೋಲೇ ಕೋಲಣ್ಣ ಕೋಲೆ ||ಪ||

ಉದ್ಧಾಗಿರಿಯ ಮೇಲೆ ಉದಯಾದ ಮರನುಟ್ಟಿ
ವಿಜಯನಗರಕೆ ನೆರಳಾದೊ ಕೋಲೆ
ವಿಜಯನಗರಕೆ ನೆರಳಾದ ಬಂಕಾಪುರ
ಗುಡಿಯಾ ಬಾಗಿಲಿಗೆ ಕದವಾದ ಕೋಲೆ ||೧||

ಅಂದಕ್ಕಾನೆಗೊಂದಿ ಚಂದಕ್ಕೆ ವಿಜಯನಗರ
ಹೊಂದಿಸಿ ಕಟ್ಟಿಸಿದ ಹೊಸಪೇಟೆ ಕೋಲೆ
ಹೊಂದಿಸಿ ಕಟ್ಟಿಸಿದ ಹೊಸಪೇಟೆ ಊರಮುಂದೆ
ಅಂದುಳ್ಳ ಕೋಲ ಹೊಯ್ಕಸ್ಯಾರು ಕೋಲೆ ||೨||

ಅಂದಕ್ಕಾನೆಗೊಂದಿ ಚಂದಕ್ಕೆ ವಿಜಯನಗರ
ಅಯ್ದಾಗಿ ಕಟ್ಟಿಸಿದ ಹೊಸಪೇಟೆ ಊರ್ಮುಂದೆ
ಬಾಯುಳ್ಳ ಕೋಲು ಹೊಯ್ಕಸ್ಯಾರು ಕೋಲೆ ||೩||

ಮಚ್ಚರಸಿ ಬಿರವೊ ಮಲವಾರು ಕೋಲೆ ಮರೆತು
ಕೂತ್ಯಾವಾಗ ನೆತ್ತಿಮ್ಯಾಗಳ ಗಜಸಿಂಹನ ಕೋಟೆ ||೪||

ಆನೆಗೊಂದಿ ಪರಿಸರದಲ್ಲಿ ಮೊದಲಿನಿಂದಲೂ ಕೋಲಾಟದ ಪದಗಳು ತುಂಬಾ ಜನಪ್ರಿಯವಾಗಿವೆ. ಮೇಲಿನ ನಾಲ್ಕು ಕೋಲಾಟದ ಪದಗಳಲ್ಲಿ ವಿರೂಪಾಕ್ಷ ಮತ್ತು ವಿಠ್ಠಲ ದೇವಸ್ಥಾನದ ವಾಸ್ತುವಿನ ವರ್ಣನೆ ಇದೆ. ಈ ಹಾಡಿನ ಕೊನೆಯ ಮೂರು ಸಾಲುಗಳಲ್ಲಿ ಆನೆಗೊಂದಿಯಲ್ಲಿ ಹಾಡಿ ನರ್ತಿಸುವ ಡೊಂಬತಿಯರ ವಿವರವಿದೆ. ವಿದೇಶಿ ಪ್ರವಾಸಿಗರ ಬರಹದಲ್ಲಿ ಡೊಂಬತಿಯರ ವಿವರ ಇದೆ. ಎರಡನೇ ಹಾಡಿನಲ್ಲಿ ಊರ ಅಗಸಿ ದಾಟಿ ಮಲ್ಲ ದೇವರ ಗುಡಿಗೆ ಹೋಗಿ ಬನ್ನಿ ಮುಡಿಯುವ, ಗ್ರಾಮ ದೈವ, ಅರಸಂಗ, ಬನ್ನಿ ಕೊಟ್ಟು ಬನ್ನಿ ಹಬ್ಬದ ಸಂಭ್ರಮದಾಚರಣೆ ಮಾಡಿಕೊಳ್ಳುವ ಮಾಹಿತಿ ಇದೆ. ಮೂರನೇ ಹಾಡಿನಲ್ಲಿ ಅಂಜನಾದ್ರಿ ಬೆಟ್ಟದ ಸಮೀಪ ಇರುವ ಹನುಮನ ಸೆಳವಿನ ಬಗ್ಗೆ ಮಾಹಿತಿ ಹಾಗೂ ಹನುಮನ ಸಾಹಸದ ಪರಿಪರಿಯಾದ ವರ್ಣನೆ ಇದೆ. ಆರನೆಯ ಹಾಡಿನಲ್ಲಿ ವಿಜಯನಗರ, ಬಂಕಾಪುರ, ಆನೆಗೊಂದಿ ಗ್ರಾಮಗಳ ಪ್ರಾಸವಿದೆ. ಇದರಲ್ಲಿ ಹೊಸಪೇಟೆ ಎಂಬ ನಗರವನ್ನು ಹೊಸದಾಗಿ ಕಟ್ಟಿಸಲಾಗಿದೆ ಎಂಬ ಧ್ವನಿಯೂ ಹಾಡಿನಲ್ಲಿದೆ. ಹೀಗೆ ಆನೆಗೊಂದಿ ಮತ್ತು ಹಂಪಿಯು ಕೋಲಾಟದ ಪದಗಳಲ್ಲಿ ಹೆಚ್ಚಿನ ಸ್ಥಾನಮಾನ ಪಡೆದುಕೊಂಡಿದೆ.

### ೪.೩. ಕಥನ ಕಾವ್ಯಗಳು

ಆನೆಗೊಂದಿ ಪರಿಸರದಲ್ಲಿ ಕಥನ ಕವನ ಹೇಳುವ ನಿರೂಪಕರಿದ್ದಾರೆ. ಚೌಡಿಕೆಯವರು, ಗೊಂದಲಿಗರು, ದೊಡ್ಡಾಟವನ್ನು ಪ್ರದರ್ಶಿಸುವ ಕಲಾವಿದರು. ಆನೆಗೊಂದಿ, ಮಲ್ಲಾಪುರ, ಕಂಪ್ಲಿ ಮುಂತಾದ ಕಡೆಗಳಲ್ಲಿದ್ದಾರೆ. ಕುಮಾರರಾಮನ ಬಗೆಗಿರುವ ಐತಿಹ್ಯಗಳನ್ನು ಈ ಭಾಗದಲ್ಲಿ ಅನೇಕರು ಕಣ್ಣಿಂದ ಕಂಡಂತೆ ಹೇಳುತ್ತಾರೆ.

ಕಥನ ಕವನಗಳು ಭಿನ್ನ ಭಿನ್ನ ರೀತಿಯಲ್ಲಿ ಗಮನಕ್ಕೆ ಬರುತ್ತವೆ. ಆನೆಗೊಂದಿ ಪರಿಸರದಲ್ಲಿ ಕುಮಾರರಾಮ ಮತ್ತು ಕಂಪಿಲರಾಯನ ಬಗೆಗಿರುವ ಕಥನ ಕಾವ್ಯಗಳು ಲಭ್ಯವಾಗುತ್ತವೆ. ಕುಮಾರರಾಮನು ಆನೆಗೊಂದಿ ಪರಿಸರದಲ್ಲಿ ಬಂದು ಹೋದವನಾಗಿದ್ದುದರ ಬಗ್ಗೆ ಅನೇಕ ಐತಿಹ್ಯಗಳು ಹುಟ್ಟಿಕೊಂಡಿವೆ. ಇಲ್ಲಿ ಕುಮಾರರಾಮನ ಬಗ್ಗೆ ಇಷ್ಟೊಂದು ವಿವರವಾದ ಮಾಹಿತಿ ಆನೆಗೊಂದಿ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತಿರುವುದು ಗಮನಾರ್ಹ ಸಂಗತಿಯಾಗಿದೆ.

**ಕುಮಾರ ರಾಮನ ದುಂದುಮೆ**

ಬಿ.ಎಸ್.ಗದ್ದಿಗೀಮಠರು ಸಂಗ್ರಹಿಸಿದ ಕುಮಾರ ರಾಮನ ದುಂದುಮೆ ಪದ್ಯವು ಉತ್ತರ ಕರ್ನಾಟಕದಾದ್ಯಂತ ಜನಪ್ರಿಯವಾಗಿರುವ ಕುಮಾರ ರಾಮನ ಕತೆಯನ್ನು ಸರಿಯಾಗಿ ಪ್ರತಿನಿಧಿಸುತ್ತದೆ. ಈ ಪದ್ಯದ ಮುಖ್ಯಾಂಶಗಳು ಇಂತಿವೆ. ಕಂಪಿಲರಾಯನು ಕುಮ್ಮಟದುರ್ಗದ ಅರಸ. ಅವನ ಹೆಂಡತಿಯ ಹೆಸರು ಹರಿಯಾಲಮ್ಮ. ಕಂಪಿಲನಿಗೆ ಒಬ್ಬ ಪ್ರೇಯಸಿ ಇದ್ದಳು. ಅವಳ ಹೆಸರು ಕರ ಚಲುವೆರತ್ನ. ಪ್ರೇಯಸಿಯೇ ಅವನ ಎರಡನೇ ಹೆಂಡತಿಯಾದಳು. ಕಂಪಿಲನ ಮಂತ್ರಿಯ ಹೆಸರು ಬೈಚಪ್ಪ. ಆತ ಹರಿಯಾಲಮ್ಮನ ಅಣ್ಣನಾಗಿದ್ದ. ಕಂಪಿಲನನಿಗೆ ಬಹಳ ಕಾಲದವರೆಗೆ ಮಕ್ಕಳಾಗುವುದಿಲ್ಲ. ಒಂದು ದಿನ ಕಂಪಿಲನ ಅರಮನೆಗೆ ಬಂದ ಸನ್ಯಾಸಿಯೊಬ್ಬ ಮಾಂತ್ರಿಕ ಹಣ್ಣೊಂದನ್ನು ಅರಸನಿಗೆ ನೀಡಿ ಅದನ್ನು ತಿಂದರೆ ರಾಣಿಗೆ ಮಕ್ಕಳಾಗುತ್ತದೆ ಎಂದು ಹೇಳುತ್ತಾನೆ. ರಾಣಿ ಹರಿಯಾಲಮ್ಮ ಹಣ್ಣು ತಿನ್ನುತ್ತಾಳೆ. ಹಣ್ಣಿನ ಸಿಪ್ಪೆಯನ್ನು ಅರಮನೆಯ ಹೆಣ್ಣಾಳಿಗೆ ನೀಡುತ್ತಾಳೆ. ಪರಿಣಾಮವಾಗಿ ಹರಿಯಲಾದೇವಿಗೆ ಗಂಡುಮಗು ಹುಟ್ಟುತ್ತದೆ. ಮಗುವಿಗೆ ಕುಮಾರರಾಮ ಎಂದು ಹೆಸರಾಗುತ್ತದೆ. ಹೆಣ್ಣಾಳು ಗಂಡು ಮಗುವನ್ನು ಹಡೆಯುತ್ತಾಳೆ. ಅದಕ್ಕೆ 'ಹೋಲ್ಕಿರಾಮ' ಎಂದು ಹೆಸರಿಡಲಾಗುತ್ತದೆ. ಮುದಿ ಕುದುರೆಯು ಗಂಡು ಮಗು ಹಾಕುತ್ತದೆ. ಅದಕ್ಕೆ ಬೊಲ್ಲ ಎಂದು ಹೆಸರಿಡಲಾಗುತ್ತದೆ. ಬೈಚಪ್ಪನ ಮಗಳಾದ ರಾಮಲದೇವಿಯನ್ನು ಕುಮಾರರಾಮ ಮದುವೆಯಾಗುತ್ತಾನೆ. ಹೋಲ್ಕಿರಾಮ ಪದ್ಮಿನಿಯನ್ನು ಮದುವೆಯಾಗುತ್ತಾನೆ. ಪದ್ಮಿನಿಗೆ ಗಂಡು ಮಗು ಹುಟ್ಟುತ್ತದೆ. ಒಂದು ದಿನ ಕುಮಾರರಾಮನು ಹೊಳೆಯ ಬದಿಯಲ್ಲಿ ಮುತ್ತಿನ ಚಂಡಾಡುತ್ತಾನೆ. ಹಿರಿಯರು ಚಂಡಾಡಬೇಡ, ಅದು ಮುತ್ತಿನ ಚಂಡು, ಪೂಜೆಯ ಚಂಡು, ಅದನ್ನಾಡಿದ ಹಿರಿಯರು ಸತ್ತು ಹೋಗಿದ್ದಾರೆ ಎಂದು ಎಚ್ಚರಿಕೆ ಹೇಳುತ್ತಾರೆ. ಹಿರಿಯರ ಮಾತು ಕೇಳದ ರಾಮ ಚಂಡಾಡುತ್ತಾನೆ. ಚಂಡಾಡುವ ಚಲುವ ರಾಮನನ್ನು ಅರಮನೆಯ ಅಂಗಳದಿಂದ ಕರಚಲುವೆ ರತ್ನಿ ನೋಡುತ್ತಾಳೆ. ಮನಸ್ಸಿನಲ್ಲೆ ಆತನನ್ನು ಪ್ರೇಮಿಸುತ್ತಾಳೆ, ಬಯಸುತ್ತಾಳೆ; 'ಚಂಡು ತನ್ನ ಮನೆಯಂಗಳಕ್ಕೆ ಬರಬಾರದೇ' ಎಂದು ದೇವರಲ್ಲಿ ಪ್ರಾರ್ಥಿಸುತ್ತಾಳೆ.

**ಕೆಂಡಗಣ್ಣಿನ ಹಂಪಿ ವಿರೂಪಾಕ್ಷ: ಈಗ:**
**ಚಂಡು ನಮ್ಮನೆಯೊಳು ಕಂಡದ್ದು: ಆದರೆ**
**ದಿಂಡರಕಿ ಹಾಕಿ ಕೈ ಮುಗಿವೆ ನಾನು:**

ದೇವರು ಕಣ್ತೆರೆಯುತ್ತಾನೆ. ಚಂಡು ರತ್ನಿಯ ಅಂಗಳಕ್ಕೆ ಬಂದು ಬೀಳುತ್ತದೆ. ರತ್ನಿ ಸಂತೋಷ ಪಡುತ್ತಾಳೆ. ಚಂಡನ್ನು ಕೊಂಡು ಹೋಗಲು ರಾಮ ಅರಮನೆಗೆ ಬರುತ್ತಾನೆ. ಚಂಡನ್ನು ಅಡಗಿಸಿಟ್ಟು ರತ್ನಿಯು ರಾಮನನ್ನು ತಬ್ಬಿಕೊಳ್ಳುತ್ತಾಳೆ. ರಾಮ ನಡುಗುತ್ತಾನೆ:

**ಇಳೆಯೊಳು ತಾಯೆಂದು ತಿಳಿತಿಳಿದು ಕೂಡಿದರೆ**

**ಬಳಲಿಸಿ ಯಮದೂತರೆಳೆಯುವರು ಎಳೆದೊಯ್ದು**

**ಖಳ ಖಳ ಕುದಿವೆಣ್ಣ್ಯಾಗ ಚಲ್ಲುವರು**

ಎನ್ನುತ್ತಾನೆ. ರತ್ನಿಯು ಒಪ್ಪದೆ ನಿನ್ನ ಅಪ್ಪ ಕುಳಿತ ಸಿಂಹಾಸನದಲ್ಲಿ ನೀನು ಕುಳಿತುಕೊಳ್ಳುವುದಿಲ್ಲವೇ ಎಂದು ಪ್ರಶ್ನಿಸುತ್ತಾಳೆ. ಬೆದರಿದ ರಾಮನು ಚಂಡನ್ನು ಕಸಿದುಕೊಂಡು ಹೊಳೆ ಬದಿಗೆ ಓಡುತ್ತಾನೆ. ರತ್ನಿಯು ಅವಮಾನದಿಂದ ಬೆಂದು ಸೇಡು ತೀರಿಸಿಕೊಳ್ಳಲು ನಿಶ್ಚಯಿಸುತ್ತಾಳೆ. ಬೇಟೆಗೆ ಹೋಗಿದ್ದ ಕಂಪಿಲರಾಯನನ್ನು ಮನೆಗೆ ಬರುವಷ್ಟರಲ್ಲಿ ಕೈ ಬಳೆಗಳನ್ನು ಒಡೆದುಕೊಂಡು ಕುಂಕುಮ ಅಳಿಸಿಕೊಂಡು, ಮೈಮೇಲೆ ಗಾಯಮಾಡಿಕೊಂಡು, ಮುತ್ತಿನ ಸರ ಚೆಲ್ಲಾಡಿ, ಅಳುತ್ತಾ ಕುಳಿತುಕೊಳ್ಳುತ್ತಾಳೆ. ಅರಮನೆ ಬಾಗಿಲಲ್ಲಿ ಆರತಿ ಎತ್ತಲು ಬಾರದಿದ್ದ ರತ್ನಿಯ ಬಗೆಗೆ ಚಿಂತಿಸಿದ ಕಂಪಿಲನು ನೇರವಾಗಿ ರತ್ನಿಯ ಮನೆ ಬಾಗಿಲಿಗೆ ಬಂದನು. ರತ್ನಿಯು ಕಡು ಚಲ್ವ ರೂಪಕ್ಕೆ ಭ್ರಮಿಸುತಲಿ ರಾಮನು ಎನ್ನ ಕೆಡಿಸಿಬಿಟ್ಟ ಎನ್ನುತ್ತಾಳೆ. ಖತಿಗೊಂಡ ಕಂಪಿಲನು ಮಗನ ತಲೆ ಕತ್ತರಿಸಲು ಆಜ್ಞೆ ಮಾಡುತ್ತಾನೆ. ಹರಿಯಾಲಮ್ಮ ಪರಿಪರಿಯಿಂದ ಬೇಡಿಕೊಂಡರೂ ಕಂಪಿಲನ ನಿರ್ಧಾರ ಬದಲಾಗಲಿಲ್ಲ. ರಾಮನ ಹೆಂಡತಿಯಾದ ರಾಮಿಲಾದೇವಿಯು ಅರಸನ ಕಾಲಿಗೆ ಬಿದ್ದು ಬೇಡಿಕೊಂಡಳು. ಅರಸ ಕೇಳಲಿಲ್ಲ. ಬೈಚಪ್ಪ ರಾಮನ ತಲೆ ಕಡಿಯಲು ಸಿದ್ಧನಾದಾಗ ಅರಮನೆಯ ಹೆಣ್ಣಾಳಿನ ಮಗನಾದ ಹೋಲ್ಕಿರಾಮನು ತನ್ನ ತಲೆ ಒಡ್ಡುತ್ತಾನೆ, ಪದ್ಮಿನಿಗೆ ಗೋಳಾಗುತ್ತದೆ. ಆಕೆ ಮಂತ್ರಿ ಬೈಚಪ್ಪನನ್ನೆ ಪ್ರಶ್ನಿಸುತ್ತಾಳೆ. ನನ್ನ ಗಂಡ ಎಸಗಿದ ತಪ್ಪಾವುದೆಂದು ಕೇಳುತ್ತಾಳೆ. ಬೈಚಪ್ಪನು ಹೊಲ್ಕಿರಾಮನನ್ನು ಹೊಗಳಿ, ಅವನಿಂದಾಗಿ ಅರಸು ವಂಶ ಉಳಿಯಿತೆಂದು ಹೇಳಿ ನಿನ್ನನ್ನು ನಿನ್ನ ಮಗನನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ ಎಂದು ಭರವಸೆ ನೀಡುತ್ತಾನೆ.

**ಕುಮಾರರಾಮನ ಬಗೆಗೆ ಇತರ ಕತೆಗಳು**

ಚನ್ನಪಟ್ಟಣದ ಪರಿಸರದಲ್ಲಿ ಜನಪ್ರಿಯವಾಗಿರುವ ಸಾರಂಗಧರನ ಕಥೆಯಲ್ಲಿ ಕುಮಾರರಾಮನ ಆಶಯಗಳೇ ತುಂಬಿವೆ ಹೆಸರುಗಳು ಮಾತ್ರ ಬೇರೆಯಾಗಿವೆ. ಮಂಡ್ಯ ಪರಿಸರದಲ್ಲಿ ಜನಪ್ರಿಯವಾಗಿರುವ ಚನ್ನಿಗರಾಮನ ಕಥೆ ಕುಮಾರರಾಮನ ಕಥೆಯನ್ನು ಪ್ರಧಾನವಾಗಿರಿಸಿಕೊಂಡ ಕತೆಯಾಗಿದೆ. ಮೈಸೂರು ಭಾಗದಲ್ಲೂ ಸಹ ಕುಮಾರರಾಮನು ದೊಂಬಿದಾಸರ, ನೀಲಗಾರರ, ಕಂಸಾಳೆಯವರ ಕತೆಗಳಲ್ಲಿ ಭಿನ್ನ ಹೆಸರಿನಿಂದ ಕಂಡು ಬರುತ್ತಾನೆ. ಲೆ.ಕ.ಮೆಕೆಂಜಿಯು ಕರ್ನಾಟಕದಾದ್ಯಂತ ೧೭೯೨ರಿಂದ ೧೮೧೨ರವರೆಗೆ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕನಿಷ್ಟ ಆರು ಕೈಫಿಯತ್ತುಗಳಾದರೂ ಕುಮಾರರಾಮನಿಗೆ ಸಂಬಂಧಿಸಿವೆ. ನಂಜುಂಡ ಕವಿಯ ಕುಮಾರರಾಮ ಚರಿತ್ರ ಪಂಚಾಳ ಗಂಗನ ಚನ್ನರಾಮನ ಸಾಂಗತ್ಯ. ಮಹಲಿಂಗ ಸ್ವಾಮಿಯ

ಬಾಲರಾಮನ ಸಾಂಗತ್ಯಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈಗಾಗಲೇ ಪ್ರಸಿದ್ಧಿ ಪಡೆದಿವೆ. ಚಿತ್ರದುರ್ಗ ಮತ್ತು ಬಳ್ಳಾರಿ ಪರಿಸರದಲ್ಲಿ ಜನಪ್ರಿಯವಾಗಿರುವ ಯಕ್ಷಗಾನ ಪ್ರಸಂಗಗಳಲ್ಲಿ ಕಥೆಯು ಹೆಚ್ಚು ಪೌರಾಣಿಕೀಕರಣಗೊಂಡಿದೆ. ತೆಲುಗಿನಲ್ಲಿ ಸುಪ್ರಸಿದ್ಧವಾದ ಕುಮಾರರಾಮನಿಗೆ ಕತೆಯಲ್ಲಿ ಆನೆಗೊಂದಿಯ ವಸವಲ್ಲಿ ದುರ್ಗದ ಅರಸ ವೀರಕುಂಭಿನರಾಜ ಅಲ್ಲಿಯ ಗ್ರಾಮದೇವತೆ ಕಂಪಿಲ ಗಂಗಾವತಿ ರಾಜನ ಹೆಂಡತಿ ಅರಿಯಾಲಾದೇವಿ. ಹೀಗೆ ಭಿನ್ನ ಭಿನ್ನ ಸನ್ನಿವೇಶಗಳಿಂದ ಮುಂದುವರೆಯುತ್ತರಾದರೂ ಕತೆಯ ಆಶಯ ಒಂದೇ ಕಂಡುಬರುತ್ತದೆ.

### ೪.೪. ತ್ರಿಪದಿಗಳು

ಆನೆಗೊಂದಿ ಪರಿಸರದಲ್ಲಿ ಅನೇಕ ತ್ರಿಪದಿಗಳು ಇದ್ದು ಅವುಗಳಲ್ಲಿ ಕೆಲವು ಈ ರೀತಿಯಾಗಿವೆ:

೧. ರೊಚ್ಚೆದ್ದು ಗಂಗಮ್ಮ ರಾಜ್ಯವನೊಕ್ಕಾಳೆ
ಮುತ್ತು ಆನೆಗುಂದಿ ಮೊದಲಗಟ್ಟಿ ಮಟ್ರನೀಳ
ಕಲ್ಲ ಕೆಡ್ಯಾವಾಳಯ್ಯ

೨. ಮುತ್ತು ಮಾಣಿಕಬೇಡ ಮತ್ತೆ ಸಿರಿತನ ಬೇಡ
ಸುತ್ತ ಕೋಟೆಯ ವೈಭವ ಬೇಡ ನನ್ನವ್ವ
ಸುತ್ತೆಲ್ಲ ನಿನ್ನ ಹಾಡಿರಲಿ

೩. ಗೆಳೆಯನ್ನ ಕಳ್ಕೊಂಡು ವಣಮಾರಿ ಮಾಡ್ಕೊಂಡು
ದಣಿ ದಣಿದು ಊರ ತಿರಿಗ್ಯಾಳೊ ಅಗಸ್ಯಾಗ
ಹಣಿ ಹಣಿ ಬಡದು ಅಳತಾಳೊ

೪. ಹಂಪಿಯ ಹೊಳಿ ಚಂದ ಪಂಪನ ಗುಡಿ ಚಂದ
ಹೇಮಾದ್ರಿ ಚಂದ ಪರಿಸಿಗೆ ಆನೆಗುಂದಿ
ರಾಜರಿಗೆ ಚಂದ ಪ್ರಜೆಗಳು

೫. ಕೆಂಪು ಮಾರಿಯ ದಂಡು ಗುಂಪಾಗಿ ಮುತ್ಯಾರೋ
ಕಂಪೀಸಿ ಹೋತೋ ನರಗುಂದೊ
ಬಾಬಾಸಾಬ್ ಹಂಪಿ ಹೊಳೆ ಮುಂದ ತಡವ್ಯಾನೊ

೬. ಹಾವಿನಾಂಗ ಹರಿದಾಡಿ ಬಂದಾಳು ಗಂಗಮ್ಮ
ಇಂಬಿಲ್ಲವೆಂದು ಮೊರೆದಾಳ ಹಂಪೆಯಾಗಿ
ತೆಂಗಿ ಬಾಳೆಯ ಲಾಡಿ ಹರಿದಾಳ

೭. ಧಿರಣ್ಣ ರಾಮ ನೀಲ ತೇಜನೇರಿ
ನೀರಾಣಿ ಮೈಯ ತೊಳೆವಾಗ ಹಂಪಿಯ
ಹೊಳೆಯಾಗೆ ಆಟಾವ ಆಡ್ಯಾನೆ

ಆನೆಗೊಂದಿ ಪರಿಸರದಲ್ಲಿ ಕೇಳಿಬರುವ ಹೆಚ್ಚಿನ ತ್ರಿಪದಿಗಳಲ್ಲಿ ಹಂಪೆ ಹೊಳೆಯ ವರ್ಣನೆ ಹೆಚ್ಚಾಗಿ ಕಂಡುಬರುತ್ತದೆ. ಒಂದನೇ ಹಾಡು ಮತ್ತು ಆರನೇ ಹಾಡಿನಲ್ಲಿ ಹಂಪಿ ಹೊಳೆಯು ನೆರೆ ತುಂಬಿದ ಸಂದರ್ಭದ ಹಾಡಾಗಿದೆ. ಜಾನಪದ ತ್ರಿಪದಿಗಳಲ್ಲಿ ಹಂಪಿ ಹೊಳೆ ಎಂದು ಕರೆದುದನ್ನು ಅಕ್ಷರ ಇತಿಹಾಸ ತುಂಗಭದ್ರ ಎಂದು ಕರೆದಿದೆ. ಎರಡು ಮೂರನೇ ಹಾಡುಗಳು ಆನೆಗೊಂದಿಯಲ್ಲಿ ಅನೇಕ ಸುತ್ತುಗಳಿಂದ ಆವೃತ್ತರಾದ ಕೋಟೆಯನ್ನು, ಏಳು ಅಗಸಿಗಳನ್ನು ನೆನಪಿಸುತ್ತವೆ. ನಾಲ್ಕನೇ ಹಾಡಿನಲ್ಲಿ ವಿರೂಪಾಕ್ಷ ಬಗೆಗಿರುವ ಭಕ್ತಿ ಭಾವ, ಆನೆಗೊಂದಿ ರಾಜರು ಪ್ರಜೆಗಳ ಬಗೆಗೆ ಹೊಂದಿರುವ ಅನ್ಯೋನ್ಯ ಭಾವ ವ್ಯಕ್ತವಾಗುತ್ತದೆ. ಐದನೇ ಹಾಡಿನಲ್ಲಿ ಕೆಂಪು ಮಾರಿಯ ದಂಡು ಬ್ರಿಟೀಷರನ್ನೇ ಕುರಿತದ್ದಾಗಿದೆ ಮತ್ತು ನರಗುಂದ ಬಂಡಾಯಕ್ಕೆ ಸಂಬಂಧಿಸಿದೆ. ಏಳನೆಯ ಹಾಡಿನಲ್ಲಿ ಕುಮಾರರಾಮನು ಈ ಭಾಗದ ದೊರೆಯಾಗಿ ಹೇಗೆ ಪ್ರಜೆಗಳಿಗೆ ಪ್ರಿಯನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅಕ್ಷರ ಇತಿಹಾಸ ಹೇಳುವ ವಿಜಯನಗರ ಅನೇಕ ಪ್ರಮುಖ ಘಟನೆ, ವ್ಯಕ್ತಿಗಳು ಜಾನಪದ ತ್ರಿಪದಿಗಳಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಆದರೂ ಆನೆಗೊಂದಿಗೆ ಸಂಬಂಧಿಸಿದ ಅಭಿಮಾನ ಅಲ್ಲಲ್ಲಿ ಮೂಡಿ ಬಂದಿವೆ.

### ೪.೫. ಐತಿಹ್ಯಗಳು

ಚರಿತ್ರೆ ಎಂಬ ಹೆಸರಿನಲ್ಲಿ ಏನನ್ನು ಬರೆದಿಡರಾಗುತ್ತಿದೆಯೋ ಅದನ್ನು ನಿಜವೆಂದೂ, ಕಟ್ಟು ಕತೆಗಳಲ್ಲವೆಂದು ಹೇಳಲಾಗುತ್ತದೆ. ಇತಿಹಾಸ ಎಂಬ ಪದ ಅದನ್ನು ಪ್ರಕಟಿಸುತ್ತದೆ. ಈ ಹಿನ್ನೆಲೆಯಲ್ಲಿ ಐತಿಹ್ಯಗಳನ್ನು ಕಟ್ಟುಕತೆಗಳೆಂದು ಅವು ನಿಜವಾಗಿ ನಡೆದಿರುವ ಸಾಧ್ಯತೆ ಕಡಿಮೆಯೆಂದು ಭಾವಿಸಲಾಗುತ್ತದೆ. ಆದರೆ ಯಾರು ಐತಿಹ್ಯವನ್ನು ನಿರೂಪಿಸುತ್ತಾರೋ ಅವರ ದೃಷ್ಟಿಯಿಂದ ಅದು ನಿಜವೇ ಆಗಿರುತ್ತದೆ. ಆ ನಿರೂಪಕನ ತಿಳುವಳಿಕೆಯ ಪರಿಧಿಯೊಳಗಡೆ ಅದು ನಿಜವಾಗಲೂ ಹಿಂದೆ ನಡೆದ ಘಟನೆಯೇ ಆಗಿರುತ್ತದೆ. ಇತಿಹಾಸದ ಬರಹಗಾರರು ತಮ್ಮ ಬರಹಕ್ಕೆ ಅಗತ್ಯವಾದ ಆಧಾರಗಳನ್ನು ನೀಡುವ ಹಾಗೆ ಐತಿಹ್ಯದ ನಿರೂಪಕರೂ ತಮ್ಮ ನಿರೂಪಣೆಗೆ ಅಗತ್ಯವಾದ ಆಧಾರಗಳನ್ನು ನೀಡುತ್ತಾರೆ. ಎಷ್ಟೋ ಬಾರಿ ಒಂದೇ ಆಧಾರದ ಮೇಲೆ ಚರಿತ್ರೆ ಮತ್ತು ಐತಿಹ್ಯಗಳು ಭಿನ್ನ ಸ್ವರೂಪದಲ್ಲಿ ಬೆಳೆದು ಬಿಡುತ್ತವೆ. ಈ ಆಧಾರಗಳು ಯಾವುದೂ ಆಗಬಹುದು. ಅವಶೇಷ, ಪಳೆಯುಳಿಕೆ, ವಸ್ತು, ಸ್ಥಳ, ಕೆರೆ, ಕಟ್ಟೆ, ಗುಡ್ಡ, ಬೆಟ್ಟ, ಬಂಡೆ, ದಿನ್ನೆ, ಉಡುಗೆ, ತೊಡುಗೆ, ಆಯುಧ, ಪ್ರಾಣಿ, ಸಸ್ಯ, ಮನುಷ್ಯ ಹೀಗೆ ಯಾವುದು ಬೇಕಾದರೂ ಐತಿಹ್ಯವಾಗಬಹುದು. ಯಾವುದು ಐತಿಹ್ಯಕ್ಕೆ ಆಧಾರವಾಗುತ್ತದೋ ಅದರ ಮುಖ್ಯ ಗುಣವೊಂದು ಐತಿಹ್ಯದ ನಿರೂಪಣೆಯಲ್ಲಿ ಪ್ರಧಾನ ಪಾತ್ರ ನಿರ್ವಹಿಸುತ್ತದೆ. ಆಧಾರವಿಲ್ಲದೆ ಐತಿಹ್ಯ ಹುಟ್ಟುವುದಿಲ್ಲ. ನಿರೂಪಕನ ಪೀಠಿಕಾ ರೂಪದ ಮಾತಿನಲ್ಲಿಯೇ ಈ ಆಧಾರಗಳು ಸ್ಪಷ್ಟವಾಗುತ್ತವೆ. ಸರಿಯಾದ ಸ್ಥಳ, ನಿರ್ದಿಷ್ಟ ಸಮಯ ಮತ್ತು ವ್ಯಕ್ತಿಯ ಬಗೆಗೆ ಯಾವ

ಆತಂಕ ತಡವರಿಕೆ ಇಲ್ಲದೆ ವಿಷಯ ಮಂಡನೆ ಮಾಡುವ ಆತ ಕಣ್ಣೆದುರಿಗಿರುವ ಭೌತಿಕ ಆಧಾರಗಳಿಂದಲೇ ಅದನ್ನು ಇನ್ನಷ್ಟು ಗಟ್ಟಿಗೊಳಿಸುತ್ತಾನೆ. ಇವೆಲ್ಲ ಸಾಮಾನ್ಯ ಜನರಿಗೂ ತಿಳಿದಿರುತ್ತದೆ, ಕಣ್ಣಿದ್ದವರಿಗೆ ಕಾಣುತ್ತದೆ, ಕಿವಿಯಿದ್ದವರಿಗೆ ಕೇಳಿಸುತ್ತದೆ, ನಿಮಗಿನ್ನೂ ತಿಳಿದಿಲ್ಲವೇ ಎಂಬ ದಾಟಿಯಲ್ಲಿ ಆತನ ನಿರೂಪಣೆ ಇರುತ್ತದೆ. ಜೊತೆಗೆ ತನ್ನಲ್ಲಿರುವ ಆಧಾರ ಸಾಮಗ್ರಿಗಳನ್ನು ನಿರೂಪಣೆಯಲ್ಲಿ ಮತ್ತೆ ಮತ್ತೆ ಬಳಸಿಕೊಳ್ಳುತ್ತಾನೆ. ಹೀಗೆ ಮಾಡುವಾಗ ನಿರೂಪಣೆಯಲ್ಲಿರುವ ಅಮೂರ್ತಾಂಶಗಳೆಲ್ಲ ಗೌಣವಾಗುತ್ತದೆ. ಅದು ಅಲ್ಲಿರುವುದರಿಂದಲೇ ನಾನು ಅದನ್ನು ನಂಬಿದೆ, ಇಲ್ಲದಿದ್ದರೆ ನಾನೆಲ್ಲಿ ನಂಬುತ್ತಿದ್ದೆ ನನಗೂ ನಿಮ್ಮ ಹಾಗೆ ಆಧಾರವಿಲ್ಲದೆ ನಂಬಲಿಕ್ಕಾಗುವುದಿಲ್ಲ ಎಂದು ಹೇಳುವ ಮೂಲಕ ಆತನ ತನ್ನ ನಿರೂಪಣೆಯನ್ನು ನಿಲ್ಲಿಸುತ್ತಾನೆ. ಈ ಬಗೆಯ ಮುಕ್ತಾಯವು ನಿರೂಪಣೆಯ ಸತ್ಯವನ್ನು ಇನ್ನಷ್ಟು ಬಲಪಡಿಸುತ್ತದೆ. ಹೀಗೆ ಐತಿಹ್ಯಗಳು ಜನರ ಇತಿಹಾಸವನ್ನು ತಮ್ಮದೇ ಆದ ರೀತಿಯಲ್ಲಿ ಪ್ರಕಟಪಡಿಸುತ್ತವೆ.

ಆನೆಗೊಂದಿಯ ಬಗೆಗೆ ಸಾಕಷ್ಟು ಐತಿಹ್ಯಗಳು ಲಭಿಸುತ್ತವೆ. ಇವುಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡು ಅಧ್ಯಯನ ಮಾಡಬಹುದು.

**ಅ. ವ್ಯಕ್ತಿ ಪ್ರಧಾನ ಐತಿಹ್ಯಗಳು, ಆ. ಸ್ಥಳ ಪ್ರಧಾನ ಐತಿಹ್ಯಗಳು, ಇ. ಘಟನಾ ಪ್ರಧಾನ ಐತಿಹ್ಯಗಳು.**

## ವ್ಯಕ್ತಿ ಪ್ರಧಾನ ಐತಿಹ್ಯಗಳು

ಆನೆಗೊಂದಿಯ ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ಅಸಮಾನ್ಯನಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆ ಇರುತ್ತದೆ. ವಿವರಗಳು ಈ ವ್ಯಕ್ತಿಯ ಸಾಧನೆಗೆ ಪೋಷಕವಾಗಿ ಬರುತ್ತವೆ. ಇಲ್ಲಿ ವ್ಯಕ್ತಿ ಆನೆಗೊಂದಿಗೆ ಬದ್ಧನಾಗಿದ್ದರೂ ಆನೆಗೊಂದಿಯನ್ನು ಮೀರಿ ಅವನ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ವ್ಯಕ್ತಿ ಪ್ರಧಾನ ಐತಿಹ್ಯಗಳನ್ನು ಮತ್ತೆ ಎರಡು ರೀತಿಯಿಂದ ವಿಭಜಿಸಿಕೊಳ್ಳಬಹುದು. ಅ. ಐತಿಹಾಸಿಕ ವ್ಯಕ್ತಿಗಳು, ಆ. ಪೌರಾಣಿಕ ವ್ಯಕ್ತಿಗಳು, ಆನೆಗೊಂದಿಯಲ್ಲಿ ಕಂಡುಬರುವ ವ್ಯಕ್ತಿ ಪ್ರಧಾನ ಐತಿಹ್ಯಗಳೆಲ್ಲ ಪೌರಾಣಿಕ ವ್ಯಕ್ತಿಗಳನ್ನಾಧರಿಸಿ ಬಂದಿರುವದು ವಿಶೇಷ. ಐತಿಹಾಸಿಕ ವ್ಯಕ್ತಿಗಳ ಬಗೆಗಿನ ಐತಿಹ್ಯ ಆನೆಗೊಂದಿಯಲ್ಲಿ ದೊರೆಯುತ್ತದೆ. ಉದಾ ೧. ೬೪ ಕಾಲಿನ ಮಂಟಪ.

ಆನೆಗೊಂದಿಯಲ್ಲಿ ಈ ಕೆಳಗಿನ ಪೌರಾಣಿಕ ವ್ಯಕ್ತಿಗಳ ಬಗೆಗೆ ಐತಿಹ್ಯಗಳು ಲಭಿಸುತ್ತವೆ, ಹನುಮನ ಸೆಳೆವು, ದುರ್ಗಾದೇವಸ್ಥಾನ ಅಥವಾ ಘಟ್ಟಿಕೋಟೆ, ಮುದುಕಿವಟ್ಟಲು, ವಾಣಿಬದೇಶ್ವರ, ಚಿಂತಾಮಣಿ, ಅಂಜನಾದ್ರಿ ಬೆಟ್ಟ, ವಾಲಿ ಕಿಲ್ಲಾ.

## ಸ್ಥಳ ಪ್ರಧಾನ ಐತಿಹ್ಯಗಳು

ಈ ಬಗೆಯ ಐತಿಹ್ಯಗಳಲ್ಲಿ ಸ್ಥಳಕ್ಕೆ ಮಹತ್ವ ಇರುತ್ತದೆ. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ ಪ್ರಕೃತಿಗೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಸ್ಥಳದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ಈ ಐತಿಹ್ಯಗಳಿಗೆ ತಳಹದಿಯಾಗಿ ಕೆಲಸ ಮಾಡುತ್ತಿರುತ್ತದೆ. ಈ ಕೆಳಗಿನ ಸ್ಥಳ ಪ್ರಧಾನ ಐತಿಹ್ಯಗಳು ಆನೆಗೊಂದಿಯಲ್ಲಿ ಲಭಿಸುತ್ತವೆ. ಕನ್ನೇರಮ್ಮನ ಬಾವಿ, ವಾಲಿ ಭಂಡಾರ, ವಾಲಿಕಾಷ್ಠ, ಗಗನ ಮಹಲ್, ಚಂಚಲ ಕೋಟೆ, ನವ ಬೃಂದಾವನ, ತಳವಾರಿ ಮಾನೇವು, ಕೋತಿ ಮಾನೇವು.

## ಘಟನಾ ಪ್ರಧಾನ ಐತಿಹ್ಯಗಳು

ಇಲ್ಲಿ ಒಂದು ನಿರ್ದಿಷ್ಟ ಘಟನೆ ಪ್ರಧಾನವಾಗಿದ್ದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಎಷ್ಟೋ ಬಾರಿ ಒಬ್ಬ ವ್ಯಕ್ತಿ ಇರುವುದರ ಬದಲು ಜನರ ಗುಂಪು ಅಥವಾ ಜನ ಸಮೂಹ ಇರುವುದೂ ಕಂಡು ಬರುತ್ತದೆ. ತಳವಾರ ಘಟ್ಟ, ಮೂರ್ಕಾರ್ತಿ ಬಂಡೆ, ಕಲ್ಲುರಾಶಿಗಳು, ಕಲ್ಲಿನ ಸೇತುವೆ.

## ೬೪ ಕಾಲಿನ ಮಂಟಪ

ಆನೆಗೊಂದಿಯ ಪೂರ್ವ ಭಾಗದಲ್ಲಿ ತುಂಗಭದ್ರ ನದಿಯು ಇದ್ದು. ಈ ನದಿಯ ಮಧ್ಯದಲ್ಲಿ ನಿರ್ಮಾಣಗೊಂಡಿರುವ ಮಂಟಪ ಇದಾಗಿದೆ. ಈ ಭಾಗದಲ್ಲಿ ಕಲ್ಲು ಮಂಟಪಗಳು ಹೆಜ್ಜೆ ಹೆಜ್ಜೆಗೂ ಇರುವುದೇನೋ ನಿಜ. ಆದರೆ ನದಿಯ ಮಧ್ಯ ಭಾಗದಲ್ಲಿರುವ ಈ ಮಂಟಪ ಮಾತ್ರ ವಿಶಿಷ್ಟ ಐತಿಹ್ಯದಿಂದ ಕೂಡಿರುವುದು ಒಂದು ವಿಶೇಷವಾಗಿದೆ. ಆನೆಗೊಂದಿ ಸಂಸ್ಥಾನದ ಶ್ರೀ ರಾಜ ಕೃಷ್ಣದೇವರಾಯರು ಪರಾಕ್ರಮಿಗಳಷ್ಟೇ ನಿರ್ಮಾಣವಾದ ಈ ಮಂಟಪದ ಒಂದೊಂದು ಕಾಲೂ ಒಂದೊಂದು ಕಲೆಯನ್ನು ಸೂಚಿಸುತ್ತದೆಯಂತೆ ಎಂದು ಆನೆಗೊಂದಿಯ ಜನ ಭಾವುಕರಾಗಿ ಹೇಳುತ್ತಾರೆ.

## ಪೌರಾಣಿಕ ವ್ಯಕ್ತಿಗಳು

### ಹನುಮನ ಸೆಳವು

ತ್ರೇತಾಯುಗದಲ್ಲಿ ಆನೆಗೊಂದಿಯನ್ನು ಕಿಷ್ಕಿಂದೆ ಎಂದು ಕರೆಯಲಾಗುತ್ತಿತ್ತು. ಶ್ರೀರಾಮನ ಭಂಟ ಆಂಜನೇಯನ ಜನ್ಮಸ್ಥಾನ ಇಲ್ಲಿರುವ ಅಂಜನಾದ್ರಿ ಬೆಟ್ಟವಾಗಿದೆ ಎಂಬುದು ಜನರ ಅಭಿಪ್ರಾಯ. ಈ ಕಿಷ್ಕಿಂದೆಯ ಬಗ್ಗೆ ಅನೇಕ ಐತಿಹ್ಯಗಳು ಪ್ರಚಲಿತದಲ್ಲಿವೆ. ಅವುಗಳಲ್ಲಿ ಹನುಮನ ಸೆಳವು ಮುಖ್ಯವಾಗಿದೆ. ಇದಕ್ಕೆ ಸಂಬಂಧಿಸಿದ ಒಂದು ಕತೆ ಹೀಗಿದೆ. ಹನುಮಂತನ ತಾಯಿ ಅಂಜನಾದೇವಿ ಹಂಪಿ ಹೊಳೆಯ ಪಕ್ಕದಲ್ಲಿರುವ ಅಂಜನಾದ್ರಿ ಪರ್ವತದಲ್ಲಿ ವಾಸಿಸುತ್ತಿದ್ದಳು. ಕಾಲ ಕಳೆಯುತ್ತಿರುವಾಗ ಆಕೆ ಗಾಳಿಯ ಸಹವಾಸದಿಂದ ಹನುಮಂತನಿಗೆ ಜನ್ಮ ನೀಡುತ್ತಾಳೆ. ಜನ್ಮ ನೀಡಿದ ವೇಳೆಯಲ್ಲಿ ತನ್ನ ದೇಹವನ್ನು ತೊಳೆಯಲು ಆಕೆಗೆ ನೀರು ಬೇಕಾಗಿತ್ತು. ಆದರೆ ಆಕೆಯ ಮನೆ ಇರುವುದು ಬೆಟ್ಟದ ಮೇಲೆ. ಮೊದಲೇ ತಂದು ಇಟ್ಟುಕೊಂಡಿದ್ದ ನೀರು ಮುಗಿದಿತ್ತು. ಇಂತಹ ವೇಳೆಯಲ್ಲಿ ಅಂಜನಾ ದೇವಿ ಚಿಂತಾಕ್ರಾಂತಳಾಗಿ ಕುಳಿತಿರುವಾಗ ಬಾಲಹನುಮಂತನು ಬೆಟ್ಟವನ್ನು ಇಳಿದುಬಂದು ಹರಿಯುವ ಹೊಳೆಗೆ ಕೈಯನ್ನು ಅಡ್ಡಮಾಡಿ, ಅಂಜನಾದ್ರಿ ಬೆಟ್ಟದ ಕಡೆಗೆ ಸ್ವಲ್ಪ ನೀರು ಹರಿದು ಹೋಗುವಂತೆ ಮಾಡುತ್ತಾನೆ. ಅಂದಿನಿಂದ ಹಂಪಿ ಹೊಳೆಯುವ ಋಷ್ಯಮೂಕ ಪರ್ವತವನನು ಬಳಸಿ ಎರಡು ಭಾಗವಾಗಿ ಹರಿಯಲು ಆರಂಭಿಸಿತು. ಮೊದಲು ವಿರುಪಾಕ್ಷ ದೇವಸ್ಥಾನದ ಇದಿರು ಭಾಗದಲ್ಲಿ ಮಾತ್ರ ಹರಿಯುತ್ತಿದ್ದ ಹಂಪಿ ಹೊಳೆ ಈ ಘಟನೆಯ ಅನಂತರ ಋಷ್ಯಮೂಕ ಪರ್ವತದ ಎಡಬಲಗಳಲ್ಲಿ ಹರಿಯತೊಡಗಿತು. ಹೀಗೆ ಹಂಪಿ ಹೊಳೆಯು ಎರಡು ಭಾಗವಾಗಿ ಹರಿಯುವ ಸ್ಥಳಕ್ಕೆ ಹನುಮನ ಸೆಳವು ಎಂಬ ಹೆಸರು ಬಂತು. ಹಾಗಾಗಿ ಆನೆಗೊಂದಿಯ ಜನಪದರು ಈ ಸ್ಥಳಕ್ಕೆ ಹೋಗಿ ಪೂಜೆ ಪುನಸ್ಕಾರ ಮಾಡುವ ಸಂಪ್ರದಾಯ ಇಂದಿಗೂ ಇದೆ.

**ದುರ್ಗಾದೇವಿಯ ಬೆಟ್ಟ ಅಥವಾ ಘಟ್ಟಿ ಕೋಟೆ**

ಆನೆಗೊಂದಿಯಿಂದ ಹುಲಿಗಿಗೆ ಹೊರಡುವ ರಸ್ತೆಯ ಎಡಭಾಗದಲ್ಲಿ ಕಾಣುವ ಬೆಟ್ಟ ಗವಿರಂಗನಾಥನ ಬೆಟ್ಟದ ಪಕ್ಕಕ್ಕೆ ದುರ್ಗಾದೇವಿ ಬೆಟ್ಟ ಅಥವಾ ಘಟ್ಟಿಕೋಟೆ ಎಂದು ಹೆಸರು ಇದೆ. ಈ ದೇವಸ್ಥಾನದ ಬಗ್ಗೆ ಭಿನ್ನವಾದ ಐತಿಹ್ಯಗಳಿವೆ.

**ಐತಿಹ್ಯ ೧:** ಶಿವ ಪಾರ್ವತಿಯರ ರಾಸ ಕ್ರೀಡೆಯಲ್ಲಿ ಪಾರ್ವತಿಯು ಶಿವನ ಎರಡು ಕಣ್ಣುಗಳನ್ನು ಮುಚ್ಚಲು, ಶಿವನು ಅನಿವಾರ್ಯವಾಗಿ ಮೂರನೇ ಕಣ್ಣನ್ನು ತೆಗೆಯಲು ಪ್ರಳಯಾಗ್ನಿಯಾಗಿ ವಿಶ್ವದ ಅನೇಕ ಭಾಗಗಳು ಸುಟ್ಟು ಬೂದಿಯಾಗುತ್ತವೆ. ಆಗ ಪಾರ್ವತಿಯು ಶಿವನ ಉಗ್ರ ಕೋಪವನ್ನು ಶಾಂತಗೊಳಿಸಲು ಆದಿಶಕ್ತಿಯಾಗಿ ಅಥವಾ ದುರ್ಗಾವತಾರವಾಗಿ ರೂಪತಾಳಿ ಶಿವನ ಕ್ರೋಧವನ್ನು ಕಡಿಮೆ ಮಾಡಿದಳು. ಅಂದಿನಿಂದ ಇದೇ ಸ್ಥಳದಲ್ಲಿ ನೆಲೆಯೂರಿದಳು ಎಂಬ ವಾಡಿಕೆ ಇದೆ. ಅಂದಿನಿಂದ ರಾಜಮಹಾರಾಜರು ದುರ್ಗಾಮಾತೆಯನ್ನು ಮನೆದೇವರನ್ನಾಗಿ ಮಾಡಿಕೊಂಡರು. ಯಾವುದೇ ಯುದ್ಧಕ್ಕೆ ಹೊರಡುವ ಮುನ್ನ ದುರ್ಗಾ ದೇವಿಯ ದರ್ಶನ ಪಡೆದು ಹೋಗುತ್ತಿದ್ದರು. ಆಗ ಅವರಿಗೆ ಗೆಲುವಾಗುತ್ತಿತ್ತು ಎಂಬ ನಂಬಿಕೆ ಆನೆಗೊಂದಿ ಜನಪದರಲ್ಲಿದೆ. ಈಗಲೂ ಕಷ್ಟವೆಂದು ಬಂದ ಭಕ್ತರನ್ನು ಕಾಪಾಡಿದ ನಿದರ್ಶನಗಳಿವೆ ಎಂದು ಜನ ಭಕ್ತಿ ಭಾವದಿಂದ ಹೇಳುತ್ತಾರೆ.

**ಐತಿಹ್ಯ ೨ :** ಆನೆಗೊಂದಿ ರಾಜರು ಕಟ್ಟಿಸಿದರು ಎನ್ನಲಾದ ಇಲ್ಲಿನ ಘಟ್ಟಿಕೋಟೆಯ ರಕ್ಷಕ ದೈವ ದುರ್ಗಾಮಾತೆ. ಈ ದುರ್ಗಾಮಾತೆಯ ಆನೆಗೊಂದಿ ರಾಜರ ಮನೆದೇವರೂ ಹೌದು. ಕೋಣಗಳನ್ನು ಬಲಿ ಕೊಡುವುದರ ಮೂಲಕ ಈಕೆಯ ಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸುತ್ತಿದ್ದರಂತೆ. ವಿಜಯದಶಮಿಯ ಕಾಲದಲ್ಲಿ ಇಲ್ಲಿ ಈಗಲೂ ವಿಶೇಷ ಪೂಜೆ ನಡೆಯುತ್ತದೆ. ಈ ಬೆಟ್ಟದಲ್ಲಿ ದುರ್ಗಾದೇವಿ ನೆಲೆಸಿದ್ದರಿಂದ ದುರ್ಗಾದೇವಿ ಬೆಟ್ಟವೆಂದು ಹೆಸರು ಬಂತೆಂದು ಜನಪದರು ಹೇಳುತ್ತಾರೆ. ವಿಜಯನಗರ ಕಾಲದಲ್ಲಿನ ಸಂಪತ್ತು ಬೇರೆ ರಾಜರ ಧಾಳಿಯಿಂದ ಹಾಳಾಗುವ ಭಯ ಇದ್ದುದರಿಂದ, ಸಂಪತ್ತನ್ನು ದುರ್ಗಾದೇವಿ ಬೆಟ್ಟದಲ್ಲಿ ಕೂಡಿ ಹಾಕಿಡಲಾಗುತ್ತಿತ್ತೆಂದು ಜನ ನಂಬಿದ್ದಾರೆ. ಜೊತೆಗೆ ಆಪತ್ತಿನ ನಿಧಿಯಾಗಿ ಇಲ್ಲಿನ ಯಾವುದೋ ಒಂದು ಸ್ಥಳದಲ್ಲಿ ಚಿನ್ನ ಬೆಳ್ಳಿ ವಜ್ರದಂತಹ ಅಮೂಲ್ಯ ವಸ್ತುಗಳನ್ನು ಗೋಪ್ಯವಾಗಿ ಇಡಲಾಗಿತ್ತಂತೆ. ಹೀಗೆ ಇಟ್ಟ ವಿಷಯ ಅಂದಿನ ಮುಖ್ಯಮಂತ್ರಿಯಾಗಿದ್ದ ತಿಮ್ಮಣ್ಣನಿಗೆ ಮಾತ್ರ ಗೊತ್ತಿತ್ತು. ಯಾವುದೋ ಕಾರಣದಿಂದ ತಿಮ್ಮಣ್ಣನ ಕಣ್ಣುಗಳನ್ನು ಕೀಳಿಸಲಾಯಿತು. ಪರಿಣಾಮವಾಗಿ ತಿಮ್ಮಣ್ಣನಿಗೂ ಸಂಪತ್ತು ಕೂಡಿಟ್ಟ ಸ್ಥಳವನ್ನು ತೋರಿಸಲಾಗಲಿಲ್ಲ. ಹೀಗಾಗಿ ಆ ಸಂಪತ್ತು ಯಾರ ಕೈಗೂ ಸಿಗಲಿಲ್ಲ. ಸಂಪತ್ತನ್ನು ಕೂಡಿಡುವ ಸ್ಥಳವಾದುದರಿಂದ ಇದಕ್ಕೆ ಘಟ್ಟಿಕೋಟೆ ಎಂದು ಹೆಸರು ಬಂತು. ಹಿಂದೆ ಕೂಡಿಟ್ಟ ಸಂಪತ್ತು ಈ ಕೋಟೆಯೊಳಗೆ ಈಗಲೂ ಇದೆಯೆಂದು ಸ್ಥಳೀಯರು ನಂಬುತ್ತಾರೆ. ಕೋಟೆಯೊಳಗೆ ಇರುವ ಸುರಂಗ ಮಾರ್ಗವನ್ನು ಕ್ರಮಿಸಲು ಸಾಧ್ಯವಾದರೆ ಆ ಸಂಪತ್ತು ಸಿಗುತ್ತದೆ ಎಂದೂ ಸ್ಥಳೀಯರು ಹೇಳುತ್ತಾರೆ. ಆದರೆ ಸುರಂಗದಲ್ಲಿ ಹೋಗಲು ಸಾಧ್ಯವಿಲ್ಲವಾದ್ದರಿಂದ ಸಂಪತ್ತು ಸಿಗದು ಎಂದು ನಿರೂಪಕರು ವಾದಿಸುವುದುಂಟು.

**ಮುದುಕಿ ವಟ್ಟಲು**

ಆನೆಗೊಂದಿಯಿಂದ ಮುಕ್ಕುಂಪಿ ಕಡೆ ಮಧ್ಯದಲ್ಲಿ ಶಬರಿಯ ಸ್ಥಳವೆನ್ನಲಾದ ಮುದುಕಿ ವಟ್ಟಲು ಎಂಬ ಸ್ಥಳವಿದೆ. ಇಲ್ಲಿ ಕಲ್ಲು ಬಂಡೆಯೊಂದರ ಮೇಲೆ ಕುಳಿತು ರಾಮಭಕ್ತೆ ಶಬರಿ ಬಾರೆಹಣ್ಣುಗಳನ್ನು ರಾಮನಿಗೆ ಅರ್ಪಿಸಲೋಸುಗ ಕಾಯುತ್ತಿದ್ದಳಂತೆ. ಇವಳ ಭಕ್ತಿಗೆ ಮೆಚ್ಚಿ ಕೊನೆಗೆ ರಾಮನು ಶಬರಿಯ ಕೈಯಲ್ಲಿರುವ ಬಾರೆಹಣ್ಣುಗಳನ್ನು ಸ್ವೀಕರಿಸಿದನಂತೆ. ಈಗಲೂ ಇಲ್ಲಿಯ ಸುತ್ತಮುತ್ತಲಿನ ಬಾರೆ ಗಿಡಗಳ ಹಣ್ಣುಗಳನ್ನು ತಂದು ಈ ಬಂಡೆಯ ಮೇಲೆ ಕುಳಿತು ತಿಂದರೆ ಹುಳಿ ಬಾರೆಹಣ್ಣು ಸಹಿತ ಸಿಹಿಯಾಗುತ್ತದೆಂಬ ನಂಬಿಕೆ ಸ್ಥಳೀಯರಲ್ಲಿದೆ.

**ಚಿಂತಾಮಣಿ ಮಠ**

ಆನೆಗೊಂದಿಯ ದಕ್ಷಿಣಕ್ಕೆ ತುಂಗಭದ್ರಾ ನದಿಯ ತೀರದಲ್ಲಿ ಮುಕ್ತಿ ನರಸಿಂಹನ ಮೂರ್ತಿಯನ್ನು ಸ್ಥಾಪಿಸಲು ಒಬ್ಬ ರಾಜನು ಆಸಕ್ತಿ ಹೊಂದುತ್ತಾನೆ. ಹಿಮಾಚಲ ಪ್ರಾಂತವಾಸಿಯಾದ ವೇದಗುಪ್ತನು ರಾಜನ ಆಹ್ವಾನದ ಮೇರೆಗೆ ಸ್ಥಾಪನಾ ಕಾರ್ಯವನ್ನು ಮುಗಿಸಿದನು. ಈವರೆಗೆ ಇದ್ದ ಕಲ್ಯಾಣಪುರವೆಂಬ ಹೆಸರನ್ನು ಬದಲಿಸಿ ಆನೆಗೊಂದಿ ಎಂದು ಈ ಗ್ರಾಮಕ್ಕೆ ಮರುನಾಮಕರಣ ಮಾಡಿದ. ಈ ಚಿಂತಾಮಣಿ ಮಠದಲ್ಲಿಯೇ ನೆಲೆಯೂರಿ ಮಠದ ಮೂಲ ಪುರುಷನೆನಿಸಿದ ಎಂಬುದು ಸ್ಥಳೀಯ ನಂಬಿಕೆಯಾಗಿದೆ.

**ಅಂಜನಾದ್ರಿ ಬೆಟ್ಟ ಅಥವಾ ಆಂಜನೇಯ ಬೆಟ್ಟ**

ಆನೆಗೊಂದಿಯ ಹತ್ತಿರದಲ್ಲಿರುವ, ಪುರಾಣ ಪ್ರಸಿದ್ಧವೆಂದು ಹೇಳಲಾಗುವ ಬೆಟ್ಟ ಇದಾಗಿದೆ. ಹನುಮಂತನ ತಾಯಿ ಅಂಜನಾದೇವಿಯು ಈ ಪರ್ವತದಲ್ಲಿ ವಾಸವಾಗಿದ್ದಳೆಂದು ಜನರು ಹೇಳುತ್ತಾರೆ. ಹೊಳೆಯ ಎಡದಂಡೆಗೆ ಕಂಡು ಬರುವ ಹನುಮನಹಳ್ಳಿಯ ಸಮೀಪದ ಈ ಪರ್ವತದಲ್ಲಿ ಇಂದು ಅನೇಕ ಸಂತರು ನೆಲೆಯಾಗಿದ್ದಾರೆ. ಹನುಮ ಜಯಂತಿಯ ಕಾರ್ಯಕ್ರಮವನ್ನು ಇಲ್ಲಿ ವಿಶೇಷವಾಗಿ ನಡೆಸುತ್ತಾರೆ. ಅಂಜನಾದೇವಿ ಈ ಪರ್ವತದಲ್ಲಿ ವಾಸವಾಗಿದದ್ದುದರಿಂದ ಈ ಪರ್ವತಕ್ಕೆ ಅಂಜನಾದ್ರಿ ಪರ್ವತ ಎಂದು ಹೆಸರು ಬಂತೆಂಬ ನಂಬಿಕೆ ಸಾರ್ವತ್ರಿಕವಾಗಿದೆ. ಹನುಮಂತನನ್ನು ಹಡೆದ ಮೇಲೆ ಆಕೆಗೆ ನೀರು ಬೇಕಾದಾಗ ಹನುಮಂತನೇ ನೀರು ಒದಗಿಸಿಕೊಟ್ಟದ್ದನ್ನು ಜನಪದ ಕವಿಗಳು ದಾಖಲಿಸಿದ್ದಾರೆ.

**ಅಡವ್ಯಾಗಂಜನದೇವಿ ಹನುಮಾನ ಹಡೆದಾಳೆ**
**ತೊಡೆಯ ತೊಳೆಯಾಕ ನೀರಿಲ್ಲ ಹನುಮಣ್ಣ**
**ಸುತ್ತಲ ಹೊಳೆಯ ತಿರು ವ್ಯಾನೆ**

**ವಾಲಿಕಿಲ್ಲಾ**

ಆನೆಗೊಂದಿ ಹುಲಗಿ ರಸ್ತೆಯಲ್ಲಿ ಗವಿರಂಗನಾಥ ದೇವಾಲಯಕ್ಕಿಂತ ಮೊದಲೇ ಬರುವ ಎಡಭಾಗದ ರಸ್ತೆಯಿಂದ ನೇರವಾಗಿ ಬೆಟ್ಟದ ಮೇಲೆ ಹೋದರೆ, ಅಲ್ಲಿ ನಿಸರ್ಗ ಸಹಜ ಕಲ್ಲು ಬಂಡೆಗಳಿಂದ ಆವೃತವಾಗಿದೆ.

ಸ್ಥಳವೇ ವಾಲಿಖಿಲ್ಲಾ, ಇಲ್ಲಿ ದೇವಾಲಯವಿದೆ. ಅಲ್ಲದೆ ನೈಸರ್ಗಿಕ ಗುಹೆಗಳೂ ಇಲ್ಲುಂಟು. ವಾಲಿಯು ಇಲ್ಲಿಯೇ ವಾಸವಾಗಿದ್ದನೆಂದು ಜನ ಅಭಿಪ್ರಾಯ ಪಡುತ್ತಾರೆ.

**ಕನ್ನೇರಮ್ಮನ ಬಾವಿ**

ಘುಟ್ಟಿಕೋಟೆ ಅಥವಾ ದುರ್ಗಾಬೆಟ್ಟ ಎಂದು ಕರೆಯಲ್ಪಡುವ ಪ್ರದೇಶವು ಆನೆಗೊಂದಿಯ ಪಶ್ಚಿಮಕ್ಕಿದೆ. ದೇವಸ್ಥಾನದ ಹಿಂಭಾಗದಲ್ಲಿರುವ ಸುಂದರವಾದ ಪ್ರಾಚೀನ ಬಾವಿಯೇ ಕನ್ನೇರಮ್ಮನ ಬಾವಿಯಾಗಿದೆ. ಈ ಬಾವಿಯಲ್ಲಿ ಯಾವಾಗಲೂ ನೀರಿರುತ್ತದೆ. ಹಿಂದೆ ಈ ಬಾವಿಯ ನೀರನ್ನು ದುರ್ಗಾದೇವಿಯ ಅಭಿಷೇಕಕ್ಕೆ ಮಾತ್ರ ಬಳಸುತ್ತಿದ್ದರಂತೆ. ಜನರು ಈ ಬಾವಿಯ ನೀರನ್ನು ಮುಟ್ಟುತ್ತಿರಲಿಲ್ಲ. ಜನರ ಬಳಕೆಗೆ ನಿಷೇಧವೆಂಬ ಅಭಿಪ್ರಾಯ ಇರುವುದೇ ಇದಕ್ಕೆ ಕಾರಣವಾಗಿತ್ತು. ದುರ್ಗಾ ದೇವಿಯನ್ನು ಪ್ರತಿ ಯುಗಾದಿ ಹಬ್ಬದಂದು ಹಾಗೂ ವಿಜಯದಶಮಿಯಂದು ಈ ಬಾವಿಯಲ್ಲಿ ಸ್ನಾನ ಮಾಡಿಸಿ ವಿಶೇಷ ಪೂಜೆ ಪುನಸ್ಕಾರದೊಂದಿಗೆ, ಪೂಜಿಸುತ್ತಿದ್ದರೆಂದು ಹೇಳಲಾಗಿದೆ. ಈ ಬಾವಿಯ ನೀರನ್ನು ಬಳಸಿದರೆ ಸಕಲವ್ಯಾದಿಗಳು ನಿವಾರಣೆಯಾಗುತ್ತವೆ ಎಂಬ ನಂಬಿಕೆಯೊಂದಿದೆ. ಈ ಬಾವಿಯ ಪಾವಿತ್ರ್ಯವನ್ನು ಕುರಿತು ಹೇಳುವ ಕಥೆಯೊಂದು ಹೀಗಿದೆ.

ಹಿಂದೆ ಸೂರ್ಯ ಮೂಡುವ ಮುನ್ನ ಮತ್ತು ಸೂರ್ಯ ಮುಳುಗಿದ ಅನಂತರ ದೇವ ಕನ್ನಿಕೆಯರು ಹಾಗೂ ಗಂಧರ್ವ ಸ್ತ್ರೀಯರು ಇಲ್ಲಿಗೆ ಬಂದು ಸ್ನಾನ ಮಾಡಿಕೊಂಡು ಹೋಗುತ್ತಿದ್ದರಂತೆ, ಅಂದಿನಿಂದ ಇದಕ್ಕೆ ಕನ್ನೇರಮ್ಮನ ಬಾವಿ ಎಂದು ಹೆಸರು ಬಂದಿದೆ. ಒಮ್ಮೆ ಒಬ್ಬ ಯುವಕ ಇದನ್ನು ಪರೀಕ್ಷಿಸಲು ಅಲ್ಲಿನ ಗವಿಯೊಂದರಲ್ಲಿ ಅಡಗಿ ಕುಳಿತನು. ಸುಮಾರು ಮಧ್ಯರಾತ್ರಿ ವೇಳೆಗೆ ಆಕಾಶದಿಂದ ಹಲವಾರು ದೇವ ಕನ್ನಿಕೆಯರು ಹಾಗೂ ಗಂಧರ್ವ ಕನ್ನಿಕೆಯರು ಗುಂಪಾಗಿ ಬಂದಿಳಿದು ನೋಡಿ ತಮ್ಮ ಉಡುಗೆಗಳನ್ನು ತೆಗೆದು ಬದಿಗಿರಿಸಿ ಜಲ ಕ್ರೀಡೆಯಾಡಿದರು. ಆಗ ಈ ಯುವಕನು ಗವಿಯಿಂದ ಹೊರಬಂದು ಅವರು ಉಡಿಗೆಗಳಿಟ್ಟಿದ್ದ ಸ್ಥಳಕ್ಕೆ ಬಂದು ಅವುಗಳನ್ನು ಕೈಗೆತ್ತಿಕೊಂಡು ದೇವ ಕನ್ನಿಕೆಯರು ಇದ್ದ ಬಳಿಕೆ ಹೋಗುವ ಪ್ರಯತ್ನ ಮಾಡಿದನು. ಇದನ್ನು ಗಮನಿಸಿದ ದೇವಕನ್ನಿಕೆಯರು ಅವನ ಕೈಗೆ ಸಿಗದಂತೆ ಪಾರಾಗಿ ಅಲ್ಲೇ ರಕ್ತ ಕಕ್ಕಿ ಸಾಯುವಂತೆ ಶಾಪವಿತ್ತರು. ಹಾಗೆ ಆ ಯುವಕ ಅಲ್ಲೇ ರಕ್ತ ಕಕ್ಕಿ ಸತ್ತನು. ದೇವನ್ನಿಕೆಯರ ಬಟ್ಟೆಗಳೆಲ್ಲಾ ಕಲ್ಲಾದವು. ಇಂದಿಗೂ ಆ ಬಟ್ಟೆಗಳು ದುರ್ಗಾದೇವಿ ಬೆಟ್ಟದ ಗವಿಯೊಂದರಲ್ಲಿ ಇದೆಯೊಂದು ಜನ ನಂಬುತ್ತಾರೆ. ಅಲ್ಲಿಗೆ ಹೋಗಬಾರದೆಂಬ ನಿಷೇದ ಇರುವುದರಿಂದ ಜನರು ದೂರದಿಂದಲೇ ಗವಿಗೆ ಕೈ ಮುಗಿದು ಹಿಂದಿರುಗುತ್ತಾರೆ.

**ವಾಲಿ ಭಂಡಾರ**

ಆನೆಗೊಂದಿಯಿಂದ ಹುಲಿಗಿ ರಸ್ತೆಗೆ ಹೋಗುವಾಗ ಎಡಭಾಗದಲ್ಲಿರುವ ದುರ್ಗಾದೇವಿ ಬೆಟ್ಟದ ತುದಿಯೊಂದು ಎಡ ಭಾಗದಲ್ಲಿ ಕಂಡುಬರುತ್ತದೆ. ಈ ಭಾಗದ ಸ್ಥಳವನ್ನು ವಾಲಿಭಂಡಾರ ಎಂದು ಕರೆಯುತ್ತಾರೆ. ಇಲ್ಲಿ ವಾಲಿಯು ಸಕಲ ಸಂಪತ್ತನ್ನು ಕೂಡಿಟ್ಟಿದ್ದಾನೆ ಎಂದು ಜನ ನಂಬುತ್ತಾರೆ. ಹಾಗೆ ಕೂಡಿಟ್ಟ ಗುಹೆಯ ಬಾಗಿಲಿಗೆ ವಾಲಿಯು ದೊಡ್ಡ ಬಂಡೆಯೊಂದನ್ನು ಇರಿಸಿದ್ದಾನಂತೆ. ವಾಲಿಯಷ್ಟೆ ಬಲಶಾಲಿಯಾದ ಇನ್ನಾರೋ ಒಬ್ಬ ಆ ಕಲ್ಲಿಗೆ ಒದ್ದಾಗ ಮಾತ್ರ ಆ ಬಂಡೆ ಪಕ್ಕಕ್ಕೆ ಸರಿದು, ಸಂಪತ್ತು ಕಾಣಿಸಿಕೊಳ್ಳುತ್ತದೆ ಎಂದು ಸ್ಥಳೀಯ

ಜನಪದರು ಹೇಳುತ್ತಾರೆ. ಈ ವಾಲಿಭಂಡಾರದ ಬಗೆಗೆ ಇನ್ನೊಂದು ಐತಿಹ್ಯವಿದೆ. ಹಿಂದೆ ಆನೆಗೊಂದಿ ಗೌಡರ ಮನೆಯ ಹಸುವೊಂದು ಕರು ಹಾಕಿತು. ಅದರ ಕೆಚ್ಚಲಿನಲ್ಲಿ ಒಂದು ತೊಟ್ಟು ಹಾಲೂ ಬರಲಿಲ್ಲ. ಗೌಡರಿಗೆ ಈ ವಿಷಯ ತಿಳಿಯಿತು. ಅವರು ತಮ್ಮ ಮನೆಯಲ್ಲಿ ದನ ಕಾಯುತ್ತಿದ್ದ ಜೀತದ ಆಳನ್ನು ಕರೆದು ನೀನೇ ಎಲ್ಲೋ ಹಾಲು ಕರೆದು ಮಾರ್‍ಕೊಂತೀಯಾ ಎಂದು ಬೆದರಿಸಿದರು ಮಾತ್ರವಲ್ಲ, ಕೆಲವು ದಿನ ಅವನಿಗೆ ಊಟ ಕೊಡದೆ ಹಾಗೆಯೇ ದನ ಕಾಯಲು ಕಳುಹಿಸಿದರು. ನನಗೆ ಇಲ್ಲದ ಅಪವಾದವನ್ನು ಹೊರಿಸಿ, ಊಟ ಇಲ್ಲದಂತೆ ಮಾಡಿತಲ್ಲ ಈ ಹಸು ಎಂದು ದನಕಾಯುವ ಹುಡುಗ ಆ ದಿವಸ ಹಸುವನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿರುತ್ತಾನೆ. ಸಂಜೆ ಹೊತ್ತಿ ಹೊಟ್ಟೆ ತುಂಬ ಮೇದ ಹಸು ತನ್ನ ಜೊತೆಯ ಹಸುಗಳನ್ನು ಬಿಟ್ಟು ಬಿರಬಿರನೆ ವಾಲಿಭಂಡಾರದ ಗವಿಯ ಬಾಗಿಲ ಮಾರ್ಗವಾಗಿ ಒಳಗೆ ಹೋಗುತ್ತಿದ್ದಂತೆಯೇ, ಅದರ ಬಾಲವನ್ನು ಹಿಡಿದು ಈ ದನ ಕಾಯುವ ಹುಡುಗನು ಕತ್ತಲ ಗವಿಯೊಳಕ್ಕೆ ಹೊರಟು ಹೋದ. ಸುಮಾರು ದೂರ ಕ್ರಮಿಸಿದ ಹಸುವು ಗವಿಯೊಳಗಿನ ಶಿವಲಿಂಗಕ್ಕೆ ಹಾಲನ್ನು ಸುರಿಸಿ ಮತ್ತೆ ವಾಪಾಸಾಯಿತು. ಅದರೊಂದಿಗೆ ಹಿಂದಿರುಗಿದ ಹುಡುಗನಿಗೆ ಒಬ್ಬ ಮುದುಕ ಕಾಣಿಸಿಕೊಂಡು ಈ ವಿಷಯವನ್ನು ಯಾರಿಗೂ ಹೇಳಕೂಡದು, ಹೇಳಿದರೆ ನಿನ್ನ ತಲೆ ಒಡೆದು ಹೋಳಾಗಿ ಬಿಡುತ್ತದೆ ಎಂದು ಹೇಳಿ ದ್ರವ್ಯದ ಗಂಟೊಂದನ್ನು ಕೊಟ್ಟಲಂತೆ. ಅದಕ್ಕೆ ತಲೆಯಾಡಿಸಿದ ಹುಡುಗ ಹಿಂದೆ ಮನೆಗೆ ಬಂದು ಕೈಯಲ್ಲಿರುವ ಗಂಟನ್ನು ತಂದೆ ತಾಯಿಗಳಿಗೆ ಕೊಟ್ಟನಂತೆ. ಪರಿಣಾಮವಾಗಿ ತಂದೆ ತಾಯಿಗಳ ದಾರಿದ್ರ್ಯ ಹೋಯಿತು. ಮಗನನ್ನು ದನ ಕಾಯುವ ಕೆಲಸದಿಂದ ಬಿಡಿಸಿದರು. ಊರವರಿಗೆ ಸಂಶಯ ಬಂತು. ತಂದೆತಾಯಿಯನ್ನು ಕೇಳಿದರೆ ಏನೂ ಉತ್ತರ ದೊರಕಲಿಲ್ಲ. ಹುಡುಗನನ್ನು ಕೇಳಿದರೆ ಏನೂ ಹೇಳಲಿಲ್ಲ. ಕೊನೆಗೆ ಅವನಿಗೆ ಶಿಕ್ಷೆ ಕೊಟ್ಟರು. ಆಗ ಆ ಹುಡುಗ ನಡೆದುದನ್ನು ಹೇಳಿದ. ತಕ್ಷಣ ಆ ಹುಡುಗನ ತಲೆ ಒಡೆದು ಹೋಳಾಯಿತು. ಹೋಳುಗಳು ಕಲ್ಲಾದವು. ಈ ಕಲ್ಲಿನ ತಲೆಯನ್ನು ವಾಲಿ ಭಂಡಾರದ ಸುತ್ತಮುತ್ತ ಈಗಲೂ ಕಾಣಬಹುದು ಎಂದು ಜನಪದರು ಹೇಳುತ್ತಾರೆ.

### ವಾಲಿಕಾಷ್ಠ

ಆನೆಗೊಂದಿ ಪರಿಸರದಲ್ಲಿ ಬರುವ ವೆಂಕಟಾಪುರ ಗ್ರಾಮದ ಸಮೀಪದಲ್ಲಿ ಗದ್ದೆಗಳ ನಡುವೆ ಕಂಡುಬರುವ ಸುಮಾರು ಐದು ಗುಂಟೆ ವಿಸ್ತೀರ್ಣ ಹೊಂದಿರುವ ಎತ್ತರವಾದ ಸುಣ್ಣದ ಕಲ್ಲಿನ ದಿಬ್ಬಣವನ್ನು ವಾಲಿಕಾಷ್ಠ ಅಥವಾ ವಾಲಿದಿಬ್ಬ ಎಂದು ಕರೆಯುತ್ತಾರೆ. ಆನೆಗೊಂದಿಯ ಚಿಂತಾಮಣಿ ಪ್ರದೇಶದಲ್ಲಿ ನಿಂತು ಬಾಣ ಹೂಡಿ ಶ್ರೀರಾಮನು ವಾಲಿಯನ್ನು ಕೊಂದನಂತೆ. ಈಗಲೂ ಆ ಪ್ರದೇಶದಲ್ಲಿ ಬಂಡೆಯ ಮೇಲೆ ಮೂಡಿರುವ ಬಿಲ್ಲು ಬಾಣದ ಗುರುತನ್ನು ರಾಮನ ಬಿಲ್ಲು ಬಾಣ ಎಂದು ಜನ ಹೇಳುತ್ತಾರೆ. ಈ ರೀತಿಯಾಗಿ ಕೊಲ್ಲಲ್ಪಟ್ಟ ವಾಲಿಯ ಶವವನ್ನು ಹೊಳೆ ದಾಟಿಸಿ ತಂದು ಈ ಸ್ಥಳದಲ್ಲಿ ಸುಡಲಾಯಿತು. ಹೀಗೆ ಸುಟ್ಟ ವಾಲಿಯ ಶರೀರದ ಎಲುಬುಗಳು ಈಗಲೂ ಹಾಗೆಯೇ ಉಳಿದಿವೆ ಎಂದು ಜನರು ಹೇಳುತ್ತಾರೆ. ಅಸ್ಥಿ ಪಂಜರದ ಆಕಾರದಲ್ಲಿ ಈ ದಿಬ್ಬ ಇರುವದೆಂದು ಜನ ಭಾವಿಸುತ್ತಾರೆ. ಈಗಲೂ ಸಹ ಹಲವಾರು ಸಂತರು ಮತ್ತು ಭಕ್ತರು ಈ ಸ್ಥಳಕ್ಕೆ ಭೇಟಿ ನೀಡಿ ಪೂಜೆ ಸಲ್ಲಿಸುವುದುಂಟು.

### ಗಗನ ಮಹಲ್

ಆನೆಗೊಂದಿಯಲ್ಲಿನ ರಂಗನಾಥ ಸ್ವಾಮಿ ದೇವಾಲಯದ ಎದುರಿಗೆ ಕಂಡು ಬರುವ ಈ ಕಟ್ಟಡವು, ಹಿಂದೆ ರಾಜ ಮಹಾರಾಜರುಗಳು ನಡೆಸುತ್ತಿದ್ದ ಮನರಂಜಕ ಹಾಗೂ ಸಾಹಸಮಯ ಸ್ಪರ್ಧೆಗಳನ್ನು ರಾಣಿಯರು ವೀಕ್ಷಿಸುತ್ತಿದ್ದ ಸ್ಥಳವಾಗಿತ್ತು ಎಂದು ಜನ ನಂಬಿದ್ದಾರೆ. ರಾಣಿಯರು ಅರಮನೆಯಿಂದ ಗಗನ ಮಹಲ್‌ಗೆ ಬರಲು ಕೆಳಗಡೆ ಇರುವ ಗುಪ್ತಮಾರ್ಗ ಮುಖಾಂತರ ಬರುತ್ತಿದ್ದರು. ಜನರಿಗೆ ಮುಖ ಕಾಣಬಾರದೆಂಬ ಕಾರಣದಿಂದ ಘೋಷಾ ಉಡುಪುಗಳನ್ನು ಧರಿಸುತ್ತಿದ್ದರೆಂದು ಇಲ್ಲಿಯ ಜನಪದರು ಹೇಳುತ್ತಾರೆ. ಇಲ್ಲಿ ಕೋಳಿ ಕಾಳಗ, ಟಗರು ಕಾಳಗ, ಗೂಳೀ ಕಳಗ, ಪಂಜರದ ಹುಲಿಯನ್ನು ಭರ್ಚಿಯಿಂದ ಬೇಟೆಯಾಡುವ ಮುಖಾಂತರ ಮನರಂಜನೆ ಒದಗಿಸುವುದು, ಮಲ್ಲಯುದ್ಧ, ದೃಷ್ಟಿಯುದ್ಧ ಮತ್ತು ದೊಂಬರಾಟದ ಸಾಹಸಗಳು ನಡೆಯುತ್ತಿದ್ದವೆಂದೂ, ಅದನ್ನು ಆನೆಗೊಂದಿ ಸಂಸ್ಥಾನದ ರಾಣಿಯರು ಹಾಗೂ ಪಟ್ಟಣದ ಹೆಂಗಸರೂ ಸಹ ಆಸಕ್ತಿಯಿಂದ ನೋಡುತ್ತಿದ್ದರೆಂದು ಹೇಳಲಾಗುತ್ತದೆ. ಅಂದು ನಡೆಯುತ್ತಿದ್ದ ಪಂದ್ಯಗಳಲ್ಲಿ ವಿಜಯಗಳಿಸಿದವರನ್ನು ಮದುವೆ ಮಾಡಿಕೊಳ್ಳುವಂತಹ ಅವಕಾಶಗಳನ್ನು ರಾಜರು ಒದಗಿಸಿಕೊಡುತ್ತಿದ್ದರು ಎಂದು ಹೇಳಲಾಗುತ್ತದೆ. ಹೀಗೆ ಗಗನ ಮಹಲಿನ ಸುತ್ತದ ಅನೇಕ ಕತೆಗಳು ಹಬ್ಬಿಕೊಂಡಿವೆ.

### ಚಿಂಚಲಕೋಟೆ

ನವವೃಂದಾವನದ ಸಮೀಪದ ನದಿ ತೀರದ ಮೇಲೆ ಒಂದು ಕೋಟೆಯ ತೆರನಾದ ಕಟ್ಟಡವಿದ್ದು ಅದಕ್ಕೆ ಚಿಂಚಲಕೋಟೆ ಎಂದು ಕರೆಯುತ್ತಾರೆ. ಇದಕ್ಕೆ ಈ ಹೆಸರು ಬಂದ ಬಗೆಗೆ ಒಂದು ಐತಿಹ್ಯವಿದೆ. ವಾಲಿಗೆ ಹೆದರಿದ ಸುಗ್ರೀವ ಹನುಮಂತಾದಿಗಳು ಈ ಸ್ಥಳದಲ್ಲಿ ಆತಂಕದಿಂದ ಕಾಲ ಕಳೆಯುತ್ತಿರಲು ಆ ಸಮಯದಲ್ಲಿಯೇ ರಾಮ ಲಕ್ಷ್ಮಣರು ಸೀತೆಯನ್ನು ಅರಸುತ್ತಾ ಬರುತ್ತಿದ್ದರು. ಇವರನ್ನು ಕಂಡ ಸುಗ್ರೀವಾದಿಗಳಿಗೆ ಇವರು ವಾಲಿಯ ಕಡೆಯವರೆಂಬ ಅನುಮಾನದಿಂದ ಮನಸ್ಸು ಚಂಚಲವಾಯ್ತು. ಅದಕ್ಕೆ ಈ ಕೋಟೆಗೆ ಚಿಂಚಲಕೋಟೆ ಅಥವಾ ಚಿಂತಲಕೋಟೆ ಎಂದು ಹೆಸರಾಯಿತೆಂದು ಜನರು ಹೇಳುತ್ತಾರೆ. ಈಗಲೂ ಈ ಕೋಟೆಯ ಹತ್ತಿರ ಯಾರಾದರು ಹೋದರೆ ಅವರಿಗೆ ಏನೋ ಚಿಂತೆ, ಆತಂಕ ಸುರುವಾಗುವುದಂತೆ, ಅಣ್ಣ ತಮ್ಮಂದಿರು ಇಲ್ಲಿರುವತನಕ ವೈರಿಗಳಂತೆ ವರ್ತಿಸುವರೆಂದು ಇಲ್ಲಿಯ ಸ್ಥಳೀಯರು ನಂಬುವುದುಂಟು.

### ನವ ವೃಂದಾವನ

ಆನೆಗೊಂದಿಯಿಂದ ಒಂದು ಕಿ.ಮೀ. ದೂರದಲ್ಲಿ ಇರುವ ತುಂಗಭದ್ರಾ ನದಿಯ ನಡುಗಡ್ಡೆ ಪ್ರದೇಶವೇ ನವ ವೃಂದಾವನ. ಇದಕ್ಕೆ ಕಲ್ಪಾದ್ರಿ, ಕಾಲಾದ್ರಿ ಪರ್ವತವೆಂದೂ ಹೆಸರು. ತುಂಗಭದ್ರಾ ನದಿಯ ಸೆರಗಿನಲ್ಲಿರುವ ಈ ಸುಂದರ ಸ್ಥಳದಲ್ಲಿ ಒಂಬತ್ತು ಯತಿವರ್ಯರು ವೃಂದಾವನಸ್ಥರಾಗಿರುವುದರಿಂದ ಇದು ನವ ವೃಂದಾವನವೆಂದು ಕರೆಯಲ್ಪಟ್ಟಿದೆ. ಈ ಯತಿಗಳಲ್ಲಿ ಪ್ರಥಮರು ಮಧ್ವಾಚಾರ್ಯರ ಶಿಷ್ಯರಾಗಿದ್ದ ಪದ್ಮನಾಭತೀರ್ಥರು, ನಂತರ ಕ್ರಮವಾಗಿ ಕವೀಂದ್ರತೀರ್ಥರು, ವಾಗೀಶ ತೀರ್ಥರು, ಗೋವಿಂದ ಒಡೆಯರು, ವ್ಯಾಸರಾಯರು, ರಘುವರ್ಯರು, ಶ್ರೀನಿವಾಸ ತೀರ್ಥರು, ಶ್ರೀರಾಮ ತೀರ್ಥರು, ಸುದೀಂದ್ರ ತೀರ್ಥರು.

ಇವರಲ್ಲಿ ನಾಲ್ವರು ವ್ಯಾಸರಾಜ ಮಠಕ್ಕೂ ನಾಲ್ವರು ಉತ್ತರಾಧಿ ಮಠಕ್ಕೂ ಮತ್ತು ಒಬ್ಬರು ರಾಯರ ಮಠಕ್ಕೆ ಸಂಬಂಧಿಸಿದ್ದು, ಗೋವಿಂದ ಒಡೆಯರೊಬ್ಬರನ್ನು ಬಿಟ್ಟು ಉಳಿದೆಲ್ಲರೂ ಮಠಾಧಿಪತಿಗಳಾಗಿದ್ದರೆಂದು ಜನ ಹೇಳುತ್ತಾರೆ. ರಾಮನು ಇಲ್ಲಿಯೇ ಯಜ್ಞ ಮಾಡಿದನೆಂತಲೂ ಕಾಲ ಕೂಟಾದ್ರಿ ವಿಷ ಕುಡಿದ ಶಿವ ಇಲ್ಲಿಗೆ ಬಂದು ಉರಿ ಶಮನ ಮಾಡಿಕೊಂಡು ನೀಲಕಂಠನಾದನೆಂದೂ, ಇಲ್ಲಿ ಸಪ್ತ ಋಷಿಗಳು ಆರು ದಿನಗಳವರೆಗೆ ತಲೆಕೆಳಗೆ ಮಾಡಿಕೊಂಡು ಧ್ಯಾನ ಮಾಡಿದವರ ಸ್ಥಳವೆಂದೂ ಬಗೆ ಬಗೆಯ ಐತಿಹ್ಯಗಳು ಈ ಸ್ಥಳದ ಬಗ್ಗೆ ಸಿಗುತ್ತವೆ.

### ಕೋತಿ ಮಾನೇವು ಇತರೆ ಇನಾಮು ಭೂಮಿಗಳು

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಕಂಡುಬರುವ ಅಕ್ಕತಂಗಿಯರ ಗುಂಡುಗಳ ಎಡಭಾಗದಲ್ಲಿರುವ ಕೃಷಿಭೂಮಿಯನ್ನು ಕೋತಿ ಮಾನೇವು ಅಥವಾ ಕೋತೀ ಇನಾಮ್ ಎಂದು ಕರೆಯುತ್ತಾರೆ. ಸು.೨೦ ಎಕರೆ ಭೂಪ್ರದೇಶವಿರುವ ಈ ಜಾಗವನ್ನು ಕೋತಿಗಳ ಊಟಕ್ಕೆಂದೇ ಮೀಸಲಾಗಿತ್ತಂತೆ. ಈ ವಾನರು ನಮಗಿಂತ ಮೊದಲು ಇಲ್ಲಿ ಸಾಮ್ರಾಜ್ಯ ಸ್ಥಾಪಿಸಿದ್ದರಿಂದ ನ್ಯಾಯವಾಗಿ ಅವರಿಗೆ ಸಲ್ಲಬೇಕಾದ್ದು ಇದು ಎಂದು ಹಿಂದಿನ ದೊರೆಗಳು ಆಲೋಚಿಸಿ ಹೀಗೆ ಮಾಡಿದರು ಎಂದು ಜನರು ಹೇಳುತ್ತಾರೆ. ಈಗ ಈ ಪ್ರದೇಶವನ್ನು ನೋಡಿಕೊಳ್ಳುವ ಜನರು ಮಧ್ಯಾಹ್ನ ಒಂದು ಗಂಟೆಗೆ ವಿರೂಪಾಕ್ಷ ದೇವಾಲಯದಲ್ಲಿರುವ ಕೋತಿಗಳಿಗೆ ಊಟ ಹಾಕುತ್ತಾರೆ.

ಆನೆಗೊಂದಿ ಸಂಸ್ಥಾನದ ಅರಸರು ಅರಮನೆಯ ಬಹುತೇಕ ಕೆಲಸಗಾರರಿಗೆ ಭೂಮಿಯನ್ನು ದಾನವಾಗಿ ಅಥವಾ ಸಂಭಾವನೆ ರೂಪದಲ್ಲಿ ಇನಾಮು ಕೊಟ್ಟಿದ್ದಾರೆ. ರಾಣಿಯರಿಗೆ ಎಲೆ ಅಡಿಕೆ ಕೊಡುವ ಕೆಲಸ ಮಾಡುವವರಿಗೆ ಎಲೆ ಅಡಿಕೆ ಮಾನೇವು ಎಂದು, ತಳವಾರಿಕಿ ಕೆಲಸ ಮಾಡಿದವರಿಗೆ ತಳವಾರಿಕೆ ಮಾನೇವು, ಅರಮನೆಯಲ್ಲಿ ಅಡಿಗೆ ಮಾಡುವವರಿಗೆ ತಪಾಲಿ ಮಾನೇವು ಎಂದು ಅರಮನೆಗೆ, ಮಂದಿರಗಳಿಗೆ ಹೂವಿನ ಸರಬರಾಜು ಮಾಡುವವರಿಗೆ ಜೀರಪಟ್ಟಿ, ಅರಮನೆಯ ವಾದ್ಯ ವೃಂದದವರಿಗೆ ಸನಾದಿ ಪಟ್ಟಿ, ನೃತ್ಯ ಮಾಡುವವರಿಗೆ ಪಾತ್ರದವರ ಗದ್ದಿ, ದುರ್ಗಾ ಗುಡಿಯ ಖರ್ಚು ವೆಚ್ಚದ ನಿರ್ವಹಣೆಗಾಗಿ ದುಗ್ಗಾ ಮಾನೇವು ಎಂದು ಸಂಭಾವನೆ ರೂಪದಲ್ಲಿ, ಆನೆಗೊಂದಿಯ ಕೆಲವು ಭೂಮಿಗಳನ್ನು ಕೊಡುತ್ತಿದ್ದರಂತೆ. ಈ ಉದ್ದೇಶಗಳಿಗಾಗಿ ಕೊಟ್ಟ ನಿದರ್ಶನವಾಗಿ ಆನೆಗೊಂದಿಯಲ್ಲಿ ಈಗಲೂ ಈ ಭೂಮಿಗಳಿಗೆ ಇದೇ ಹೆಸರಿನಿಂದ ಕರೆಯುತ್ತಾರೆ.

### ತಳವಾರ ಘಟ್ಟ

ಆನೆಗೊಂದಿಯ ದಕ್ಷಿಣ ಬಾಗದ ಅಂಬಿಗರ ಹೊಳೆ ಎಂದು ಕರೆಯಲಾಗುವ ತುಂಗಭದ್ರಾ ನದಿಯ ಆಚೆಯ ದಡವೇ ತಳವಾರ ಘಟ್ಟ. ಇದು ಹಿಂದೆ ವಿಠಲಪುರದ ಕೊನೆಯ ಭಾಗವಾಗಿತ್ತು. ಆನೆಗೊಂದಿ ಭಾಗದಿಂದ ಹಂಪಿ ಪ್ರವೇಶ ಮಾಡುವ ಪ್ರತಿಯೊಬ್ಬರೂ ಈ ನದಿ ತೀರದಿಂದಲೇ ಬರಬೇಕಾಗಿತ್ತು. ಇಂತಹ ಪ್ರದೇಶದಲ್ಲಿ ರಾಜರಿಗೆ ವಿಷಯ ಮುಟ್ಟಿಸುವ, ಮಾಹಿತಿ ನೀಡುವ ಹಾಗೂ ಗಡಿ ರಕ್ಷಣೆಯ ತಳವಾರ

ಗ್ರಾಮವೊಂದಿತ್ತು ಆದ್ದರಿಂದಲೇ ಈ ಸ್ಥಳಕ್ಕೆ ತಳವಾರ ಘಟ್ಟ ಎಂದು ಹೆಸರು ಬಂತೆಂದು ಜನ ಹೇಳುತ್ತಾರೆ. ಈಗ ಇಲ್ಲಿ ಯಾವುದೇ ಊರು ಇಲ್ಲ. ಹಂಪೆಗೆ ಹೋಗುವ ಎಡಭಾಗದಲ್ಲೊಂದು ಬಯಲಿಗೆ ಮಂದಿರ ಪಕ್ಕದಲ್ಲಿದೆ ನಿಂತ ಆಂಜನೇಯನ ಮೂರ್ತಿ ಇದೆ. ತಳವಾರ ಘಟ್ಟಕ್ಕೆ ಬರಲು ಹಿಂದೆ ಹರಿಗೋಲುಗಳ ಮೂಲಕ ಬರುತ್ತಿದ್ದರಂತೆ. ಈಗಲೂ ಹರಿಗೋಲನ್ನು ಉಪಯೋಗಿಸಿ ಹೊಳೆ ದಾಟುತ್ತಾರೆ.

**ಮೂಕಾರ್ತಿ ಬಂಡೆ**

ಆನೆಗೊಂದಿಯ ಉತ್ತರ ಭಾಗಕ್ಕೆ ಕಡೆಬಾಗಿಲಿನಿಂದ ರಾಂಪುರ ಮಲ್ಲಾಪುರಕ್ಕೆ ಹೋಗುವ ಒಳದಾರಿ ಅಥವಾ ಬಂಡಿದಾರಿಯಲ್ಲಿ ಹಾಯ್ದು ಹೋಗುವಾಗ ಎಲ್ಲಮ್ಮನ ಗುಡ್ಡದ ಸಮೀಪ ಬರುವುದೇ ಮೂಕಾರ್ತಿ ಬಂಡೆ. ಸುಮಾರು ಐದಾರು ಅಡಿ ಎತ್ತರದ ಈ ಬಂಡೆ ಮಾನವಾಕೃತಿಯಲ್ಲಿ ಇದೆ. ಇದರ ಬಗ್ಗೆ ವಿಭಿನ್ನವಾದ ಐತಿಹ್ಯಗಳಿವೆ. ಒಂದು ಐತಿಹ್ಯದ ಪ್ರಕಾರ ಬೆಟ್ಟಗಳ ಸಮೂಹವಿರುವ ಈ ಸ್ಥಳದಲ್ಲಿ ಒಬ್ಬ ಋಷಿ ತಪಸ್ಸು ಮಾಡುತ್ತಿದ್ದ. ಹೊಲ ಗದ್ದೆ, ಬಾಳೆಯ ತೋಟಗಳಿಗೆ ಕೆಲಸ ಮಾಡಲು ಹೋಗುವ ಕೃಷಿಕರು, ಕೂಲಿಕಾರರು ಋಷಿಯು ತಪಸ್ಸು ಮಾಡುವ ಸ್ಥಳದ ಮುಖಾಂತರವೇ ಹೋಗಬೇಕಾಗುತ್ತಿತ್ತು. ಈ ರೀತಿ ಹೋಗುವ, ಬರುವ ಜನರು ತಪಸ್ಸಿಗೆ ಕುಳಿತ ಋಷಿಯನ್ನು ಮಾತನಾಡಿಸಲು ಪ್ರಯತ್ನಿಸುತ್ತಿದ್ದರು. ಋಷಿಯು ಕಿವುಡ ಮತ್ತು ಮೂಕನಾಗಿರುವುದರಿಂದ ಯಾರ ಮಾತು ಆತನಿಗೆ ಕೇಳಿಸುತ್ತಿರಲಿಲ್ಲ. ಆ ಕಾರಣಕ್ಕಾಗಿ ಋಷಿಯನ್ನು ಎಚ್ಚರಿಸಲು ಕಲ್ಲನ್ನು ಒಗೆಯಲಾರಂಭಿಸಿದರು. ನಂತರ ಋಷಿ ಕಲ್ಲುಬಂಡೆಯಾದ ಎಂದು ಸ್ಥಳೀಯರು ಹೇಳುತ್ತಾರೆ. ದಾರಿ ಹೋಕರು ಈ ಬಂಡೆಗೆ ಈಗಲೂ ಕಲ್ಲು ಒಗೆಯುತ್ತಾರೆ. ಹೊಟ್ಟೆ ನೋವಿರುವವರೂ, ಜ್ವರ ಬಂದವರು ಇನ್ನಿತರ ಆರೋಗ್ಯ ಸಮಸ್ಯೆ ಇರುವವರೂ ಈ ಬಂಡೆಗೆ ಈಗಲೂ ಕಲ್ಲು ಎಸೆದು ಹಿಂತಿರುಗಿ ನೋಡದೆ ಹೋಗುತ್ತಾರೆ. ಹೀಗೆ ಮಾಡಿದರೆ ಆರೋಗ್ಯ ಸಮಸ್ಯೆಗಳು ಪರಿಹಾರವಾಗುತ್ತವೆ ಎಂಬುದು ಇಲ್ಲಿನ ಜನರ ಅಭಿಪ್ರಾಯವಾಗಿದೆ.

**ಇನ್ನೊಂದು ಐತಿಹ್ಯದ ಪ್ರಕಾರ**

ಮೂಕಾರ್ತಿ ಬಂಡೆಯ ಮುಖಾಂತರ ಹಾದು ಹೋಗುವ ಜನರಿಗೆ ಒಬ್ಬ ಮಹಿಳೆಯು ನಾಯಿಯನ್ನು ಕೊಯ್ದು ತಿನ್ನಿಸುತ್ತಿದ್ದಳಂತೆ. ಇವಳ ಈ ಕೆಟ್ಟ ಕೆಲಸದಿಂದ ಬೇಸತ್ತ ಜನ ಇವಳ ಮೂಗನ್ನು ಕೊಯ್ದರು ನಂತರ ಆ ಹೆಣ್ಣು ಕಲ್ಲು ಬಂಡೆಯಾದಳು. ಈ ಕಾರಣದಿಂದ ಈ ಬಂಡೆಗೆ ಮೂಕಾರ್ತಿ ಬಂಡೆ ಎಂದು ಹೆಸರು ಬಂತೆಂದು ಹೇಳುತ್ತಾರೆ. ಈಗಲೂ ಕೆಟ್ಟ ಹೆಂಗಸಿನ ಪ್ರತೀಕವಾದ ಮೂಕಾರ್ತಿ ಬಂಡೆಗೆ ಹೋಗುವ ಬರುವ ಜನ ಕಲ್ಲು ಒಗದೇ ಹಿಂದಿರುಗಿ ನೋಡದೆ ಹೋಗುತ್ತಾರೆ. ಇದರಿಂದ ಮಕ್ಕಳಿಗಿರುವ ರೋಗರುಜಿನಗಳು ಕಡಿಮೆಯಾಗುತ್ತವೆಂಬ ನಂಬಿಕೆ ಹಾಗೂ ಅಂದಿನ ಜನ ದುರ್ಗುಣಗಳನ್ನು ಸಹಿಸಿಕೊಳ್ಳುತ್ತಿರಲಿಲ್ಲ ಎಂಬುದಕ್ಕೆ ಈ ಐತಿಹ್ಯ ನಿದರ್ಶನವಾಗಿದೆ.

**ಕಲ್ಲುರಾಶಿಗಳು**

ಆನೆಗೊಂದಿಯಲ್ಲಿ ಹೇರಳವಾಗಿ ಕಲ್ಲುಗಳಿವೆ. ಇಲ್ಲಿ ಇಷ್ಟರ ಮಟ್ಟಿಗೆ ಇರಲು ಕಾರಣವೆಂದರೆ, ಶ್ರೀರಾಮಚಂದ್ರನು ಕಪಿಸೇನೆಯನ್ನು ಕರೆದುಕೊಂಡು ಸೇತುವೆ ಕಟ್ಟುವಾಗ ಕಪಿಗಳಲ್ಲಿ ಬಂಡೆಗಳನ್ನು ತರಲು

ಹೇಳಿದ ಅದರಂತೆ ಕಪಿಗಳು ಕಲ್ಲು ಬಂಡೆಗಳನ್ನು ಹೊತ್ತು ತಂದವು. ಸೇತುವೆಯ ನಿರ್ಮಾಣ ಕೊನೆಗೊಂಡಾಗ ಶ್ರೀರಾಮನು ಕಪಿ ಸೇನೆಯನ್ನು ಉದ್ದೇಶಿಸಿ ಸೇತುವೆ ಮುಗಿತಪ್ಪ ಕಲ್ಲು ಸಾಕು ಎಂದ. ಆಗ ಕಲ್ಲು ಬಂಡೆಗಳನ್ನು ಹೊತ್ತು ತರುತ್ತಿದ್ದ ಕಪಿಸೇನೆ ಅವನ್ನು ಅಲ್ಲಲ್ಲೆ ಎಸೆದವಂತೆ. ಅಂದಿನಿಂದ ಆನೆಗೊಂದಿ, ಹಂಪಿಯಲ್ಲಿ ಕಲ್ಲು ಬಂಡೆಗಳು ಗುಡ್ಡವಾಗಿ ರಾಶಿರಾಶಿಯಾಗಿ ಬಿದ್ದಿವೆ ಎಂದು ಹೇಳಲಾಗುತ್ತಿದೆ. ಈ ಭಾಗದಲ್ಲಿ ಕಣಶಿಲೆ ಎನ್ನಲಾಗುವ ಬೃಹತ್ ಬಂಡೆಗಳ ರಾಶಿಗಳಿಂದ ಕೂಡಿ ಬೆಟ್ಟಗಳ ಸಮೂಹ ಸಾಲು ಸಾಲಾಗಿರುವುದು ಆನೆಗೊಂದಿ ಪರಿಸರದಲ್ಲೊಂದು ವಿಶೇಷ.

**ಕಲ್ಲಿನ ಸೇತುವೆ**

ಆನೆಗೊಂದಿ ಪರಿಸರದ ಪಶ್ಚಿಮ ದಿಕ್ಕಿನಲ್ಲಿರುವ ಹನುಮನಹಳ್ಳಿಯ ಅಂಜನಾದ್ರಿ ಬೆಟ್ಟಕ್ಕೆ ಸಮೀಪ ಸಮೀಪದ ತುಂಗಾ ನದಿ ದಡದಿಂದ ಹಂಪೆಯ ಪುರಂದರ ಮಂಟಪದವರೆಗೆ ತುಂಗಭದ್ರಾ ನದಿಯ ನೀರಿನಲ್ಲಿ ಸಾಲು ಕಂಬ ನಿಂತಿರುವುದನ್ನು ಕಾಣುತ್ತೇವೆ. ಈ ಕಂಬಗಳ ಮೇಲೆ ಗ್ರಾನೈಟ್ ಕಲ್ಲುಗಳನ್ನು ಹಾಕಲಾಗಿದೆ. ಇದಕ್ಕೆ ಕಲ್ಲಿನ ಸೇತುವೆ ಎಂದು ಹೆಸರು. ಇದರ ವಿಸ್ತೀರ್ಣ ಒಂದು ಕಿ.ಮೀ.ದಷ್ಟಿದೆ. ಈ ಸೇತುವೆಯನ್ನು ಕಟ್ಟಲು ಕಾರಣ ವಿಜಯನಗರಕ್ಕೆ ಬೇರೆ ರಾಜ್ಯಗಳ, ದೇಶಗಳ ವ್ಯಾಪಾರಸ್ಥರು ಬರಲು ತುಂಗಭದ್ರೆಯನ್ನು ದಾಟಬೇಕಿತ್ತು. ಅದಕ್ಕಾಗಿ ಈ ಸೇತುವೆಯನ್ನು ಕಟ್ಟಲಾಗಿದೆ ಎನ್ನಲಾಗುತ್ತದೆ. ಸ್ಥಳೀಯರ ನಂಬಿಕೆಯ ಪ್ರಕಾರ ತುಂಗಭದ್ರೆಯ ಎಡದಂಡೆಯ ಭಾಗಕ್ಕೆ ಕಿಷ್ಕಿಂದೆ ಎಂದು ಕರೆಯುತ್ತಾರೆ. ಇಲ್ಲಿ ಕಪಿಗಳು ವಾಸಿಸುತ್ತಿದ್ದವೆಂದು ಸ್ಥಳೀಯರ ನಂಬಿಕೆ ಮತ್ತು ರಾಮಾಯಣ ಕಾಲದ ಪುಣ್ಯ ಸ್ಥಳವೆಂದು ಈ ಭಾಗಕ್ಕೆ ಕರೆಯುತ್ತಾರೆ. ಉದಾ ಈ ಭಾಗದಲ್ಲಿ ಅಂಜನಾದ್ರಿ ಪರ್ವತವಿದ್ದು ಇದು ಅತಿ ಎತ್ತರದಲ್ಲಿದೆ. ಇದಕ್ಕೆ ಹೆಸರು ಬರಲು ಕಪಿಗಳ ಗುರುವಾದ ಹನುಮಂತ (ಮಾರುತಿ) ಇಲ್ಲಿ ಜನಿಸಿದನೆಂದು ಕಾರಣ ಕೊಡುತ್ತಾರೆ. ಕಿಷ್ಕಿಂದದ ಪ್ರದೇಶವನ್ನು ಗುರುತಿಸಲ್ಪಟ್ಟ ಕೃಷ್ಣದೇವರಾಯನು ಸೇತುವೆ ದಾಟಿ ತನ್ನ ಪಟ್ಟದರಸಿಯೊಂದಿಗೆ ಅಲ್ಲಿಗೆ ಹೋಗಿ ಅಂಜನಾದ್ರಿ ಪರ್ವತಕ್ಕೆ ಪೂಜೆ ಮಾಡಿಸಿಕೊಂಡು ಬರುತ್ತಿದ್ದನೆಂದು ಆ ಪೂಜೆಯ ಹೆಸರು ತ್ರಿಕಾಲ ಪೂಜೆ ಎಂದು ಸ್ಥಳೀಯರು ಹೇಳುತ್ತಾರೆ. ಈ ಪೂಜೆಯನ್ನು ಬ್ರಾಹ್ಮಣರಿಂದ ಮಾತ್ರ ಮಾಡಿಸಲಾಗುತ್ತಿತ್ತು ಎಂದು ತಿಳಿದುಬರುತ್ತದೆ. ಶ್ರೀಕೃಷ್ಣದೇವರಾಯನು ಅಲ್ಲಿಗೆ ಹೋಗಬೇಕಾದ್ದರಿಂದ ಕಲ್ಲಿನ ಸೇತುವೆಯನ್ನು ನಿರ್ಮಿಸಲಾಯಿತೆಂದು ಜನರ ನಂಬಿಕೆಯಾಗಿದೆ. ಈ ಸೇತುವೆಯು ಅತ್ಯಂತ ಗಟ್ಟಿಯಾಗಿತ್ತೆಂಬುದಕ್ಕೆ ಆನೆ, ಕುದುರೆಗಳ ಮೇಲೆ ರಾಜನು ಸವಾರಿ ಮಾಡುತ್ತಿದ್ದನೆಂಬುದನ್ನೇ ಸಾಕ್ಷೀಕರಿಸಬಹುದಾಗಿದೆ. ಒಟ್ಟಾರೆ ೧೫ನೇ ಶತಮಾನದಲ್ಲಿ ಜನಸಾಮಾನ್ಯರಿಂದ ಈ ಸೇತುವೆಯು ನಿರ್ಮಿಸಲ್ಪಟ್ಟವೆಂದು ಹೇಳಬಹುದು.

**ಐತಿಹ್ಯಗಳಲ್ಲಿ ಕುಮಾರರಾಮ**

ಕುಮಾರರಾಮನ ಬಗ್ಗೆ ಆನೆಗೊಂದಿ, ಮಲ್ಲಾಪುರ, ಜಬ್ಬಲಗುಡ್ಡಗಳಲ್ಲಿ ಮಾತ್ರ ಐತಿಹ್ಯಗಳಿರದೆ ಸೊಂಡೂರು, ಬಳ್ಳಾರಿ ಪರಿಸರದಲ್ಲಿಯೂ ಸಹ ಐತಿಹ್ಯಗಳು ಪ್ರಚಲಿತದಲ್ಲಿವೆ. ಅವುಗಳಲ್ಲಿ ಕೆಲವು ಈ ರೀತಿಯಾಗಿವೆ. ಒಂದು ಐತಿಹ್ಯದ ಪ್ರಕಾರ ಕಂಪಿಲರಾಯನ ಹೊಸಮಲೆ ದುರ್ಗದ ಅರಸ. ಹರಿಯಾಲಾದೇವಿ

ಅವನ ಹೆಂಡತಿ. ಹರಿಯಾಲಾದೇವಿಯ ತಮ್ಮ ವರಪ್ರಸಾದದಿಂದ ಹರಿಯಾಲಾದೇವಿ ಗರ್ಭಧರಿಸಿ ಚನ್ನಿಗರಾಮನ್ನು ಹೆರುತ್ತಾಳೆ. ಮುದಿ ವಯಸ್ಸಿನಲ್ಲಿ ಕಂಪಿಲನು ಡೊಂಬರ ಹುಡುಗಿ ರತ್ನಾದೇವಿಯನ್ನು ಮದುವೆಯಾಗುತ್ತಾನೆ. ಚನ್ನಿಗರಾಮನನ್ನು ಬಯಸಿದ ರತ್ನಾದೇವಿಯು ಆತ ಒಪ್ಪದೇ ಇದ್ದಾಗ ಚನ್ನಗರಾಮನ ತಲೆಯನ್ನು ಕತ್ತರಿಸಿ ಅಗಸೆ ಬಾಗಿಲಿಗೆ ಕಟ್ಟುತ್ತಾಳೆ.

ಇನ್ನೊಂದು ಐತಿಹ್ಯದ ಪ್ರಕಾರ ಕಂಪಿಲರಾಯನು ಕಂಪಟಾಲು ನಗರದ ದೊರೆ. ಆತ ಬ್ರಾಹ್ಮಣರ ಹುಡುಗಿಯಾದ ಹಿರಿಯಾಲಾದೇವಿಯನ್ನು ಮದುವೆಯಾಗುತ್ತಾನೆ. ಈ ಎರಡು ವಿಷಯ ಬಿಟ್ಟರೆ ಉಳಿದ ಕತೆ ಮೊದಲನೇ ಐತಿಹ್ಯದಂತೆಯೇ ಇದೆ. ಮೂರನೇ ಐತಿಹ್ಯದ ಪ್ರಕಾರ ರತ್ನಾಜಿಯು ಡಿಲ್ಲಿಯ ನವಾಬನ ಮಗಳಾಗಿದ್ದು, ಆಕೆ ಕುಮಾರರಾಮನ ಶೌರ್ಯ ಸಾಹಸ ಕೇಳಿ ಮದುವೆಯಾಗಬಯಸುತ್ತಾಳೆ. ಆದರೆ ಕಂಪಿಲರಾಯನು ಸ್ವತಃ ಆಕೆಯನ್ನೇ ಮದುವೆಯಾಗಿಬಿಡುತ್ತಾನೆ. ಮುಂದಿನ ವಿವರಣೆ ಎಲ್ಲಾ ನಿರೂಪಣೆಗಳಂತೆಯೇ ಇದೆ. ನಾಲ್ಕನೇ ಐತಿಹ್ಯದ ಪ್ರಕಾರ ಆನೆಗೊಂದಿಯ ಡೊಂಬತಿಯನ್ನು ಕುಮಾರರಾಮ ಮದುವೆಯಾಗುತ್ತಾನೆ.



ಮೇಲೆ ವಿವರಿಸಲಾದ ಕಥನ ಕಾವ್ಯಗಳು, ಐತಿಹ್ಯಗಳಲ್ಲಿ ಕಂಡುಬರುವ ಸಮಾನ ಮತ್ತು ಪ್ರಧಾನ ಅಂಶಗಳನ್ನು ಈ ಕೆಳಗಿನಂತೆ ಸೂಚಿಸಬಹುದು.

ಮೊದಲನೆಯದಾಗಿ, ಕಂಪಿಲರಾಯ ಮತ್ತು ಕುಮಾರರಾಮ ಇವರಿಬ್ಬರೂ ಅತ್ಯಂತ ಜನಪ್ರಿಯ ದೊರೆಗಳಾಗಿದ್ದರು. ಇತಿಹಾಸಕಾರರು ಕಂಪಿಲನ ಹೆಸರನ್ನು ಉಲ್ಲೇಖಿಸಿದರೂ, ಕುಮಾರರಾಮನ ಹೆಸರನ್ನು ಹೆಚ್ಚಾಗಿ ಉಲ್ಲೇಖಿಸುವುದಿಲ್ಲ. ಆದರೆ ಮೌಖಿಕ ನಿರೂಪಣೆಗಳಲ್ಲಿ ಈ ಇಬ್ಬರ ಬಗೆಗೆ ಗರಿಷ್ಠ ಮಟ್ಟದ ವಿವರಗಳು ದೊರೆಯುತ್ತವೆ. ಜನಪದರ ವಾರ್ಷಿಕ ಆಚರಣೆಗಳಲ್ಲಿಯೂ ಇವರಿಗೆ ಸ್ಥಾನ ಲಭಿಸಿವೆ. ಇವರಿಬ್ಬರ ಹೆಸರನ್ನು ಬಿಟ್ಟರೆ ಆನೆಗೊಂದಿ ಅಥವಾ ಹಂಪಿಯ ಅರಸರು ಜನಪದ ಸಾಹಿತ್ಯದಲ್ಲಿ ಸ್ಥಾನ ಪಡೆದಿಲ್ಲ. ಇದಕ್ಕೆ ಕಾರಣಗಳನ್ನು ತರ್ಕಿಸುವುದು ಕಷ್ಟ. ಆನೆಗೊಂದಿ ಕುಮ್ಮಟದುರ್ಗ ಅಥವಾ ಕಂಪ್ಲಿಯ ಆರಂಭಿಕ ಅರಸರಾಗಿ ಕೆಲಸ ನಿರ್ವಹಿಸಿದ ಇವರಿಬ್ಬರೂ ಜನರ ಮಧ್ಯದಿಂದಲೇ ದೊರೆಗಳಾಗಿ ಅವಿರ್ಭವಿಸಿದ್ದು ಇದಕ್ಕೆ ಬಲವಾದ ಕಾರಣವಿರಬಹುದು. ಶೂಲದ ಹಬ್ಬದಂತಹ ಜಾನಪದ ಆಚರಣೆಯಲ್ಲಿ ಕುಮಾರರಾಮನ ಭಾಗವಹಿಸಿ, ಬೆರೆಯುತ್ತಿದ್ದುದನ್ನು ಕಥನ ಕಾವ್ಯಗಳು ಉತ್ಸಾಹದಿಂದ ಬಣ್ಣಿಸಿವೆ. ಕಂಪಿಲನ ಆಳ್ವಿಕೆಯಿಂದ ಸಂತೃಪ್ತರಾದ ಜನರು ಅವನ ಹೆಸರನ್ನೇ ತಮ್ಮೊಂದಿಗೆ ಗುರುತಿಸಿಕೊಂಡು ಸಂಭ್ರಮಿಸಿದ್ದಾರೆ. ಕುಮಾರರಾಮನ ಶೌರ್ಯ ಸಾಹಸಗಳಿಂದ ದಂಗಾದ ಜನರು ಆತನ ಹುಟ್ಟಿಗೆ ದೈವಿಕ ಕಾರಣಗಳನ್ನು ಆರೋಪಿಸಿದ್ದಾರೆ. ಆನೆಗೊಂದಿ ಪತನಾನಂತರ ಹುಟ್ಟಿಕೊಂಡ ವಿಜಯನಗರ ಸಂಸ್ಥಾನದ ಯಾವ ಅರಸರನ್ನು ಜನಪದರು ಇಷ್ಟು ಗಂಭೀರವಾಗಿ ಪರಿಗಣಿಸಿಲ್ಲ.

ಎರಡನೆಯದಾಗಿ, ಕಂಪಿಲನ ಹೆಂಡತಿಯ ಹೆಸರು ಹರಿಯಾಲಮ್ಮ ಎಂದೇ ಇದ್ದಿರಬೇಕು. ಲಭ್ಯ ಇರುವ ಎಲ್ಲ ಪಾಠಗಳಲ್ಲಿಯೂ ಈ ಹೆಸರು ಪುನರಾವರ್ತನೆಯಾಗಿದೆ. ಒಂದು ಪಾಠದಲ್ಲಿ ಮಾತ್ರ ಈ ಕತೆಯನ್ನು

ಬ್ರಾಹ್ಮಣ ಜಾತಿಯ ಹೆಂಗಸು ಎಂದು ಕರೆಯಲಾಗಿದೆ. ಉಳಿದಂತೆ ಎಲ್ಲ ಪಾಠಗಳಲ್ಲಿಯೂ ಆಕೆಯನ್ನು ಬೇಡ ಜಾತಿಗೆ ಸೇರಿದ ಹೆಂಗಸು ಎಂದೇ ಹೇಳಲಾಗಿದೆ. ಕಂಪಿಲನೂ ಬೇಡರವನಾಗಿದ್ದ ಎಂದು ಜನಪದರು ನಂಬುತ್ತಾರೆ.

ಮೂರನೆಯದಾಗಿ, ಹರಿಯಾಲಮ್ಮನ ಸಹೋದರನಾದ ಬೈಚಪ್ಪನಾಯಕನೇ ಕಂಪಿಲನ ಮಂತ್ರಿಯಾಗಿದ್ದ ಎಂದು ಎಲ್ಲ ಪಠ್ಯಗಳೂ ನಿರೂಪಿಸುತ್ತವೆ. ಇತಿಹಾಸಕಾರರು ಬೈಚಪ್ಪನ ಹೆಸರನ್ನು ಪ್ರಮುಖವೆಂದು ಭವಿಸುವುದಿಲ್ಲ. ಜನಪದ ನಿರೂಪಣೆಗಳ ಪ್ರಕಾರ ತುಂಬ ಒಳ್ಳೆಯ ಮಂತ್ರಿಯಾಗಿದ್ದ ಆತನ ರಾಜನಿಷ್ಠೆ ಮತ್ತು ಸಂಸ್ಥಾನ ನಿಷ್ಠೆಯನ್ನು ಮೌಖಿಕ ನಿರೂಪಣೆಗಳಲ್ಲಿ ಉದಾರವಾಗಿ ಕೊಂಡಾಡಲಾಗಿದೆ. ನಾಲ್ಕನೆಯದಾಗಿ, ಕಂಪಿಲ ಅಥವಾ ಕಂಪಣ್ಣನು ಕಾಮುಕನಾಗಿರಬೇಕು. ಆತನ ತನ್ನ ಇಳಿ ವಯಸ್ಸಿನಲ್ಲಿ ಡೊಂಬರ ಜಾತಿಗೆ ಸೇರಿದ ರತ್ನಜಿ ಎಂಬಾಕೆಯನ್ನು ಮದುವೆಯಾಗಿದ್ದ. ಈ ಮದುವೆಗೆ ಹರಿಯಾಲಮ್ಮನ ವಿರೋಧವಿತ್ತು. ಅದಕ್ಕಾಗಿ ಕಂಪಿಲನು ರತ್ನಜಿಯನ್ನು ಪ್ರತ್ಯೇಕ ಮನೆಯಲ್ಲಿರಿಸಿದ್ದ. ರತ್ನಾಜಿಯನ್ನು ಮದುವೆಯಾಗುವ ಹೊತ್ತಿಗೆ ಕುಮಾರರಾಮನು ವಯಸ್ಕನಾಗಿದ್ದ. ಐದನೆಯದಾಗಿ ಕುಮಾರರಾಮನು ಬೊಲ್ಲನೆಂಬ ಹೆಸರಿನ ಕುದುರೆಯನ್ನು ಅಭಿಮಾನದಿಂದ ಸಾಕಿಕೊಂಡಿದ್ದ ಎಂದು ಹೇಳಲು ಸಾಧ್ಯವಿದೆ. ಈ ಕುದುರೆಯನ್ನು ಆತ ಸಾಹಸದಿಂದ ಓರೆಗಲ್ಲಿನಿಂದ ತಂದ ಎಂದು ಕೆಲವು ಪಠ್ಯಗಳಲ್ಲಿ ಹೇಳಲಾಗಿದೆ. ಆದರೆ ಹೆಚ್ಚಿನ ನಿರೂಪಣೆಗಳಲ್ಲಿ ಆ ಕುದುರೆಯು ಕುಮಾರರಾಮನೊಂದಿಗೇ ಹುಟ್ಟುತ್ತದೆ. ಮಾಂತ್ರಿಕ ಮಾವಿನ ಹಣ್ಣಿನಿಂದ ಕುಮಾರರಾಮ ಜನಿಸಿದರೆ, ಅದರ ಗೊರಟಿನಿಂದ ಬೊಲ್ಲ ಜನಿಸುತ್ತದೆ. ಇದನ್ನು ನೋಡಿದರೆ ಈ ಕುದುರೆಯು ಎಳವೆಯಿಂದಲೇ ಅವನೊಂದಿಗೆ ಇತ್ತೆಂದು ಹೇಳುವುದೇ ಹೆಚ್ಚು ಸರಿ. ಕುಮಾರರಾಮನು ಕುದುರೆ ಸವಾರಿಯಲ್ಲಿ ನಿಸ್ಸೀಮನಾಗಿರಬೇಕು. ಆನೆಗೊಂದಿ ಸಂಸ್ಥಾನದ ಮೊದಲ ದಿನಗಳಲ್ಲಿ ಕಾಣಿಸಿಕೊಂಡ ಬಲಿಷ್ಠ ಕುದುರೆಗಳು ಜನಪದರ ಮನಸ್ಸಿನ ಮೇಲೆ ಅಪಾರ ಪ್ರಭಾವ ಬೀರಿರುವ ಸಾಧ್ಯತೆಯೂ ಇದೆ. ಮುಂದೆ ವಿಜಯನಗರ ಸಂಸ್ಥಾನದಲ್ಲಿ ಕುದುರೆಗಳನ್ನು ಹೇರಳವಾಗಿ ಸಾಕುತ್ತಿದ್ದರು, ಜನಪದರು ಅದಕ್ಕೆ ಪ್ರತಿಕ್ರಿಯಿಸಿಲ್ಲ. ಆರನೆಯದಾಗಿ ಕುಮಾರರಾಮನ ಎಳೆಯ ವಯಸ್ಸಿನಲ್ಲಿಯೇ ದೊಡ್ಡ ಸಾಧನೆ ಮಾಡಿ, ಜನರ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರಿ, ಅಕಾಲಮರಣವನ್ನಪ್ಪಿರಬೇಕು. ಹೀಗೆ ಸತ್ತ ಸಾಹಸಿಗರು ಮುಂದೆ ಆರಾಧ್ಯ ದೈವಗಳಾಗಿ ಪರಿವರ್ತನೆ ಹೊಂದುವ ಪ್ರಕ್ರಿಯೆ ಕರ್ನಾಟಕದಲ್ಲಿ ಸಾಮಾನ್ಯವಾಗಿ ಎಲ್ಲೆಡೆಯೂ ಇವೆ. ಕೊನೆಯದಾಗಿ ಕಥೆಯನ್ನು ನಿರೂಪಿಸುವಾಗ ಒಂದು ಕುಟುಂಬದ ಚೌಕಟ್ಟಿನಲ್ಲಿಯೇ ಮಂಡಿಸುತ್ತವೆ.

ಸಂಸ್ಥಾನಗಳ ನಡುವಣ ಯುದ್ಧಗಳಿಗಿಂತ ಕುಟುಂಬದೊಳಗಿನ ಬಿಕ್ಕಟ್ಟುಗಳೇ ಜನಪದರಿಗೆ ಪ್ರಧಾನವಾಗಿ ಕಂಡದ್ದು ಕುತೂಹಲಕರವಾಗಿದೆ. ಬಹುಶಃ ಕೌಟುಂಬಿಕ ಬಿಕ್ಕಟ್ಟುಗಳ ಚರಿತ್ರೆಯೇ ಜನಪದರ ಚರಿತ್ರೆಯಾಗಿದೆ ಎಂದು ತೋರುತ್ತದೆ. ಹೀಗೆ ಲಿಖಿತ ಇತಿಹಾಸ ಮೌನವಾಗಿರುವಲ್ಲಿ ಜನಪದ ಇತಿಹಾಸ ಮಾತಾಡುತ್ತದೆ.

# ಅಧ್ಯಾಯ : ಐದು

# ಆನೆಗೊಂದಿ ಗ್ರಾಮದ ಸಾಮಾಜಿಕ ಜೀವನ

೫.೧. ಕುಟುಂಬ ಪದ್ಧತಿ

೫.೨. ನ್ಯಾಯ ಪದ್ಧತಿ

೫.೩. ಆಹಾರ ಪದ್ಧತಿ

೫.೪. ವೈದ್ಯ ಪದ್ಧತಿ

೫.೫. ಬೇಟೆ

೫.೬. ಕಲೆಗಳು

೫.೭. ಕ್ರೀಡೆಗಳು

೫.೮. ಆಡಳಿತ

೫.೯. ಮಹಿಳೆಯರ ಸ್ಥಾನ-ಮಾನ

೫.೧೦. ಗ್ರಾಮದ ಲೋಕ ದೃಷ್ಟಿ

# ಅಧ್ಯಾಯ ೫

# ಆನೆಗೊಂದಿ ಗ್ರಾಮದ ಸಾಮಾಜಿಕ ಜೀವನ

ಯಾವುದೇ ಒಂದು ಸಮಾಜ ಅಥವಾ ಸಮುದಾಯ ಮೇಲ್ನೋಟಕ್ಕೆ ಅತಿ ಸರಳವೆನ್ನುವಂತೆ ಕಂಡುಬಂದರೂ, ಅದು ತನ್ನೊಡಲೊಳಗೆ ತನಗೇ ಅರಿವಾಗದಂತೆ, ಸೂಕ್ಷ್ಮವೂ, ಸಂಕೀರ್ಣವೂ ಆದ ಸಾಮಾಜಿಕ ಸ್ವರೂಪಗಳನ್ನು ಹೊಂದಿರುತ್ತದೆ. ವ್ಯವಸ್ಥೆಯೊಳಗೆ ಸುಭದ್ರತೆಯನ್ನು ಕಾಯ್ದುಕೊಳ್ಳುವುದು ಆ ಸಮಾಜಕ್ಕೆ ಮುಖ್ಯವಾಗಿರುತ್ತದೆ. ಸುಭದ್ರತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಸಾಮಾಜಿಕ ಜೀವನದಲ್ಲಿ ತನ್ನದೇ ಆದ ಕುಟುಂಬ ಪದ್ಧತಿ, ಮನೆ ನಿರ್ಮಾಣ, ಗೃಹ ಪ್ರವೇಶ, ನ್ಯಾಯ ಪದ್ಧತಿ, ಆಹಾರ ಪದ್ಧತಿ, ಉಡುಗೆ ತೊಡುಗೆ, ವೈದ್ಯ, ಮದ್ದು, ಚಿಕಿತ್ಸೆ, ಬೇಟೆ, ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ, ಮಹಿಳೆಯರ ಸ್ಥಾನ ಮಾನ, ಸಾಮಾಜಿಕ ಸಂಘ ಸಂಸ್ಥೆಗಳು, ನಂಬಿಕೆ ಮತ್ತು ವಿಧಿ ನಿಷೇಧಗಳು, ಭವಿಷ್ಯ ವಾಚಕಗಳು, ಕಟ್ಟೆಮನೆ ಪದ್ಧತಿ, ಕಲೆ ಮತ್ತು ಕ್ರೀಡೆ ಮುಂತಾದವುಗಳನ್ನು ಹೊಂದಿರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಆನೆಗೊಂದಿ ಜನಪದರ ಸಾಮಾಜಿಕ ಜೀವನವನ್ನು ಕುರಿತು ಚರ್ಚಿಸಲಾಗಿದೆ.

## ೫.೧. ಕುಟುಂಬ ಪದ್ಧತಿ

ವ್ಯಕ್ತಿ ಕುಟುಂಬ ಜೀವಿ ಹಾಗೆಯೇ ಸಮಾಜ ಜೀವಿ. ಆದ್ದರಿಂದ ವ್ಯಕ್ತಿಗೆ ಈ ಎರಡೂ ಕಡೆಯಿಂದ ಸಂಬಂಧಗಳುಂಟಾಗುತ್ತವೆ. ಇದನ್ನು ಕೌಟುಂಬಿಕ ಸಂಬಂಧ ಹಾಗೂ ಸಾಮಾಜಿಕ ಸಂಬಂಧ ಎಂದು ಗುರುತಿಸಬಹುದು. "ನಾಗರೀಕತೆ ಸಮಾಜದ ತಳಹದಿಯಾದರೆ, ಸಮಾಜಕ್ಕೆ ಕುಟುಂಬವೇ ಮೂಲ. ಕುಟುಂಬದ ಸ್ವರೂಪಕ್ಕೂ, ಸಮಾಜದ ಸ್ವಭಾವಕ್ಕೂ ಸಂಬಂಧವಿರುತ್ತದೆ." ಕುಟುಂಬ ಸಮಾಜದ ಒಂದು ಘಟಕ. ಕುಟುಂಬ ಎಂದ ತಕ್ಷಣ ಅತಿ ಚಿಕ್ಕ ಮಗುವಿನಿಂದ ಹಿಡಿದು ವೃದ್ಧರವರೆಗಿನ ಎಲ್ಲ ಮಾನವೀಯ ಸಂಬಂಧಿಕರ ಗುಂಪು ಎನ್ನಬಹುದು. ಇಲ್ಲಿ ಸುಮಾರು ಹತ್ತಾರು ಮನಸ್ಸುಗಳು ಏಕಾಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ. ಏಕಾಭಿಪ್ರಾಯ ಮಾಡದೇ ಇದ್ದಾಗ ಯಾವುದೇ ಮುಲಾಜಿಲ್ಲದೇ ಬೇರೆಯಾಗಬೇಕಾಗುತ್ತದೆ. ಮನೆ ದೇವರು, ಹಬ್ಬ ಹರಿದಿನದ ಸಂಪ್ರದಾಯಗಳು, ಪೂಜೆ, ಪುನಸ್ಕಾರಗಳು, ಧಾರ್ಮಿಕ ವಿಧಿ ವಿಧಾನಗಳು ವಿವಿಧ ಸಂಸ್ಕಾರಗಳು ಮೊದಲಾದ ಕಲ್ಪನೆಗಳು ಕುಟುಂಬಕ್ಕೆ ಧಾರ್ಮಿಕ ಮಹತ್ವವನ್ನು ಕೊಟ್ಟಿವೆ. ಆನೆಗೊಂದಿಯಲ್ಲಿ ಕ್ಷತ್ರಿಯ, ಗಂಗಾಮತಸ್ಥರು, ಬಲಿಜ, ನಾಯಕರು, ಲಿಂಗಾಯತ, ಬ್ರಾಹ್ಮಣ, ವೈಶ್ಯ, ಕುರುಬ, ಮುಸ್ಲಿಂ ಮುಂತಾದ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇವರು ಕೌಟುಂಬಿಕವಾಗಿ ಅವಿಭಕ್ತ ಕುಟುಂಬ ಪದ್ಧತಿಯನ್ನು ಹೊಂದಿದ್ದು, ಇಂದಿಗೂ

ಕೂಡಾ ಗುಂಪು ಜೀವನವನ್ನು ನಡೆಸುತ್ತಿದ್ದಾರೆ. ಇಂದು ನಗರೀಕರಣ ಪ್ರವೇಶದಿಂದಾಗಿ ಅವಿಭಕ್ತ ಕುಟುಂಬದ ಪ್ರಭಾವ ಕಡಿಮೆಯಾಗಿ ಇಡೀ ಕೌಟುಂಬಿಕ ವ್ಯವಸ್ಥೆಯೇ ಛಿದ್ರಗೊಂಡ ವಿಭಕ್ತ ಕುಟುಂಬಗಳಾಗಿರುವುದನ್ನು ಕಾಣಬಹುದಾಗಿದೆ. ಇಂತಹ ಒತ್ತಡಗಳಿದ್ದಾಗ್ಯೂ ಇನ್ನೂ ಹಲವು ಕುಟುಂಬಗಳು ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡಿವೆ ತಾವೆಲ್ಲರೂ ಒಂದು ಎಂಬ ಭಾವನೆಯಿಂದ ಅದಕ್ಕೆ ಪೂರಕವಾಗಿ ಒಡಗೂಡಿ ದುಡಿಯುವ, ಆಹಾರ ಸಂಪಾದನೆ, ಉತ್ಪಾದನೆ ಪ್ರವೃತ್ತಿ ಅವರಲ್ಲಿ ಉಂಟಾಗಿದೆ. ಕುಟುಂಬದ ಜವಾಬ್ದಾರಿ ಎಲ್ಲರ ಮೇಲಿದ್ದರೂ ಸಾಮಾನ್ಯವಾಗಿ ಯಜಮಾನನ ನೇತೃತ್ವದಲ್ಲಿ ಮುಂದುವರೆಯುತ್ತದೆ.

### ಅವಿಭಕ್ತ ಕುಟುಂಬ

ಕುಟುಂಬದ ಮುಖ್ಯವಾದ ಬಗೆಗಳಲ್ಲಿ ಅವಿಭಕ್ತ ಕುಟುಂಬವು ಒಂದಾಗಿದೆ. ಆನೆಗೊಂದಿಯ ಬಹುತೇಕ ಸಮುದಾಯಗಳಲ್ಲಿ ಬರುವ ಅವಿಭಕ್ತ ಕುಟುಂಬಗಳು ತಂದೆ ಶ್ರೇಣಿಯ ಮೂಲಕ ಒಟ್ಟಾಗಿ ಸೇರಿರುವ ಎರಡು ಮೂರು ತಲೆಮಾರಿನ ಸರಳ ಕುಟುಂಬಗಳನ್ನು ಒಳಗೊಂಡಿರುತ್ತದೆ. ಇಲ್ಲಿ ತಾತ, ಅಜ್ಜಿಯರು, ತಂದೆ ತಾಯಿಗಳು, ಮಕ್ಕಳು ಮುಂತಾದ ರಕ್ತ ಸಂಬಂಧಿಗಳು ಸೇರಿ ಮೂರು ನಾಲ್ಕು ತಲೆಮಾರಿನ ಜನರಿರುತ್ತಾರೆ. ಕುಟುಂಬದ ಸದಸ್ಯರು ಹೆಚ್ಚಿದಷ್ಟು ಅದರಲ್ಲಿ ಉತ್ಪತ್ತಿ ಹೆಚ್ಚು. ಆದುದರಿಂದ ವಿಭಕ್ತ ಕುಟುಂಬ ಪದ್ಧತಿ ಇಷ್ಟಪಡುವುದಿಲ್ಲ. ಆದರೆ ನಗರೀಕರಣ ಹಾಗೂ ಯಾಂತ್ರೀಕರಣದಿಂದ ಅವಿಭಕ್ತ ಕುಟುಂಬ ಪದ್ಧತಿಗೆ ಬಲವಾದ ಪೆಟ್ಟು ಬಿದ್ದಿದೆ. ಆನೆಗೊಂದಿಯ ಇಲ್ಲೂರು ರಾಮಕೃಷ್ಣ, ರಾಮರಾಜ ಇನ್ನೂ ಮುಂತಾದ ಕುಟುಂಬಗಳು ಅವಿಭಕ್ತ ಕುಟುಂಬಕ್ಕೆ ಪ್ರಮುಖ ಉದಾಹರಣೆಗಳಾಗಿವೆ.

### ಯಜಮಾನ

ಆನೆಗೊಂದಿಯ ಜನಪದರಲ್ಲಿ ಪಿತೃಪ್ರಧಾನ ಕುಟುಂಬವಿದ್ದು ಮನೆಯಲ್ಲಿ ಹಿರಿಯವ್ಯಕ್ತಿ ಯಜಮಾನನಾಗಿರುತ್ತಾನೆ. ಈತನದೇ ಮನೆಯ ಅಧಿಪತ್ಯ. ಈತನಿಗೆ ವಿಶೇಷ ಅಧಿಕಾರವಿರುತ್ತದೆ. ಕುಟುಂಬದ ಖರ್ಚು, ವೆಚ್ಚ, ಆದಾಯ. ಆತನ ಜವಾಬ್ದಾರಿಗೆ ಸೇರಿದವು. ಮದುವೆ, ಗಂಡುಹೆಣ್ಣುಗಳ ಆಯ್ಕೆ, ಸೇರಿದಂತೆ ಎಲ್ಲಾ ಮಹತ್ವದ ಕಾರ್ಯಕ್ರಮಗಳಲ್ಲಿ ಕುಟುಂಬದ ಯಜಮಾನನ ನಿರ್ದೇಶನ, ನಿರ್ಣಯ ಮುಖ್ಯವಾಗಿರುತ್ತದೆ. ಮಕ್ಕಳು ದೊಡ್ಡವರಾದಂತೆ ಯಜಮಾನನ ಪಾತ್ರ ಕುಟುಂಬದಲ್ಲಿ ಕಡಿಮೆಯಾಗುತ್ತಾ ಹೋಗುತ್ತದೆ. ಕೌಟುಂಬಿಕ ಕಲಹಗಳು, ಹೊಲ, ಮನೆ, ಬೆಳ್ಳಿ ಬಂಗಾರ, ಆಸ್ತಿ-ಪಾಸ್ತಿ ಇಂತಹ ವಿಚಾರಗಳಲ್ಲಿ ಮೊದಲು ಕುಟುಂಬದ ಯಜಮಾನ ನಿರ್ಣಯ ಕೈಗೊಳ್ಳಲು ಪ್ರಯತ್ನಿಸುತ್ತಾನೆ. ಈತನಿಗೆ ಮೀರಿದಾಗ ಸಮುದಾಯದ ಸಹಾಯ ಬಯಸುತ್ತಾನೆ.

### ಯಜಮಾನಿ

ಯಜಮಾನನ ನಂತರ ಪ್ರಮುಖರಾದವರೆಂದರೆ ಯಜಮಾನಿ. ಕುಟುಂಬದ ಪ್ರತಿಯೊಂದು ಹಂತದಲ್ಲಿ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವ, ಸಮಯದಲ್ಲಿ ಯಜಮಾನಿಯ ಪಾತ್ರ ತುಂಬಾ

ಮುಖ್ಯವಾಗಿರುತ್ತದೆ. ಮದುವೆ, ತೊಟ್ಟಿಲು, ಮುಂತಾದ ಕಾರ್ಯಗಳಲ್ಲಿ ಯಜಮಾನಿಯೇ ನಿರ್ಧಾರ ತೆಗೆದುಕೊಳ್ಳುತ್ತಾಳೆ. ಗೃಹಿಣಿಯಾಗಿ, ಕೂಲಿಕಾರರಾಗಿ, ವೃತ್ತಿಪರ ಕೆಲಸ ಮಾಡುವವರಾಗಿ ಯಜಮಾನಿ ಗುರುತಿಸಿಕೊಂಡರೂ ಯಜಮಾನಿಯ ರೀತಿ ನೀತಿಗಳಲ್ಲಿ ಅಂತಹ ವ್ಯತ್ಯಾಸ ಕಾಣುವುದಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಶೋಷಣೆಗೊಳಗಾಗಿದ್ದಳೆಂಬುದನ್ನು ಮರೆಯುವ ಹಾಗಿಲ್ಲ. ಈಗೀಗ ಸಾಕ್ಷರತೆ ಪ್ರಮಾಣ ಅಲ್ಪಮಟ್ಟಿಗೆ ಹೆಚ್ಚಾಗಿ ಇಂತಹ ಶೋಷಣೆಗಳು ಕಡಿಮೆ ಎನ್ನಬಹುದು.

### ೫.೨. ನ್ಯಾಯ ಪದ್ಧತಿ

ನ್ಯಾಯ ಇತ್ಯರ್ಥದ ಒಂದೆ, ವ್ಯವಸ್ಥೆಯೇ ಪಂಚಾಯಿತಿ ಪರಂಪರೆಯಲ್ಲಿ ನ್ಯಾಯ ಪದ್ಧತಿಯು ತನ್ನದೇ ಆದ ವಿಶಿಷ್ಟ ಹಿನ್ನೆಲೆಯನ್ನು ಪಡೆದುಕೊಂಡಿದೆ. ದೇವಸ್ಥಾನ, ಕಟ್ಟೆಗಳ ಮೇಲೆ ಸಾಮಾನ್ಯವಾಗಿ ನ್ಯಾಯ ತೀರ್ಮಾನ. ಒಂದು ಜನ ಸಮೂಹದ ಆಚರಣೆ, ಆದರ್ಶ, ನಂಬಿಕೆ, ಮೌಲ್ಯಗಳು ನ್ಯಾಯಪದ್ಧತಿಯನ್ನು ರೂಪಿಸುತ್ತವೆ.

**ಪಂಚಾಯ್ತಿ ಕಟ್ಟೆ ವಿವರ**

ಪ್ರತಿಯೊಂದು ಮನೆತನದಿಂದ ಎಂಟತ್ತು ಜನ ಯಜಮಾನರು

|

ಹತ್ತುಜನ ಪ್ರಮುಖ ಹಿರಿಯ ನಾಯಕರು

|

ಮನೆಗೊಬ್ಬರಂತೆ ಒಟ್ಟು ದೈವದವರು

|

ತಳವಾರ

ಆನೆಗೊಂದಿ ಪರಿಸರದಲ್ಲಿ ಪ್ರಮುಖ ಯಜಮಾನರೆನಿಸಿಕೊಂಡವರೆಂದರೆ ರಾಮದೇವರಾಯರು, ಕುಪ್ಪರಾಜು, ರಾಮರಾಜು, ಪ್ರಭಪ್ಪ, ರಾಮಕೃಷ್ಣ ಮುಂತಾದವರು.

ತಪ್ಪು ಮಾಡಿದವನು ದೈವದ ತೀರ್ಮಾನಕ್ಕೆ ಬದ್ಧನಾಗಿರಬೇಕು. ದಂಡ ಹಾಕುವುದೂ ತಪ್ಪು ಮಾಡಿದವನಿಗೆ ಕೊಡುವ ಶಿಕ್ಷೆಗಳಲ್ಲಿ ಒಂದಾಗಿದೆ. ಸಮಾಜದ ನ್ಯಾಯಕ್ಕೆ ಧಿಕ್ಕಾರ ಹಾಕಿದರೆ ಬಹಿಷ್ಕಾರದಂತ ಶಿಕ್ಷೆ ವಿಧಿಸಲಾಗುತ್ತದೆ.

### ನ್ಯಾಯ ನಿರ್ಣಯ ಕ್ರಮ

ಪಂಚಾಯ್ತಿಯನ್ನು ಕೂಡಿಸಲು ತಳವಾರನನ್ನು ನೇಮಿಸಿಕೊಳ್ಳುತ್ತಾರೆ. ಭೂಮಿ, ಹಣಕಾಸು, ಸಣ್ಣ ಪುಟ್ಟ ಕಳವು, ಸ್ತ್ರೀ ಪುರುಷರ ಸಮಸ್ಯೆಗಳು, ಜಮೀನು, ಅಂತರ್‌ಜಾತೀಯ ವಿವಾಹ, ಮನೆ, ಹಬ್ಬ, ಜಾತ್ರೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಪಂಚಾಯ್ತಿ ನಿಷ್ಪಕ್ಷಪಾತವಾಗಿ ನಡೆಯುತ್ತದೆ. ಸಾಮಾನ್ಯವಾಗಿ ಆನೆಗೊಂದಿ ಪಂಚಾಯ್ತಿ ಸಂದರ್ಭದಲ್ಲಿ ಹಿರಿಯರೆಲ್ಲರ ಅಭಿಪ್ರಾಯ ತಿಳಿದುಕೊಂಡು ನಂತರ ಪ್ರಮುಖ ಮನೆತನಗಳಲ್ಲಿ

ಸೇರಿದ ನಾಯಕರುಗಳು ಪರಿಷ್ಕರಿಸುತ್ತಾರೆ. ಅವರ ಮತ್ತು ದೈವದವರ ಅಭಿಪ್ರಾಯದ ಮೇರೆಗೆ ಮುಖ್ಯ ಮನೆತನಕ್ಕೆ ಸೇರಿದ ಯಜಮಾನರು ನ್ಯಾಯ ತೀರ್ಮಾನವನ್ನು ಕೈಗೊಳ್ಳುತ್ತಾರೆ.

### ೫.೩. ಆಹಾರ ಪದ್ಧತಿ

ಭೂಮಿಯ ಮೇಲೆ ಮನುಷ್ಯ ವಾಸಿಸಲು ಗಾಳಿ ನೀರು ಎಷ್ಟು ಮುಖ್ಯವೋ, ಆಹಾರವೂ ಸಹ ಅಷ್ಟೇ ಮುಖ್ಯ. ಅನ್ನ, ಬಟ್ಟೆ, ವಸತಿ ಇವು ಮಾನವನ ಪ್ರಾಥಮಿಕ ಅವಶ್ಯಕತೆಗಳು. ಇವಿಲ್ಲದೆ ಆತ ಬೇರೆ ಏನನ್ನು ಮಾಡಲಾರ ಎನ್ನುವುದನ್ನು ಸ್ವಯಂ ವೇದ್ಯವಾದ ಸರಳ ಸತ್ಯ. ಆನೆಗೊಂದಿಯ ಜನ ಸಮುದಾಯಗಳು ವಿಶಿಷ್ಟ ಆಹಾರ ಪದ್ಧತಿಗಳನ್ನು ಒಳಗೊಂಡಿರುವುದನ್ನು ಕಾಣಬಹುದು.

ಆನೆಗೊಂದಿಯ ಕ್ಷತ್ರಿಯ, ನಾಯಕ, ಗಂಗಾಮತಸ್ಥ ಸಮುದಾಯಕ್ಕೆ ಬೇಟೆ ಪ್ರಿಯವಾದ ಹವ್ಯಾಸವಾಗಿದೆ. ಹುಚ್ಚಪ್ಪಯ್ಯನ ಮಠದಲ್ಲಿರುವ ಬೇಟೆಯ ದೃಶ್ಯವಿರುವ ಕೆತ್ತನೆ, ಆನೆಗೊಂದಿ ಅರಸರು ಬೇಟೆಯ ಬಗೆಗೆ ಹೊಂದಿರುವ ಆಸಕ್ತಿಯನ್ನು ತೋರಿಸುತ್ತದೆ. ಬೇಟೆಯಾಡುವುದರಲ್ಲಿ ಇವರು ತುಂಬಾ ನಿಪುಣರು. ಈ ಕಾರಣದಿಂದ ಇವರು ಮತ್ತು ಇನ್ನು ಉಳಿದ ಅನೇಕ ಸಮುದಾಯಗಳ ಜನರು ಮಾಂಸಹಾರಿಗಳಾದರು. ಮೊಲ, ಉಡ, ಚಿಪ್ಪು ಹಂದಿ, ಜಿಂಕೆ ಮುಂತಾದ ಕಾಡುಪ್ರಾಣಿಗಳನ್ನು ಬೇಟೆಯಾಡಿ ಮಾಂಸಾಹಾರವಾಗಿ ಈ ಅರಸರು ಉಪಯೋಗಿಸುತ್ತಿದ್ದರು. ಭಾನುವಾರ ಕೂಲಿ ಮಾಡಿದ ಜನರಿಗೆ ಬಟವಾಡೆಯ ದಿನವಾಗಿದ್ದು, ಅಂದು ಬಂದ ಹಣದಿಂದ ಕುರಿ ಅಥವಾ ಕೋಳಿ ಮಾಂಸ ಕೊಂಡು ತಂದು ಅಡುಗೆ ಮಾಡಿ ಊಟ ಮಾಡುತ್ತಾರೆ. ನಾಯಕ, ಬಲಿಜ ಸಮುದಾಯದಲ್ಲಿ ಯಾರಾದರೂ ಸತ್ತರೆ ಸತ್ತ ಜಾಗದಲ್ಲಿ ಕುರಿ ಕೋಳಿ ಬ್ಯಾಟಿ ಮಾಡಿ ಅಡುಗೆ ಮಾಡಿ ಊಟ ಮಾಡುತ್ತಾರೆ. ಸಂಕ್ರಾಂತಿ ಕರಿ, ಕಾರಹುಣ್ಣಿಮೆ ಕರಿ, ಮೊಹರ ಕೊನೆಯ ದಿನ ಇಂತಹ ದಿನಗಳಲ್ಲಿ ಕುರಿ, ಕೋಳಿ ಮಾಂಸದ ಊಟ ಸಹಜವಾಗಿದೆ. ಊರಮ್ಮ, ಗಾಳೆಮ್ಮ ದೈವಗಳಿಗೆ ಮಾಂಸದ ಎಡೆ ಕೊಟ್ಟು ಊಟ ಮಾಡುವ ಪದ್ಧತಿಯೂ ಇದೆ. ತುಂಗಭದ್ರಾ ನದಿ ಪಕ್ಕದಲ್ಲೇ ಇರುವುದರಿಂದ ಮೀನಿನ ಊಟ ಈ ಭಾಗದಲ್ಲಿ ಹೆಚ್ಚು.

ಆನೆಗೊಂದಿಯಲ್ಲಿ ಸಸ್ಯಾಹಾರಿಗಳೂ ಕೂಡಾ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ರೊಟ್ಟಿ, ಚಪಾತಿ, ಅನ್ನ, ಸಾರು, ಬದನೆಕಾಯಿ, ಪಲ್ಯ, ಬಳ್ಳೊಳ್ಳಿ ಚಟ್ನಿ, ಉಳ್ಳಾಗಡ್ಡಿ ಚಟ್ನಿ, ಪುಂಡೆಪಲ್ಲಿ, ಉಳಿ, ಸಾಗು, ಸಾಂಬಾರು, ಉಳ್ಳಿಕಾಳು, ಗುಗ್ಗರಿ, ಮಡಕಿಕಾಳು ಗುಗ್ಗರಿ, ಶೇಂಗಾ ಹಿಂಡಿ, ಬಟಾನಿ ಹಿಂಡಿ, ಗುರೆಳ್ಳು ಪುಡಿ ಮುಂತಾದವುಗಳು ಊಟದ ಪದಾರ್ಥಗಳಾದರೆ ಫಳಾರಕ್ಕೆಂದು ಈ ಭಾಗದಲ್ಲಿ ಪ್ರಸಿದ್ಧವಾದ ವಗ್ಗರಣೆ, ಮಿರ್ಚಿ, ಪೂರಿ ಸಾಗು, ದೋಸೆ, ಉಪ್ಪಿಟ್ಟು, ಬೋಂಡಾ, ಆಲಸಂದಿ ವಡೆ, ಫಲಾವ್, ಸಿರಾ, ಮುಂತಾದವುಗಳನ್ನು ತಯಾರಿಸುತ್ತಾರೆ. ಇನ್ನು ಸಿಹಿ ತಿನಿಸುಗಳಾದ ಜಿಲೇಬಿ, ಕರ್ದಂಟು, ಮೈಸೂರುಪಾಕ, ಲಡ್ಡು, ಜಹಾಂಗೀರ್, ಬಾದುಷಾ, ಜಾಮೂನ್ ಮುಂತಾದವುಗಳನ್ನು ಇಲ್ಲಿ ಸೇವಿಸುತ್ತಾರೆ. ಹಬ್ಬ ಮದುವೆ, ಜಾತ್ರೆ ದಿನಗಳಲ್ಲಿ ಅನ್ನ, ಸಾರು, ಹೋಳಿಗೆ, ಕರಿಗಡುಬು, ಕರ್ಜಿಕಾಯಿ, ಚಕ್ಕಲಿ, ಸಜ್ಜಕ, ಕೋಸಂಬರಿ, ಬದನೆಕಾಯಿ, ಹಪ್ಪಳ, ಸಂಡಿಗೆ,

ಕರಿದ ಮೆಣಸಿನಕಾಯಿ, ಶಾವಿಗೆ ಪಾಯಸ, ಹಪ್ಪಳ, ಸಂಡಿಗೆ, ಕರಿದ ಮೆಣಸಿನಕಾಯಿ, ಶಾವಿಗೆ, ಪಾಯಸ, ಗಸಗಸೆ ಪಾಯಸ, ಕಡಲೆ ಬೇಳೆ ಪಾಯಸ, ಹುಗ್ಗಿ, ಸಿರಾ, ಹತ್ತಿರಸ, ಗಾರಿಗಿ ಹೀಗೆ ಅನೇಕ ವಿಶೇಷ ಭಕ್ಷ್ಯಗಳನ್ನು ಸೇವಿಸುತ್ತಾರೆ.

ಯುಗಾದಿಯಲ್ಲಿ ವಿಶೇಷವಾಗಿ ಬೇವು, ದಸರೆಯಲ್ಲಿ, ಜಾತ್ರೆಯಲ್ಲಿ ಊರ ಜನರೆಲ್ಲ ಹೋಳಿಗೆ ಊಟ ಮಾಡುವುದು ವಿಶೇಷ. ತೀರ್ಥಯಾತ್ರೆ, ಪುಣ್ಯಕ್ಷೇತ್ರ ದರ್ಶನಕ್ಕೆ ಹೋದವರು ಮನೆಮನೆಗೆ ಪ್ರಸಾದ ಹಂಚುವುದು ಮೊದಲಿನಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಅಡುಗೆಗಾಗಿ ಬಳಸುವ ಪಾತ್ರೆಗಳು ಗುಂಡಾಲಿ, ಬೋಗಾಣಿ, ತಪಾಲಿ, ಬಟ್ಟಲು, ಚರಿಗಿ, ಗಂಗಾಳ, ತಟ್ಟೆ ಅಥವಾ ತಾಟು, ಲೋಟ, ಸೌಟು, ಕೈ ಸಾಟು, ಸಾರಿನ ಸೌಟು ಇತ್ಯಾದಿ. ನೆಲವು, ಕಪಾಟು, ಕಟ್ಟೆಗಳಲ್ಲಿ ಆನೆಗೊಂದಿ ಗ್ರಾಮಸ್ಥರು ಆಹಾರ ಭದ್ರತೆಗಾಗಿ ತೆಗೆದಿಡುವುದುಂಟು.

### ೫.೪. ವೈದ್ಯ ಪದ್ಧತಿ

ಪ್ರಪಂಚದ ಇಂದಿನ ವೈದ್ಯಪದ್ಧತಿಗಳಿಗೆ ತಾಯಿಬೇರು ಜನಪದ ವೈದ್ಯ. ಪ್ರಕೃತಿಯಲ್ಲಿ ಮಾನವನಿಗೆ ನಿರಂತರವಾಗಿ ಕಾಡುವ ಒಂದಿಲ್ಲೊಂದು ರೋಗ ರುಜಿನಗಳಿವೆ, ಜನಪದ ವೈದ್ಯವು ಆಯಾ ಪರಿಸರ, ಬುಡಕಟ್ಟು, ಸಮುದಾಯಗಳಲ್ಲಿ ಭಿನ್ನ ಭಿನ್ನವಾದ ರೀತಿಯಲ್ಲಿಯೇ ಬಳಕೆಗೊಳ್ಳುತ್ತದೆ. ಈ ಎಲ್ಲಾ ಸಮುದಾಯ ಗುಂಪುಗಳ ವೈದ್ಯ ಪದ್ಧತಿಯ ಮೂಲ ಉದ್ದೇಶ, ರೋಗರುಜಿನಗಳನ್ನು ಹೊಡೆದೋಡಿಸುವದಾಗಿದೆ. ಜನಪದ ವೈದ್ಯರಲ್ಲಿ ಮೂರು ಗುಂಪುಗಳನ್ನು ಗುರುತಿಸಬಹುದು. ಖನಿಜ ಜನಪದ ವೈದ್ಯ, ಸಸ್ಯ ಜನಪದ ವೈದ್ಯ ಮತ್ತು ಮಂತ್ರಗಾರಿಕೆ. ಜನಪದ ವೈದ್ಯದಲ್ಲಿ ಮಾನವ ಮತ್ತು ಪ್ರಾಣಿ ಜನಪದ ವೈದ್ಯವೆಂದೂ ವಿಂಗಡಿಸಬಹುದು. ಆನೆಗೊಂದಿ ಜನಪದರು ತಮಗೆ ಬರುವ ರೋಗ ರುಜಿನಗಳಿಂದ ಮುಕ್ತರಾಗಲು ತಮ್ಮ ಪರಿಸರದಲ್ಲಿ ಸಿಗುವ ಕೆಲವು ಸಸ್ಯಗಳ ಬೇರುಗಳನ್ನು, ಲೋಹಗಳನ್ನು, ಬಸ್ಮಗಳನ್ನು ಉಪಯೋಗಿಸುವುದು ಕಾಣಬಹುದಾಗಿದೆ. ಇವುಗಳಲ್ಲದೆ ಮಂತ್ರಶಕ್ತಿಯಿಂದ ಹಲವು ರೋಗಗಳನ್ನು ನಿಯಂತ್ರಿಸುವ ಪರಿಪಾಠ ಇದೆ. ಚೇಳು ಕಡಿದರೆ, ಹಾವು ಕಡಿದರೆ, ಕಾಮಣಿ ಆದರೆ, ಮಕ್ಕಳಿಗೆ ಮುಟ್ಟು ದೋಷವಾದರೆ ಇಂತಹ ಇನ್ನೂ ಅನೇಕ ಕಾಯಿಲೆಗಳಿಗೆ ಪುಕ್ಕಟೆ ಚಿಕಿತ್ಸೆ ಔಷಧಿ ಕೊಡುವವರು ಆನೆಗೊಂದಿಯಲ್ಲಿದ್ದಾರೆ. ಇಂತಹ ಔಷಧಿ ಕೊಡುವ ವ್ಯಕ್ತಿ ಪ್ರಾಮಾಣಿಕನು, ಶುದ್ಧನೂ ಆಗಿರಬೇಕು. ಹಣದಾಸೆಗೆ ಕೆಲಸ ಮಾಡುವವನಾಗಿರಬಾರದು. ಈ ವೈದ್ಯಕೀಯ ಪದ್ಧತಿ ಸಾಮಾನ್ಯವಾಗಿ ತಮ್ಮ ಹಿರಿಯರಿಂದ ಬಂದ ಬಳುವಳಿಯಾಗಿರುತ್ತದೆ. ತಮ್ಮಲ್ಲಿರುವ ಗುಟ್ಟನ್ನು ಇತರರಿಗೆ ಕೊಡದ ಇವರು ಕೊನೆಗಾಲದಲ್ಲಿ ತಮ್ಮ ವಂಶದ ಒಬ್ಬರಿಗೆ ಈ ಗುಟ್ಟನ್ನು ಹೇಳುತ್ತಾರೆ. ರೋಗ ಲಕ್ಷಣವನ್ನು ತಿಳಿಯಲು ದೈಹಿಕ ಲಕ್ಷಣಗಳನ್ನು ಅವಲೋಕಿಸುವುದಂಟು. ನಾಡಿ ಮಿಡಿತ, ಕಣ್ಣು ಪರೀಕ್ಷೆ ಮಾಡಿ ರೋಗ ಪತ್ತೆ ಹಚ್ಚುತ್ತಾರೆ. ಹಿರಿಯರಿಂದ ತಿಳಿದ ಸಸ್ಯೌಷಧವನ್ನು ಪ್ರಯೋಗ ಮಾಡಿ ಕಾಯಿಲೆ ವಾಸಿ ಮಾಡುತ್ತಾರೆ. ಮಹಿಳಾ ವೈದ್ಯರು ರೋಗಿಯೊಬ್ಬನಿಗೆ ಚಿಕಿತ್ಸೆ ನೀಡುವ ಕ್ರಮ ಹೀಗಿದೆ. ನಿಂಬೆಹಣ್ಣು,

ಒಣಮೆಣಸಿನಕಾಯಿ, ಉಪ್ಪು, ಹಸಿ ಮೆಣಸಿನಕಾಯಿ, ಕೇರು, ಎಲೆ, ಅಡಿಕೆ ಇಂತಹವುಗಳು ಯಾವುದಾದರೂ ಕೆಲವನ್ನು ಮುಖದ ಮುಂದೆ ಮೂರು ಸಾರಿ, ಬೆನ್ನಿಗೆ ಮೂರು ಸಾರಿ, ನಿವಾಳಿಸಿ ತೆಗೆದು ಮೂರು ದಾರಿ ಇರುವ ಕಡೆ ಅಥವಾ ಊರ ಹೊರಗಡೆ ಬಿಸಾಕಲು ತಿಳಿಸುತ್ತಾರೆ.

ಮಗುವಿಗೆ ವಿಪರೀತ ಜ್ವರ ಬಂದರೆ, ಸರಿ ದಿನಗಳು ಇದ್ದರೆ ಬಳೆಚೂರಿನಿಂದ ಅಥವಾ ಬೇವಿನ ಕಡ್ಡಿಯಿಂದ ಹಣೆಯ ಭಾಗ ಕುತ್ತಿಗೆಯ ಭಾಗದಲ್ಲಿ ಬೆಚ್ಚಗೆ ಸುಡುತ್ತಾರೆ. ಈ ಪದ್ಧತಿ ಮಾಡುವುದಕ್ಕಾಗಿ ಕೆಲವರು ಅನುಭವ ಪಡೆದಿರುತ್ತಾರೆ. ಯಾರಿಗಾದರೂ ಕಾಲಿಗೆ ಗಾಯವಾದರೆ ಅದು ದಾಟು ಬಕ್ಕೆಯೆಂದು ಕರೆಯುವ ಇವರು ಮೂರು ದಿನ ಕಲೆಯುವಲ್ಲಿ ಓಕಳಿ ನೀರು ದಾರಿಗೆ ಅಡ್ಡ ಹಾಕಿ ಅದರ ಮೇಲೆ ಎಲೆ, ಅಡಿಕೆ, ನಾಲ್ಕಾಣೆ ಅಥವಾ ಒಂದು ರೂಪಾಯಿ ದಕ್ಷಿಣೆ ಇಟ್ಟು ಗಾಯವಾದವನಿಗೆ ಆ ಓಕುಳಿಯನ್ನು ದಾಟಿಸಿ ಕರೆತರುವ ಪದ್ಧತಿ ಇದೆ. ಓಕುಳಿಯನ್ನು ದಾಟಿ ಬರುವ ವ್ಯಕ್ತಿಯು ಅದನ್ನು ತಿರುಗಿ ನೋಡದೆ ಮನೆಗೆ ಬರುತ್ತಾನೆ. ಇದೇ ರೀತಿಯಾಗಿ ಒಂದೊಂದು ರೋಗಲಕ್ಷಣಗಳಿಗೂ ಭಿನ್ನಭಿನ್ನವಾದ ಪದ್ಧತಿಗಳಿವೆ. ಕಾಮಾಲೆ ರೋಗಕ್ಕೆ ವೈದ್ಯನು ಹೊನ್ನಂಬರೆ ಗಿಡವನ್ನು ರೋಗಿಯ ಹೆಸರು ಹೇಳಿ ಅವನಿಗೆ ಬಂದ ರೋಗ ಪರಿಹಾರವಾಗಲಿ ಎಂದು ಹೇಳಿ, ಗಿಡವನ್ನು ಕಿತ್ತು ತಿರುವಿ ಹಾಕಿಬರುವ ಪದ್ಧತಿ ಇದೆ. ಗಿಡ ಒಣಗಿದಂತೆ ರೋಗಿಯ ರೋಗ ಪರಿಹಾರವಾಗುತ್ತದೆ ಎಂಬ ನಂಬಿಕೆ ಇವರದು. ಇದೇ ರೀತಿ ಮೂಲವ್ಯಾದಿಗೂ ನೆಲನೆಲ್ಲಿ ಗಿಡ ಕಿತ್ತಿ ತಿರುವಿ ಹಾಕುತ್ತಾರೆ. ಮಗು ಹಟ ಮಾಡಿದರೆ, ಅತ್ತರೆ, ದೃಷ್ಟಿ ಆಗಿದ್ದರೆ ಒಣ ಮೆಣಸಿನಕಾಯಿ ಉಪ್ಪು ತೆಗೆಯುವ ರೂಢಿ ಇದೆ. ಹತ್ತಿ ಗೊಂಬೆ ಮಾಡಿ, ಚಮಚಕ್ಕೆ ದಾರ ಸುತ್ತಿ ಸುಡುವ ರೂಢಿ ಇದೆ. ಬೆಂಕಿಯಲ್ಲಿ ಹಾಕಿದ ಒಣ ಮೆಣಸಿನಕಾಯಿ ಘಾಟು ಬಾರದಿದ್ದರೆ ದೃಷ್ಟಿ ಆಗಿದೆ ಎಂದರ್ಥ. ಮಕ್ಕಳಿಗೆ ವಿಪರೀತ ಕೆಮ್ಮು ಆದರೆ ಒಂದು ಲವಂಗ ಒಂದು ಎಲೆ ತುಂಬು, ಒಂದು ಮೆಣಸನ್ನು ತೆಗೆದುಕೊಂಡು ಸಾಣೆಕಲ್ಲಿನ ಮೇಲೆ ತೇದು, ತಾಯಿಯ ಮೊಲೆ ಹಾಲಿನಲ್ಲಿ ಕುಡಿಸಿದರೆ ವಿಪರೀತ ಕೆಮ್ಮು ನಿಲ್ಲುತ್ತದೆ ಎಂಬ ನಂಬಿಕೆ ಇದೆ.

ಇದೇ ರೀತಿ ಮಕ್ಕಳಿಗೆ ಮುಡುದಾಸ, ಕುಣಿ ಮುಡುದಾಸ. ಆದರೆ, ಹಕ್ಕಿ ನೆರಳು ಬಿದ್ದರೆ, ನಾಯಿ ಕೆಮ್ಮು ಅಂಟಿದರೆ, ಕೆಟ್ಟ ಕಣ್ಣು ಬಿದ್ದರೆ ಹೀಗೆ ಅನೇಕ ಮಕ್ಕಳ ಸಮಸ್ಯೆಗಳಿಗೆ ಗ್ರಾಮೀಣ ಸಂಪ್ರದಾಯದ ಔಷಧಿಯಿಂದ ಗುಣಪಡಿಸುವರು ಆನೆಗೊಂದಿಯಲ್ಲಿ ಅನೇಕರಿದ್ದಾರೆ. ಅವರಲ್ಲಿ ಕೆ. ಸುಂದ್ರಮ್ಮ, ತಿಮ್ಮರಾಜರು, ಓ. ನಾಗೇಂದ್ರ, ದಳವಾಯಿ, ಕುಮಾರಸ್ವಾಮಿ, ಡಿ. ಕುಪ್ಪರಾಜು ಮುಂತಾದವರಿದ್ದಾರೆ. ಇಲ್ಲಿನ ಜನ ರೋಗರುಜಿನಿಗಳಿಗೆ ಕೇವಲ ನಾಟಿ ವೈದ್ಯರನ್ನು ಮಾತ್ರ ನಂಬಿರದೆ ದೇವತೆಗಳ ಮೇಲೂ ಹೆಚ್ಚು ನಂಬಿಕೆ ಇಡುತ್ತಾರೆ. ಊರೊಳಗೆ ಸಾಮೂಹಿಕವಾಗಿ ವಾಂತಿ, ಭೇದಿ, ಕಾಲರಾ ಆದಾಗ ಗಾಳೆಮ್ಮನನ್ನು ಮಾಡಿ ಊರ ಒಲಿಮಾರಿ ದಾಟಿಸಿ ರೋಗವನ್ನು ಊರಾಚೆ ದಾಟಿಸಿದೆವೆಂಬ ನಂಬಿಕೆಯಲ್ಲಿರುತ್ತಾರೆ. ಇವುಗಳೆಲ್ಲವೂ ರೋಗಿಯ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ, ರೋಗ ನಿವಾರಣೆ ಮಾಡುವ ಸಾಧ್ಯತೆಗಳಿವೆ. ಇವು ಮನಸ್ಸಿಗೆ ಸಂಬಂಧಿಸಿದ ವಿಚಾರವಾಗಿದೆ. ರೋಗೋಪಚಾರಕ್ಕೆ ಅವೈಜ್ಞಾನಿಕ ರೀತಿಯಲ್ಲಿ ಮತ್ತು ತೀರ ಭಿನ್ನವಾಗಿ ಚಿಕಿತ್ಸೆ ನೀಡಿದರೂ ಸಹ ಇಲ್ಲಿ ಸಮುದಾಯದೊಳಗಿನ ಮನಸ್ಸುಗಳು ಪ್ರತಿಸ್ಪಂದಿಸುವ ರೀತಿ ಮಾತ್ರ ತುಂಬಾ ವಿಸ್ಮಯ.

## ಪ್ರಾಣಿ ವೈದ್ಯ

ಪಶುವೈದ್ಯ ಪರಂಪರೆ ತುಂಬಾ ಪ್ರಾಚೀನವಾದುದು. ಮಾನವ ತನ್ನೊಂದಿಗೆ ಸಹಜೀವನ ನಡೆಸುವ ಬದುಕಿಗೆ ಆಧಾರಸ್ತಂಭವಾಗಿರುವ, ತನ್ನ ಸಾಕು ಪ್ರಾಣಿಗಳ ಬಗ್ಗೆ ವಿಶೇಷ ಕಾಳಜಿಯನ್ನು ವಹಿಸುತ್ತಾನೆ. ಪ್ರಾಣಿಗಳ ಬದುಕನ್ನು ಅವುಗಳ ಆಹಾರ ಪದ್ಧತಿಯನ್ನು ಗಮನಿಸುತ್ತಾ ಬಂದ ಮಾನವ ಅವುಗಳಿಗೆ ಬರುವ ರೋಗರುಜಿನಿಗಳನ್ನು, ರೋಗಕ್ಕೆ ಕೊಡುವ ಚಿಕಿತ್ಸೆ ಬಗ್ಗೆ ನಿಸರ್ಗದಲ್ಲಿ ತನಗೆ ದೊರೆತ ಗಿಡಗಂಟೆಗಳ ಮೂಲಕ ಅನುಭವವನ್ನು ಪಡೆದಿರುತ್ತಾನೆ. ಸಾಮಾನ್ಯವಾಗಿ ಬಾಯಿಲ್ಲದ ಪ್ರಾಣಿಗಲಿಗೆ ಔಷಧಿ ಕೊಟ್ಟು ರೋಗ ಗುಣಪಡಿಸಿದರೆ ತಮಗೆ ಪುಣ್ಯ ಲಭಿಸುತ್ತದೆ ಎನ್ನುವ ನಂಬಿಕೆ ಆನೆಗೊಂದಿ ಜನಪದರಲ್ಲಿದೆ. ಆನೆಗೊಂದಿಯಲ್ಲಿ ಮಾಮೂಲಾಗಿ ಪ್ರಾಣಿಗಳಿಗೆ ಬರುವ ರೋಗದ ಬಗ್ಗೆ ಚಿಕಿತ್ಸೆ ನೀಡುವುದನ್ನು ಕೆಲವೇ ವ್ಯಕ್ತಿಗಳು ತಿಳಿದುಕೊಂಡಿರುತ್ತಾರೆ. ದನಕ್ಕೆ ನಾಲಿಗೆಗೆ ಮುಳ್ಳುರೋಗ ಬಂದು ಹುಲ್ಲನ್ನು ತಿನ್ನದೇ ಇದ್ದರೆ, ಅದರ ನಾಲಿಗೆಗೆ ಮದ್ದುಗುಣಿಕೆ ಕಾಯಿಯ ಮುಳ್ಳುಗಳಿಂದ ಅದರ ನಾಲಿಗೆಯನ್ನು ತಿಕ್ಕುವ ಪದ್ಧತಿ ಇದೆ. ಕೋಳಿಗಳಿಗೆ ತಗಲುವ ತೂಕಡಿಕೆ ರೋಗಕ್ಕೆ ಬಿಳಿ ಉಳ್ಳಾಗಡ್ಡೆ ಕೊಡುತ್ತಾರೆ. ದನಗಳಿಗೆ ಕಾಲು ಮುರಿದರೆ, ಅರಿಷಿಣಪುಡಿ, ಹರಿದಚ್ಚಗಿನ ಸೊಪ್ಪು, ಎದ್ದಿನಕಾಳುಪುಡಿ, ಕೋಳಿಮೊಟ್ಟೆಯ ಬಿಳಿರಸದಲ್ಲಿ ಕಲಸಿ, ಸೊಪ್ಪು ಸಣ್ಣಗಾಗುವಂತೆ ಅರೆದು ಮುರಿದು ಕಾಲನ್ನು ಹೊಂದಿಸಿ ಕಾಲಿನ ಮೇಲೆಲ್ಲಾ ಔಷಧಿ ಹಚ್ಚಿ ಬಿದಿರ ಡಬ್ಬೆಯನ್ನು ಕಟ್ಟಿ ಬಟ್ಟೆಯನ್ನು ಕಾಲಿನ ಸುತ್ತಲೂ ಕಟ್ಟುವ ಪದ್ಧತಿ ಇವರಲ್ಲಿದೆ. ಮಾಟ ಮಂತ್ರಗಳಿಂದಲೂ ಪ್ರಾಣಿಗಳು ಆರೋಗ್ಯ ಕಾಪಾಡಲು ಪ್ರಯತ್ನಿಸುತ್ತಾರೆ. ದನಗಳ ಹೆರಿಗೆಯಾದಾಗ ದೃಷ್ಟಿಯಾಗದಿರಲೆಂದು ಕುತ್ತಿಗೆಗೆ ಚಿಪ್ಪು, ಕೆಂಪು ಮೆಣಸಿನಕಾಯಿ, ನಿಂಬೆಹಣ್ಣು, ಕಸಬರಿಗೆ, ಕವಡೆ, ಕಂಬಳಿ ದಾರದಿಂದ ಪೋಣಿಸಿ ಕಟ್ಟುವ ಪದ್ಧತಿ ಆನೆಗೊಂದಿಯಲ್ಲಿದೆ.

ಚಪ್ಪೆ ರೋಗವಾದ ಜಾಗಕ್ಕೆ ಕಬ್ಬಿಣದ ಸಲಾಕೆಯನ್ನು ಕಾಯಿಸಿ, ಆ ಜಾಗಕ್ಕೆ ಬರೆ ಎಳೆಯುತ್ತಾರೆ. ದನಕರುಗಳು, ಕುರಿ ಆಡುಗಳು ಸರಿಯಾಗಿ ಹುಲ್ಲು ತಿನ್ನದಿದ್ದರೆ ಕಬ್ಬಿಣ ಕಾಸಿದ ನೀರನ್ನು ಕುಡಿಸುತ್ತಾರೆ. ಮಾನವರಂತೆ ತಾವು ಸಾಕಿದ ಪ್ರಾಣಿಗಳಿಗೆ ನೀವಾಳಿಸಿ ತೆಗೆಯುವುದು, ಮಂತ್ರಿಸಿ ರೋಗ ಗುಣಪಡಿಸುತ್ತಾರೆ. ಇದೇ ರೀತಿ ಇನ್ನೂ ಹಲವಾರು ಪ್ರಾಣಿವೈದ್ಯ ಪದ್ಧತಿಗಳೂ ಆನೆಗೊಂದಿ ಗ್ರಾಮದಲ್ಲಿ ಈಗಲೂ ನಡೆದುಕೊಂಡು ಬಂದಿವೆ. ಆನೆಗೊಂದಿಯ ಲಂಕೆಪ್ಪ ಮಡ್ಡೇರ್, ಜೋಗಪ್ಪ ಮಡ್ಡೇರ್ ಪ್ರಾಣಿ ವೈದ್ಯರ ಪ್ರಮುಖರಾಗಿ ಇಂದಿಗೂ ಕಂಡುಬರುತ್ತಾರೆ.

## ೫.೫. ಬೇಟೆ

ಆನೆಗೊಂದಿಯಲ್ಲಿ ರಾಜರಿಂದ ಹಿಡಿದು ಪ್ರಜೆಗಳವರೆಗೆ ಬೇಟೆಯಾಡುವುದು ಒಂದು ಹವ್ಯಾಸವಾಗಿದೆ. ಐತಿಹಾಸಿಕ ಸ್ಮಾರಕವಾದ ಹುಚ್ಚಪ್ಪಯ್ಯನ ಮಠದಲ್ಲಿ ಕೆತ್ತಲಾದ ಬೇಟೆಯ ದೃಶ್ಯಗಳು ಅಂದಿನ ಜನರ ಬೇಟೆ ಸಂಸ್ಕೃತಿಯನ್ನು ನೆನಪಿಸುತ್ತವೆ.

ಹಿಂದೆ ಚಿರತೆ, ಕರಡಿಗಳ ಹಾವಳಿ ಹೆಚ್ಚಾಗಿತ್ತು. ಈ ಹಾವಳಿ ತಪ್ಪಿಸಲು ಬೇಟೆಯಾಡುತ್ತಿದ್ದುದುಂಟು. ಅಲ್ಲದೆ ಜಿಂಕೆ, ಮೊಲ, ಏದು, ಉಡ ಮುಂತಾದವುಗಳನ್ನು ಮಾಂಸಾಹಾರದ ಉದ್ದೇಶಕ್ಕಾಗಿ ಬೇಟೆಯಾಡುತ್ತಿದ್ದರೂ, ಈಗಲೂ ಪ್ರಮುಖ ಬೇಟೆಗಾರರ ಮನೆಗಳಲ್ಲಿ ಬಂದೂಕು, ಬರ್ಚಿ, ಗಂಡುಗೊಡಲಿಗಳಿರುವುದು ಕಾಣಬಹುದಾಗಿದೆ. ಹಿಂದೆ ಬೇಟೆಗೆ ಹೋಗುವಾಗ ಸುಮಂಗಲೆಯರು ಆರತಿ ಬೆಳಗಿ ಕಳುಹಿಸುತ್ತಿದ್ದರು. ನಾಲ್ಕೈದು ಜನ ಗುಂಪು ಗುಂಪಾಗಿ ಬೇಟೆಗೆ ಹೋಗುವ ಪದ್ಧತಿ ಇತ್ತು. ಆನೆಗೊಂದಿ ಸಂಸ್ಥಾನದ ದೊರೆಗಳು, ದಾಸಪ್ಪ, ಲಂಕೆಪ್ಪ, ಡಿ.ಪವನ್ ಕುಮಾರ್, ಎನ್. ಈರಣ್ಣ ಇನ್ನೂ ಮುಂತಾದವರು ಪ್ರಮುಖ ಬೇಟೆಗಾರರಾಗಿದ್ದಾರೆಂಬುದು ಸ್ಥಳೀಯರ ಅಭಿಪ್ರಾಯ.

**ಬೇಟೆಗೆ ಹೊರಡುವ ಸಿದ್ಧತೆ**

ಆನೆಗೊಂದಿ ಗ್ರಾಮದ ಜನರು ಹಿಂದೆ ಬೇಟೆಗೆ ಹೊರಡುವಾಗಿನ ಸಿದ್ಧತೆಯನ್ನು ನೋಡಲಾಗಿ, ಮೊದಲು ಬಂದೂಕನ್ನು ಕಂಬಳಿ ಹಾಸಿ ಅದರ ಮೇಲಿಟ್ಟು ಪೂಜೆ ಮಾಡುತ್ತಾರೆ. ಬಂದೂಕು ಎಂದರೆ ಕಾಳಿ, ಕಾಳಿ ದೇವತೆ ಎನ್ನುವ ನಂಬಿಕೆ ಇವರದು. ದೇವತೆಯ ರೂಪದಲ್ಲಿ ಬಂದೂಕನ್ನು ಪೂಜಿಸುತ್ತಾರೆ. ಬಂದೂಕನ್ನು ಆಕಸ್ಮಿಕವಾಗಿ ತುಳಿದರೆ ಅಥವಾ ಕಾಲು ಬಡಿದರೆ ಬಂದೂಕನ್ನು ಮುಟ್ಟಿ ನಮಸ್ಕರಿಸುತ್ತಾರೆ. ಬೇಟೆಗೆ ಹೋಗುವಾಗ ಕಡ್ಡಾಯವಾಗಿ ನಾಯಿಯನ್ನು ಜೊತೆಗೆ ಕರೆದುಕೊಂಡು ಹೋಗುತ್ತಾರೆ. ಹೋಗುವಾಗ ರಂಗನಾಥನನ್ನು, ದುರ್ಗೆಯನ್ನು ಸ್ಮರಿಸಿ ಹೋಗುತ್ತಾರೆ. ಬೇಟೆಗೆ ಸಹಾಯವಾಗಲೆಂದು ಟಾರ್ಚ್‌ನ್ನು ಬಳಸುತ್ತಾರೆ. ಬೆಕ್ಕು ಅಡ್ಡ ಬಂದರೆ ಬೇಟೆಗೆ ಹೊರಡುವುದನ್ನು ಬಿಡುತ್ತಾರೆ. ಹೆಚ್ಚಾಗಿ ಶನಿವಾರ ಸಂಜೆ ಹೊರಡುತ್ತಾರೆ. ಏಕೆಂದರೆ ಕಾಡು ಹಂದಿ, ನವಿಲು, ಮೊಲ ಇತ್ಯಾದಿ ಮಾಂಸಾಹಾರಿ ಆಹಾರವನ್ನು ಭಾನುವಾರ ಊಟ ಮಾಡಲು ಅನುಕೂಲವಾಗಲೆಂದು ಶನಿವಾರ ಸಂಜೆ ಹೊರಡುತ್ತಾರೆ. ಭಾನುವಾರವಾದರೆ ಕುಟುಂಬದ ಸದಸ್ಯರೆಲ್ಲರೂ ಊಟ ಮಾಡಬಹುದು.

**ಬೇಟೆಯಾಡ ಬಯಸುವ ಪ್ರಾಣಿಪಕ್ಷಿಗಳು**

ಚಿರತೆಯನ್ನು ಜೀವಂತವಾಗಿ ಹಿಡಿದು ತಂದು ಆನೆಗೊಂದಿಯ ಗಗನಮಹಲ್‌ನ ಮುಂದೆ ರಾಣಿಯರ ಮತ್ತು ಕಿಕ್ಕಿರಿದ ಜನಸಮೂಹದ ಮಧ್ಯ ಪಂಜರದೊಳಗಿನ ಚಿರತೆಯನ್ನು ಬೇಟೆಯಾಡುತ್ತಿದ್ದರೆಂದು ಸ್ಥಳೀಯರು ಹೇಳುತ್ತಾರೆ. ಹುಚ್ಚಪ್ಪಯ್ಯನ ಮಠದೊಳಗಿನ ಬೇಟೆಯ ಕೆತ್ತನೆಗಳಿಂದ ಕಾಡು ಹಂದಿ, ಜಿಂಕೆ ಬೇಟೆಯಾಡುತ್ತಿದ್ದುದು ಗಮನಕ್ಕೆ ಬರುತ್ತದೆ. ಇದಲ್ಲದೆ ಮೊಲ, ನವಿಲು, ಬರ್ಕ, ಮುಳ್ಳು ಹಂದಿ, ಕಡ, ಕಾಡುಕುರಿ, ಕೆಂಜಳಿಲು, ಕಾಡುಕೋಳಿ, ಬುರಲಿ ಇತ್ಯಾದಿ ಪ್ರಾಣಿಪಕ್ಷಿಗಳನ್ನು ಬೇಟೆಯಾಡಿದ ವಿವರಗಳಿವೆ.

**ಜಲಬೇಟೆ**

ತುಂಗಭದ್ರಾ ನದಿ ಆನೆಗೊಂದಿಗೆ ಹೊಂದಿಕೊಂಡೇ ಇರುವದರಿಂದ ಹೆಚ್ಚಾಗಿ ಇಲ್ಲಿನ ಗಂಗಾಮತಸ್ಥರು, ಅಂಬಿಗರು ಜಲಚರಗಳ ಬೇಟೆಯಾಡುತ್ತಾರೆ. ಮೊದಲು ಮುಚ್ಚುಬರಿ ಎಂದು ಜಲಬೇಟೆ ಇತ್ತು. ಮೀನು

ಬೇಟೆ ಇವರಿಗೆ ವೃತ್ತಿಯಾಗಿದೆ. ಹೊಳೆ ತುಂಬಾ ಬಲೆ ಎಸೆದು ಹರಿಗೋಲಿನ ಮುಖಾಂತರ ಮೀನು ಹಿಡಿದು ತಾವು ಮೀನನ್ನು ಪ್ರಮುಖ ಮಾಂಸಾಹಾರವಾಗಿ ಬಳಸುವುದಲ್ಲದೆ ಆನೆಗೊಂದಿ, ಗಂಗಾವತಿ, ಹೊಸಪೇಟೆಗಳಿಗೆ ಹೋಗಿ ಮಾರಾಟ ಮಾಡುವುದುಂಟು. ಕಾಡಿನ ನಾಶ, ಅರಣ್ಯ ಇಲಾಖೆಯ ನಿರ್ಬಂಧದಿಂದಾಗಿ ಬೇಟೆ ಪದ್ಧತಿ ಈಗೀಗ ಕಡಿಮೆಯಾಗಿದೆ.

**ಬೇಟೆಯಾಡುವ ಸ್ಥಳಗಳು**

ಗವಿರಂಗನಾಥ, ದುರ್ಗಾ ದೇವಸ್ಥಾನದ ಅಕ್ಕಪಕ್ಕದ ಗುಡ್ಡಗಳು, ಬಾಯಿಕಾಲೇವು, ಎಲ್ಲಮ್ಮನ ಗುಡ್ಡ ಮತ್ತು ಅಕ್ಕಪಕ್ಕದ ಗುಡ್ಡಗಳು, ಸಾಣಾಪುರ ಹನುಮನಹಳ್ಳಿ ಅಕ್ಕಪಕ್ಕದ ಗುಡ್ಡಗಳು, ಕಡೆಬಾಗಿಲು ಅಕ್ಕಪಕ್ಕದ ಗುಡ್ಡಗಳು, ಹಳೇ ಮಾಗಾಣಿ, ಬಾಳೆ ತೋಟಗಳು ಇತ್ಯಾದಿ ಸ್ಥಳಗಳು ಬೇಟೆಯ ಪ್ರಮುಖ ಸ್ಥಳಗಳಾಗಿವೆ.

**ಬಂದೂಕಿನ ಪೂಜೆ**

ಆನೆಗೊಂದಿ ದಸರಾ ಹಬ್ಬದ ಸಂದರ್ಭದಲ್ಲಿ ಹಿಂದೆ ರಾಜರು ಆಯುಧ ಪೂಜೆ ಮಾಡುವಾಗ ಬಂದೂಕಗಳನ್ನು ವಿಶೇಷವಾಗಿ ಪೂಜೆಗೆ ಇಡುತ್ತಿದ್ದರು. ಬಂದೂಕುಗಳನ್ನು ಪೂರ್ಣವಾಗಿ ತೊಳೆದು, ಕೊಬ್ಬರಿ ಎಣ್ಣೆಯಿಂದ ಬಂದೂಕನ್ನು ಲೇಪನಗೊಳಿಸಿ ಆಯುಧ ಪೂಜೆಗೆ ಇಡುತ್ತಿದ್ದರು. ಕುಂಕುಮ, ವಿಭೂತಿ, ಅರಿಶಿಣ ಹಚ್ಚಿ ಬಾಳೆ ಕಂಬ, ಕಬ್ಬುಗಳಿಂದ ಅಲಂಕರಿಸಿ ಎಡೆ ಕೊಟ್ಟು ಪೂಜಿಸುತ್ತಿದ್ದರು. ಮೈಲಿಗಿ ಇರುವವರು ಬಂದೂಕು ಮುಟ್ಟುವಂತಿರಲಿಲ್ಲ, ಎಂಬ ಪದ್ಧತಿಯೂ ಉಂಟು.

**೫.೬. ಕಲೆಗಳು**

ಆನೆಗೊಂದಿಯ ಪರಿಸರದಲ್ಲಿ ಅನೇಕ ಕಲೆಗಳು ಜನಪ್ರಿಯವಾಗಿವೆ. ಕೆಲವು ಜನಪ್ರಿಯ ಕಲೆಗಳು ಆನೆಗೊಂದಿಯ ರಂಗನಾಥ ಸ್ವಾಮಿ, ಗಣೇಶಗುಡಿ, ಹುಚ್ಚಪ್ಪಯ್ಯನ ಮಠ ಮುಂತಾದ ವಾಸ್ತುಶಿಲ್ಪಗಳಲ್ಲಿ ಸ್ಥಾನ ಪಡೆದಿವೆ. ಇವುಗಳಲ್ಲಿ ಕೆಲವು ಮುಖ್ಯ ಕಲೆಗಳನ್ನು ಪರಿಚಯಿಸಲಾಗಿದೆ.

**ಕೋಲಾಟ**

ಕೋಲಾಟವು ಜನಪದ ಕಲೆಗಳಲ್ಲಿ ಒಂದು. ಕೋಲಾಟದಲ್ಲಿ ಕುಣಿತವೂ ಉಂಟು, ಸಂಗೀತವೂ ಉಂಟು. ಕೋಲಾಟವು ಇಂದು ಆನೆಗೊಂದಿಯಲ್ಲಿ ಮೊಹರಂ ಹಬ್ಬದಲ್ಲಿ ರಂಗನಾಥಸ್ವಾಮಿ ಜಾತ್ರೆಯಲ್ಲಿ ಕಾಣಿಸಿಕೊಳ್ಳುವುದುಂಟು. ಇಲ್ಲಿ ಸಾಮಾನ್ಯವಾಗಿ ಗಂಡಸರು ಆಡುವುದುಂಟು. ಕೋಲಾಟ ಆಡುವವರಲ್ಲಿ ಕೋಸಿಗಿಯವರು ಪ್ರಮುಖವಾಗಿ ಗಮನಕ್ಕೆ ಬರುತ್ತಾರೆ. ಮೊಹರಂ ಹಬ್ಬದ ದಿನಗಳಲ್ಲಿ ಹತ್ತು ಹನ್ನೆರಡು ಜನರ ಗುಂಪೊಂದು ಕೋಲಾಟದಲ್ಲಿ ಪರಿಣಿತಿ ಹೊಂದಿ ಮನೆ ಮನೆಗೆ ಹೋಗಿ ಪ್ರದರ್ಶನ ಕೊಡುತ್ತಾರೆ. ಇಲ್ಲಿ ಕೋಲುಗಳದ್ದೇ ಮುಖ್ಯ ಪಾತ್ರ. ಬಿಳಿಯ ಅಂಗಿ ಅಥವಾ ಬನಿಯನ್, ಬಣ್ಣದ ಚಡ್ಡಿ, ತಲೆಗೆ ಮತ್ತು ನಡುವಿಗೆ ಬಣ್ಣದ ವಸ್ತ್ರ, ಕಾಲಿಗೆ ಗೆಜ್ಜೆ, ಚಲೆಗೆ ರಿಬ್ಬನ್ ಇವು ಕೋಲಾಟದ ಕಲಾವಿದರ ಸಾಮಾನ್ಯ

ವೇಷಭೂಷಣಗಳು. ಕಾಲಿಗೆ ಗೆಜ್ಜೆ ಕಟ್ಟುವುದರಿಂದ ಅವರ ಕುಣಿತಕ್ಕೆ ಆವೇಶ ಹುಮ್ಮಸ್ಸು ಬರುತ್ತದೆ. ಇವರ ಕುಣಿತಕ್ಕೆ ರಂಗೇರಿಸುವ ವಾದ್ಯವೆಂದರೆ ಚರ್ಮದ ಹಲಗೆ. ಹಿಂದೆ ಆನೆಗೊಂದಿ ರಾಜರ ಅವಧಿಯಲ್ಲಿ ಸ್ತ್ರೀಯರು ಕೋಲಾಟಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದರೆಂಬುದನ್ನು ಹುಚ್ಚಪ್ಪಯ್ಯನ ಮಠದಲ್ಲಿ ಕೆತ್ತಲಾಗಿರುವ ಮಹಿಳೆಯರು ಸಾಲಾಗಿ ನಿಂತು ಕೋಲಾಟ ಆಡುವ ದೃಶ್ಯ ನೋಡಿ ಊಹಿಸಿಕೊಳ್ಳಬಹುದಾಗಿದೆ.

### ಭಜನೆ

ಆನೆಗೊಂದಿಯ ಜನಪದರಲ್ಲಿ ಭಜನೆ ಕಲೆಯು ಮೊದಲಿನಿಂದಲೂ ಇದೆ. ಅಮವಾಸ್ಯೆ, ಹಬ್ಬ, ಹರಿದಿನಗಳು, ಜಾತ್ರೆ, ಹಾವು ಕಚ್ಚಿದಾಗ, ಸತ್ತಾಗ, ಮಳೆಬಾರದಿದ್ದಾಗ ಪ್ರತಿ ಮಂಗಳವಾರ ಶುಕ್ರವಾರಗಳಂದು ಗ್ರಾಮದ ಆಂಜನೇಯ ದೇವಸ್ಥಾನದಲ್ಲಿ ಹಾಗೂ ಇತರೆಡೆಗಳಲ್ಲಿ ಭಜನೆಯನ್ನು ಮಾಡುತ್ತಿರುತ್ತಾರೆ. ಭಜನೆಯು ತಂಡದ ಹಿಮ್ಮೇಳದೊಂದಿಗೆ ಕೂಡಿರುತ್ತದೆ. ನಿಧಾನಗತಿಯಲ್ಲಿ ಆರಂಭವಾಗಿ ತ್ವರಿತಗತಿಯಲ್ಲಿ ಮುಕ್ತಾಯವಾಗುವುದು, ಭಜನೆಯ ಸಾಮಾನ್ಯ ಲಕ್ಷಣವಾಗಿದೆ. ಆನೆಗೊಂದಿಯ ಬೋವಿಸಣ್ಣಪ್ಪ, ಶೇಖರಪ್ಪ ಇವರ ತಂಡಗಳು ಪ್ರಮುಖ ಭಜನಾ ಮಂಡಳಿಗಳು ಗಮನಕ್ಕೆ ಬರುತ್ತವೆ.

### ಹುಲಿವೇಷ

ಮೊಹರಂ ಹಬ್ಬದ ಸಂದರ್ಭದಲ್ಲಿ ಆನೆಗೊಂದಿಯಲ್ಲಿ ಕೆಲವರು ಈ ವೇಷವನ್ನು ಹಾಕುವುದುಂಟು. ಹುಲಿವೇಷವನ್ನು ಹರಕೆ ಹೊತ್ತವರು ಮಾತ್ರ ಹಾಕಿಕೊಳ್ಳುತ್ತಾರೆ. ಪೀರಲ ಬೋರ ಸಕ್ಕರೆ ಅರ್ಪಿಸಿ ಹರಕೆ ಒಪ್ಪಿಸಿ, ಮನೆಮನೆಗೆ ಹೋಗಿ ಹುಲಿ ಕುಣಿತದೊಂದಿಗೆ ಪ್ರದರ್ಶನ ನೀಡಿ ಮನೆ ಮನೆಗಳಲ್ಲಿ ಹಣ ಪಡೆಯುತ್ತಾರೆ. ಹುಲಿ ವೇಷಗಾರರು ಗಂಗಾವತಿಯ ಜೀನಗಾರರಿಂದ ಬಣ್ಣ ಬರೆಯಿಸಿಕೊಂಡು ಬರುತ್ತಾರೆ. ಬರೀ ಚಡ್ಡಿ ಮಾತ್ರ ಧರಿಸಿ ಮೈಯೆಲ್ಲಾ ಹುಲಿ ಬಣ್ಣದ ರೀತಿಯಲ್ಲಿ ಮೈಮೇಲೆ ಬಳಿದುಕೊಂಡು ರಟ್ಟಿನ ಕಿವಿ ಇಟ್ಟುಕೊಳ್ಳುತ್ತಾರೆ. ಕೆಲವರು ಮುಖವಾಡ ಹಾಕಿಕೊಳ್ಳುತ್ತಾರೆ. ಅವರಿಗೆ ಹೆಜ್ಜೆಗಾರಿಕೆಯ ಗತ್ತು ಬೇಕಾಗುತ್ತದೆ. ಹಲಗೆ ಬಾರಿಸಿದಂತೆ ಹುಲಿವೇಷಧಾರಿ ಕುಣಿಯಬೇಕಾಗುತ್ತದೆ.

### ಹಲಗೆ ಬಡಿಯುವ ಕಲೆ

ಆನೆಗೊಂದಿ ಗ್ರಾಮದ ಕೆಲವರು ಹಲಗೆ ಬಡಿಯುವುದರಲ್ಲಿ, ವಿವಿಧ ರೀತಿಯಲ್ಲಿ ಹಲಗೆ ನುಡಿಸುವುದರಲ್ಲಿ ಪರಿಣಿತರಿದ್ದಾರೆ. ಊರಿಗೆ ಡಂಗೂರ ಸಾರುವಾಗ ಹಲಗೆ ಬಾರಿಸುವುದುಂಟು. ಮೊಹರಂ ಹಬ್ಬದಲ್ಲಿ ಅಲಾಯಿ ಹೆಜ್ಜೆ ಹಾಕುವಾಗ ಹಲಗೆ ಬೇಕೇ ಬೇಕು. ರಂಗನಾಥಸ್ವಾಮಿಯ ಜಾತ್ರೆ, ಉತ್ಸವ, ಸಂದರ್ಭದಲ್ಲಿ ಹಲಗೆ ಬಾರಿಸುತ್ತಾರೆ. ಮೊಹರಂನಲ್ಲಿ ಹರಕೆ ಸಲ್ಲಿಸಲು ಮಸೀದಿಗೆ ಹೋಗುವಾಗ, ಮನೆಗಳಲ್ಲಿ ವಿಶೇಷ ಸಂದರ್ಭದೊಂದಿಗೆ ದೇವಸ್ಥಾನಕ್ಕೆ ಹೋಗುವಾಗ, ಕಾರಹುಣ್ಣಿಮೆಯಲ್ಲಿ ಕರಿ ಹರಿದ ಎತ್ತಿನ ಮೆರವಣಿಗೆ ಮಾಡುವಾಗ ಹೀಗೆ ಅನೇಕ ಸಂದರ್ಭಗಳಲ್ಲಿ ಹಲಗೆಯನ್ನು ಬಾರಿಸುವುದುಂಟು.

## ನಾಟಕ

ಆನೆಗೊಂದಿಯ ಜನತೆ ತಮ್ಮ ತಮ್ಮ ಕಷ್ಟಸುಖಗಳ ನಡುವೆ ನಾಟಕದ ಕಲೆಯನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಹಿಂದಿನಿಂದ ಇಂದಿನವರೆಗೆ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಇತ್ಯಾದಿ ನಾಟಕಗಳನ್ನು ಆಡಿ ಹೆಸರನ್ನು ಪಡೆದ ಕಲಾವಿದರು ಆನೆಗೊಂದಿಯಲ್ಲಿದ್ದಾರೆ. ಹಬ್ಬ, ಹರಿದಿನಗಳಲ್ಲಿ, ಸುಗ್ಗಿಯ ದಿನಗಳಲ್ಲಿ ನಾಟಕ ಆಡುತ್ತಾರಾದರೂ ಅಪರೂಪ. ರಂಗನಾಥ ಸ್ವಾಮಿಯ ಜಾತ್ರೆಯ ಅಂಗವಾಗಿ ಆಡುವುದೇ ಹೆಚ್ಚು. ನಾಟಕಗಳಿಗೆ ರಾಜಮನೆತನದವರಿಗೆ, ಊರಿನ ಪ್ರಮುಖರಿಗೆ ವಿಶೇಷ ಆಹ್ವಾನ ನೀಡಿ, ಅವರಿಂದಲೇ ನಾಟಕದ ಉದ್ಘಾಟನೆ ಮಾಡಲಾಗುತ್ತದೆ. ಪುರುಷ ಪಾತ್ರಗಳಲ್ಲಿ ಸ್ಥಳೀಯರೇ ನಟಿಸಿದರೆ, ಸ್ತ್ರೀ ಪಾತ್ರಗಳಿಗೆ ನಟನೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಇಳಕಲ್ ಮುಂತಾದ ಕಡೆಗಳಿಂದ ಸ್ತ್ರೀಯರನ್ನು ಕರೆತರಲಾಗುತ್ತದೆ. ಆನೆಗೊಂದಿಯ ಪ್ರಮುಖ ನಾಟಕ ಕಲಾವಿದರೆಂದರೆ ಎನ್.ರಾಮರಾಜು, ಬಿ.ಪ್ರಭಪ್ಪ, ಪಿ.ರಾಮರಾಜು, ಬಿ.ಕಣಿವೆಪ್ಪ, ಎಮ್.ನಾರಾಯಣಪ್ಪ, ಎನ್.ಪದ್ಮನಾಭರಾಜ, ಎಮ್.ನಜೀರ್‌ಸಾಹೇಬ್, ಪಿ.ರಾಘುವೇಂದ್ರ ಮುಂತಾದವರು. ಪ್ರದರ್ಶಿತವಾದ ನಾಟಕಗಳಲ್ಲಿ ಎಚ್ಚಮ ನಾಯಕ, ಯೋಗಶಕ್ತಿ, ಸ್ತ್ರೀ, ಜೀವನಯಾತ್ರೆ, ಆದರ್ಶಪ್ರೇಮ, ಸಮಾಜಸುಬೋದಯ, ಸೌಭಾಗ್ಯ ಲಕ್ಷ್ಮೀ, ವೀರ ಅಭಿಮನ್ಯು ಮುಂತಾದವು ಪ್ರಮುಖ ನಾಟಕಗಳಾಗಿವೆ.

## ಬಯಲಾಟ

ಇಂದಿನ ಸಿನಿಮಾದ ಬೇರುಗಳು ನಾಟಕಗಳಲ್ಲಿ ಕಾಣುತ್ತೇವೆ. ನಾಟಕಗಳ ಮೂಲವನ್ನು ಅರಸುತ್ತಾ ಹೋದರೆ ನಾವು ಹೋಗುವುದು ಬಯಲಾಟಕ್ಕೆ. ಜಾನಪದ ಲೋಕದ ವಿಶಿಷ್ಟ ಕಲೆ ಈ ಬಯಲ್ಲಾಟ. ಗ್ರಾಮೀಣ ಜನರ ಮನರಂಜನೆ ಮತ್ತು ಗ್ರಾಮೀಣ ಜನರ ಪ್ರತಿಭಾ ಪ್ರದರ್ಶನಕ್ಕೆ ಒಂದು ಉತ್ತಮ ವೇದಿಕೆ. ಬಯಲಲ್ಲಿ ಸಾಕಷ್ಟು ಜನ ಕುಳಿತುಕೊಳ್ಳಲು ಅವಕಾಶವಾಗುವಂತೆ ಆಡವಾಡುವುದರಿಂದ ಬಯಲಾಟವೆಂದು ಕರೆಯುತ್ತಾರೆ. ಗ್ರಾಮೀಣ ಜನರ ಆಕರ್ಷಕ ಕಲೆಯಾದ ಬಯಲಾಟ ಪ್ರದರ್ಶನವು ಆನೆಗೊಂದಿಯಲ್ಲಿ ಶಿವರಾತ್ರಿ ಸಮಯದಲ್ಲಿ, ಶ್ರೀರಂಗನಾಥಸ್ವಾಮಿ ಜಾತ್ರಾ ಸಮಯದಲ್ಲಿ ಹಾಗೂ ಇನ್ನಿತರ ಸಮಯಗಳಲ್ಲಿ ನಡೆಯುತ್ತದೆ. ಬಯಲಾಟದ ವೇದಿಕೆಗಾಗಿ ಬಂಡಿಗಾಲಿಗಳನ್ನು ಹೂಣಿ ಅಡ್ಡಲಾಗಿ ದೊಡ್ಡ ದೊಡ್ಡ ಬಲ್ಲೀಸುಗಳನ್ನು ಹಾಕಿ, ದಪ್ಪ ದಪ್ಪನೆಯ ಕಟ್ಟಿಗೆ ಮಣೆಗಳನ್ನು ಹಾಸುತ್ತಾರೆ. ಬಯಲಾಟದ ಕಥಾವಸ್ತುವು ವೀರ ಅಭಿಮನ್ಯು ಕಾಳಗ, ಬಾಣಾಪುರ, ಪಾಂಡು ವಿಜಯ, ಕಿರಾತಾರ್ಜುನೀಯ ಕಾಳಗ, ಕನಕಾಂಗಿ ಕಲ್ಯಾಣ, ರಥಿಕಲ್ಯಾಣ, ಪಾರ್ಥವಿಜಯ, ಅಶ್ವಮೇಧಯಾಗ, ಗಿರಿಜಾ ಕಲ್ಯಾಣ, ಪುರಾಣ ಪ್ರಸಂಗಗಳು ಮುಂತಾದವುಗಳಾಗಿರುತ್ತವೆ. ರಾತ್ರಿಯಿಂದ ಬೆಳಗಿನ ಜಾವದ ಕೆಲವೊಮ್ಮೆ ಸೂರ್ಯೋದಯವಾಗುವವರೆಗೂ ದೀರ್ಘವಾಗಿ ಆಟ ನಡೆಯುತ್ತದೆ. ಬಯಲಾಟದ ಪ್ರಮುಖ ನಟರಾಗಿ, ಆನೆಗೊಂದಿಯ ಶ್ರೀ ಬೋವಿ ಸಣ್ಣ ಭೀಮಪ್ಪ, ಎಸ್. ಸಿಂಗ್ರಪ್ಪ, ಎಂ. ಫಕೀರಪ್ಪ, ಮಡ್ನೇರ್ ಶೇಖರಪ್ಪ, ಕಲ್ಯಾಣಿ ಆಂಜನೇಯಲು, ಶೇಕ್ಸಾವಲಿ, ಸಿ.ಎಂ. ಮೌಲಪ್ಪ, ನರಸಾಪುರ

ಯಂಕಣ್ಣ ಗಮನಕ್ಕೆ ಬರುತ್ತಾರೆ. ಬಯಲಾಟದಲ್ಲಿ ಅನುಕರಣೆಯಿಲ್ಲ. ಇನ್ನೊಬ್ಬ ನಟನ ಪ್ರಭಾವ ಇಲ್ಲ. ಎಲ್ಲ ಕಲಾವಿದರ ಅಭಿನಯ ಎಂಜಲಲ್ಲ. ಶುದ್ಧ ಪರಿಶುದ್ಧ ಕಲೆ, ಹೃದಯದಿಂದ ಬಂದ ಅಭಿನಯ. ಬಯಲಾಟಕ್ಕೆ ಲಿಖಿತ ಪುಸ್ತಕಗಳಿಲ್ಲ. ಒಬ್ಬರಿಂದ ಮತ್ತೊಬ್ಬರು ಕಲಿತು ಕಲಿಸುವ ಬಯಲಾಟದ ನಿರ್ದೇಶಕರ ಸ್ಮರಣಶಕ್ತಿ ಅಗಾಧ. ಆಗಿನ ಕಾಲದಲ್ಲಿ ಕಲಾವಿದರಿಗೆ ತಿಂಗಳು ಗಟ್ಟಲೆ ತಾಲೀಮು ಮಾಡಿಸಿ, ಉತ್ತಮ ಅಭಿನಯ ಉದ್ದವಾದ ಸಂಭಾಷಣೆ ಚಾಚೂ ತಪ್ಪದೆ ಹೇಳಿಸುವ ಪ್ರಮೇಯವಿರುತ್ತದ. ಇವರ ಪ್ರತಿಭಗೆ ನಾವು ತಲೆ ಬಾಗಲೇಬೇಕು. ಕಿರೀಟಗಳು, ಭುಜಕಟ್ಟುಗಳು, ಮುಖ್ಯವಾಗಿ ಕುಣಿತಗಳು ಇವು ಬಯಲಾಟದ ಪ್ರಧಾನ ಅಂಶಗಳು. ಸಾರಥಿಯು ಪಾತ್ರ ಪರಿಚಯ ಮಾಡಿಕೊಡುವುದಲ್ಲದೆ ಹಾಸ್ಯ ಸಂಭಾಷಣೆಯಿಂದ ಪ್ರೇಕ್ಷಕರನ್ನು ನಗೆಗಡಲಲ್ಲಿ ತೇಲಿಸುತ್ತಾನೆ, ತಾಳ, ಮದ್ದಳೆ, ಪೇಟಿ, ಮೃದಂಗ ಮುಂತಾದವುಗಳು ವಾದ್ಯ ಪರಿಕರಗಳು, ಪಾತ್ರದ ಜೊತೆಗೆ ಪಕ್ಕದಲ್ಲೇ ನಿಂತ ಹಿಮ್ಮೇಳದವರು ಹಾಡನ್ನು ಹಾಡುತ್ತಾರೆ. ಈಗ ಟಿ.ವಿ. ಜಗತ್ತಿನ ದಾಳಿಯಿಂದಾಗಿ ಜನರಿಗೆ ಬಯಲಾಟ, ನಾಟಕದ ಬಗ್ಗೆ ಆಸಕ್ತಿ ಕಡಿಮೆಯಾಗುತ್ತಿರುವುದು ಕಂಡುಬರುತ್ತಿದೆ.

**ಕೊಂಡಮಾಮಗಳು**

ಆನೆಗೊಂದಿ ಪರಿಸರದಲ್ಲಿ ಅನೇಕ ಜನ ಕೊಂಡಮಾಮಾಗಳು ಕಾಣಸಿಗುತ್ತಾರೆ. ಮುಡಿಗೆ ನವಿಲುಗರಿ, ಕೊರಳಿಗೆ ಮಣಿಸರ, ತೋಳುಗಳಿಗೆ ಲೋಹದ ಬಳೆ, ಕಿವಿಗೆ ದೊಡ್ಡದಾದ ಕುಂಡಲ, ಸೊಂಟಪಟ್ಟಿ ಮುಳ್ಳು ಹಂದಿಯ ಮುಳ್ಳುಗಳನ್ನು ಸಿಕ್ಕಿಸಿಕೊಂಡಿರುವ ಇವರು ಭವಿಷ್ಯ ಹೇಳುತ್ತಾರೆ. ನಾವು ಇತಿಹಾಸ ಕಾಲದಿಂದಲೂ ಈ ಪರಿಸರದಲ್ಲಿ ಸಂಚರಿಸುತ್ತಿದ್ದೇವೆಂದು ಹೇಳುತ್ತಾರೆ. ಈಗಲೂ ಆನೆಗೊಂದಿಯಲ್ಲಿ ವಾಸಿಸುತ್ತಿದ್ದಾರೆ.

**ಬಸವನಾಟ**

ಆನೆಗೊಂದಿ ಪರಿಸರದಲ್ಲಿ ಕೋಲೆ ಬಸವನಾಟದ ಕಲಾವಿದರಿದ್ದಾರೆ. ಇವರನ್ನು ಗಂಗತ್ತಿನವರೆಂದು ಕರೆಯಲಾಗುತ್ತದೆ. ಇವರು ಶಿವಪಾರ್ವತಿಯರ ಮದುವೆಯನ್ನು ಒಂದು ಎತ್ತು ಮತ್ತು ದನದ ಮೂಲಕ ಮೂಡಿಸಿ ತೋರಿಸುತ್ತಾರೆ. ಪಾರ್ವತಿಯ ತಪಸ್ಸಿನ ಸಂದರ್ಭದಲ್ಲಿ ಭಿಕ್ಷುಕನ ವೇಷ ಧರಿಸಿ ಬಂದ ಶಿವನನ್ನು, ಪಾರ್ವತಿಯೇ ಬೈದು ಬಿಡುವ ಸಂದರ್ಭವನ್ನು ಇವರು ಬಹಳ ಮನೋಜ್ಞವಾಗಿ ಆಡಿ ತೋರಿಸುತ್ತಾರೆ.

**ಚೌಡಿಕೆಯರು**

ಚೌಡಿಕೆ ನುಡಿಸುವ ಜೋಗಯ್ಯ ಮತ್ತು ಜೋಗತಿಯರು ಆನೆಗೊಂದಿಗೆ ಭೇಟಿ ನೀಡುತ್ತಾರೆ. ಎಲ್ಲಮ್ಮರ, ಹುಲಿಗೆಮ್ಮ, ಗಾಳೆಮ್ಮನ ಕತೆ ನಿರೂಪಿಸುತ್ತಾ ಜೋಗ ಜೋಗತಿಯರು ಮನೆ ಮನೆಗೆ ತೆರಳಿ ಧಾನ್ಯ, ಹಣವನ್ನು ಭಿಕ್ಷೆ ರೂಪದಲ್ಲಿ ಪಡೆಯುತ್ತಾರೆ. ಕೆಲವೊಮ್ಮೆ ಜನರನ್ನು ತುಂಬಾ ಕಾಡಿ ಬೇಡಿ ಹಣ ಪಡೆಯುತ್ತಾರೆ. ನಪುಂಸಕರಾದವರು ಜೋಗತಿ, ಜೋಗಮ್ಮನ ದೀಕ್ಷೆ ಪಡೆಯುವುದುಂಟು.

## ಸವಾಲ್ ಪದಗಳು

ಆನೆಗೊಂದಿಯಲ್ಲಿ ಕೆಲವರು ವಿಶೇಷವಾಗಿ ಸವಾಲ್ ಪದಗಳನ್ನು ಹಾಡುವುದರಲ್ಲೇ ಪರಿಣತಿಯನ್ನು ಪಡೆದಿದ್ದಾರೆ. ಅವರಲ್ಲಿ ಟಿ. ಅಯ್ಯತ್‌ಸಾಬ್, ಬಿ. ಕೊಮಾರೆಪ್ಪನವರು ಪ್ರಮುಖರಾಗಿ ಗೋಚರಿಸುತ್ತಾರೆ. ಇವರು ಹಾಡುವ ಹಾಡುಗಳನ್ನು ಕರ್ಬಲ ಹಾಡುಗಳೆಂದು ಕರೆಯುತ್ತಾರೆ. ಇವರು ಪೈಗಂಬರನ ಹಾಡುಗಳನ್ನು ಹಾಡುವುದರ ಜೊತೆಗೆ ಆನೆಗೊಂದಿ, ವಿಜಯನಗರ ಇತಿಹಾಸದ ಬಗೆಗೆ, ಶರಣರ ಬಗೆಗೆ ಹಾಡುತ್ತಾರೆ. ತತ್ವಪದಗಳನ್ನು ಇನ್ನೂ ಅನೇಕ ಪ್ರಸಂಗಗಳ ಪದಗಳನ್ನು ಹಾಡುತ್ತಾರೆ.

## ಡೊಳ್ಳಿನವರು

ಡೊಳ್ಳಿನ ಧ್ವನಿ ಶಿವನಿಗೆ ಪ್ರಿಯವಾದುದು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಆನೆಗೊಂದಿಯ ಅನೇಕ ಧಾರ್ಮಿಕ ಸಮಾರಂಭಗಳಲ್ಲಿ ಡೊಳ್ಳು ಬಾರಿಸುತ್ತಾ ಕುಣಿಯುತ್ತಾರೆ. ಮಲ್ಲಾಪುರ, ಮಲಪನಗುಡಿ, ಅಂಚಿನಗುಡಿ ಕಡೆಗಳಿಂದ ಇಲ್ಲಿ ಡೊಳ್ಳು ನುಡಿಸುವ ಕಲಾವಿದರು ಬರುತ್ತಾರೆ. ಕೆಲವು ನಿರೂಪಕರು ನಮ್ಮ ಹಿರಿಯರು ಹಿಂದಿನ ಕಾಲದಲ್ಲಿ, ಯುದ್ಧಗಳಲ್ಲಿ ಡೊಳ್ಳು ಬಾರಿಸುತ್ತಿದ್ದರು ಎಂದು ಹೇಳುತ್ತಾರೆ. ಕುರುಬರು ವಿಶೇಷವಾಗಿ ಡೊಳ್ಳಿನ ಹರಕೆಯಲ್ಲಿ ಭಾಗವಹಿಸುತ್ತಾರೆ.

## ವೇಷಗಾರರು

ಆನೆಗೊಂದಿ ಪರಿಸರದಲ್ಲಿ ಪ್ರತಿವರ್ಷ ಸುಗ್ಗಿಯ ದಿನಗಳಲ್ಲಿ ವೇಷಗಾರರು ಮನೆಮನೆಗೆ ಹೋಗಿ ಪ್ರದರ್ಶನ ನಡೆಸುತ್ತಾರೆ. ವೃತ್ತಿ ಕಲಾವಿದರಾದ ಇವರನ್ನು ಬಹುರೂಪಿಗಳೆಂದೂ ಕರೆಯುತ್ತಾರೆ. ತೆಲುಗು ಮಾತನಾಡುವ ಇವರು ಆಂಧ್ರಮೂಲದವರೆಂದು ಹೇಳಿಕೊಳ್ಳುತ್ತಾರೆ. ಶ್ರೀಶೈಲವನ್ನು ತಮ್ಮ ಧರ್ಮಕ್ಷೇತ್ರವೆಂದು ನುಡಿಯುತ್ತಾರೆ. ಎರಡು ಮೂರು ಕುಟುಂಬಗಳು ಸೇರಿ ಬೀದಿ ನಾಟಕಕ್ಕಾಗಿ ಊರೂರು ಅಲೆಯುತ್ತಾರೆ. ಸೋಗು ಧರಿಸಿಕೊಂಡು ಹೋಗುವ ಕಲಾವಿದರೆಲ್ಲ ಗಂಡಸರು. ಸ್ತ್ರೀ ಪಾತ್ರವನ್ನೂ ಸಹ ಗಂಡಸರೇ ಮಾಡುತ್ತಾರೆ. ರಾಮಾಯಣ, ಸ್ತ್ರೀ ಪಾತ್ರವನ್ನೂ ಸಹ ಗಂಡಸರೇ ಮಾಡುತ್ತಾರೆ. ರಾಮಾಯಣ, ಮಹಾಭಾರತ ಐತಿಹಾಸಿಕ ಮುಂತಾದ ಪ್ರಸಂಗಗಳ ವೇಷ ಧರಿಸಿ ಮನೆ ಮನೆಗೆ ಪ್ರದರ್ಶನ ನೀಡಿ ಕೊನೆಯ ದಿನ ಪ್ರತಿಯೊಂದು ಮನೆಯಿಂದ ಹಣ, ಧಾನ್ಯ, ವಸ್ತ್ರ, ದನ ಇತ್ಯಾದಿ ಪಡೆಯುತ್ತಾರೆ. ದೃಶ್ಯವು ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಎಂಬ ಅಭಿನಯ ಚತುರ್ಥಗಳನ್ನೊಳಗೊಂಡಿರುತ್ತದೆ. ಸಾಮಾನ್ಯವಾಗಿ ಸ್ತ್ರೀ ಪಾತ್ರಕ್ಕೆ ನೃತ್ಯವು ಸೀಮಿತ. ಸಾಮಾನ್ಯವಾಗಿ ಎಲ್ಲರೂ ಹಾಡುತ್ತಾರೆ, ಎಲ್ಲರೂ ವಾದ್ಯ ನುಡಿಸುತ್ತಾರೆ.

## ಡೊಂಬರು

ಇತಿಹಾಸ ಕಾಲದಿಂದಲೂ ಡೊಂಬರು ಆನೆಗೊಂದಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಡೊಂಬರು, ಪಾತರದವರ ಕೆಲವು ಸ್ತ್ರೀಯರು ರಾಜ ಮರ್ಯಾದೆಗಳನ್ನು ಪಡೆದುಕೊಂಡು ರಾಜ ನರ್ತಕಿಯರಾಗಿದ್ದು, ಪ್ರದರ್ಶನ ಕಲೆಗಳನ್ನು ನಂಬಿ ಬದುಕುವ ಸಮುದಾಯವಾಗಿ ಒಂದು ಕಾಲಘಟ್ಟದಲ್ಲಿಯೇ ಬೆಳಕಿಗೆ ಬಂದವರು.

ಆನೆಗೊಂದಿಯ ಗಗನಮಹಲ್‌ನ ಮುಂಭಾಗದಲ್ಲಿ ರಾಜ, ರಾಣಿಯರು ಪ್ರಜೆಗಳ ಸಮ್ಮುಖದಲ್ಲಿ ಮನರಂಜನೆಗಾಗಿ ಡೊಂಬರ ಕಲೆ ಪ್ರದರ್ಶನಗೊಳ್ಳುತ್ತಿದ್ದವೆಂಬುದು ಸ್ಥಳೀಯ ಅಭಿಪ್ರಾಯ.

**ಆನೆಗೊಂದಿಯ ಮ್ಯಾಲೆ ಆಡ್ಯಾಳೆ ಡೊಂಬತಿ**
**ನೋಡ ಬಂದಣ್ಣ ಉಣವೋಳಕ್ಕಯ್ಯ**
**ವಿದ್ಯೆದಕ್ಕ ತದ್ದಿನಿತೋಂ**

ಮೇಲಿನ ಹಾಡಿನಲ್ಲಿ ಆನೆಗೊಂದಿಯಲ್ಲಿ ಹಾಡಿ ನರ್ತಿಸುವ ಡೊಂಬತಿಯ ಬಗ್ಗೆ ವಿವರವಿದೆ. ಕಂಪಿಲಿಯ ಇತಿಹಾಸವನ್ನು ತಮ್ಮದೇ ಇತಿಹಾಸವೆಂದು ಭಾವಿಸುವ ಡೊಂಬರು, ಡೊಂಬರ ಹಬ್ಬ ಆಚರಿಸುತ್ತ ಕುಮಾರರಾಮನ ಕತೆಯನ್ನು ಅಭಿನಯಿಸಿ ತೋರಿಸುತ್ತಾರೆ. ಹಬ್ಬದಲ್ಲಿ ಬಳಕೆಯಾಗುವ ಶೂಲದ ಮರವನ್ನು ರತ್ನಾಜಿ ಎಂದು ಭಾವಿಸಲಾಗುತ್ತದೆ. ಸಿದ್ಧರ ಕಳಸವೇ ಕುಮಾರರಾಮನಂತೆ ಹಾಗೆಯೇ ಕುದುರೆಯ ಮುಖವಾಡವು ಕುಮಾರರಾಮನ ಪ್ರೀತಿಯ ಕುದುರೆಯಾದ ಬೊಲ್ಲನನ್ನು ಸಂಕೇತಿಸುತ್ತಿದ್ದಂತೆ, ದೊಂಬರಾಟದಲ್ಲಿ ಮನರಂಜಕ ಕುಣಿತಗಳೂ, ಕಸರತ್ತುಗಳೂ ಇರುತ್ತವೆ. ರಾಜರುಗಳು ಡೊಂಬತಿಯರನ್ನು ಮದುವೆಯಾದರಂತೆ. ಆದಕಾರಣ ಇವರು ಇಲ್ಲಿಯ ಇತಿಹಾಸದೊಂದಿಗೆ ಪ್ರೇಮ ಮೂಲವಾದ ಸಂಬಂಧವಿರಿಸಿಕೊಂಡಿದ್ದಾರೆ ಎಂಬುದು ಸ್ಥಳೀಯರ ಅನಿಸಿಕೆಯಾಗಿದೆ.

**ಮೋಡಿಯಾಟ**

ಮೋಡಿಯಾಟವು ಆನೆಗೊಂದಿ ಪರಿಸರದಲ್ಲಿ ಆಗಾಗ ಪ್ರದರ್ಶನಗೊಳ್ಳುತ್ತಿರುತ್ತದೆ. ಈ ಮೋಡಿಯಾಟ ಆಡುವ ಜನರು ತಾವು ಬಹಳ ಹಿಂದಿನಿಂದಲೂ ಅಂದರೆ ರಾಜಮಹಾರಾಜರ ಕಾಲದಿಂದಲ್ಲೂ ಈ ಆಟವನ್ನು ಆಡುತ್ತಾ ಬಂದಿದ್ದೇವೆ ಎಂದು ಹೇಳುತ್ತಾರೆ. ಆನೆಗೊಂದಿಯ ಅರಸರು, ವಿಜಯನಗರದ ಅರಸರು ಮೋಡಿಯಾಟದ ಜನರನ್ನು ತಮ್ಮ ಮನರಂಜನೆಗಾಗಿ ಇರಿಸಿಕೊಂಡಿದ್ದರೆಂದು ಹೇಳಲಾಗುತ್ತದೆ. ಗೊಲ್ಲರು, ಬೇಡರು ಹೆಚ್ಚಾಗಿ ಮೋಡಿಯಾಟವಾಡುತ್ತಾರೆ. ಮೋಡಿಯಾಟದವರು ಆಂಧ್ರದ ಮೂಲದವರೆಂದು ಇನ್ನೂ ಇತ್ಯಾದಿ ಕತೆಗಳು ಇವರ ಬಗೆಗಿವೆ. ಮೋಡಿಯಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ ರಾಜಮೋಡಿ, ಮತ್ತು ರಣಮೋಡಿ. ರಾಜಮೋಡಿ ಕೇವಲ ಮನರಂಜನೆಗಾಗಿ ಮೀಸಲಾದರೆ ರಣಮೋಡಿಯು ಮನರಂಜನೆಯ ಜೊತೆಗೆ ಎದುರಾಳಿಯನ್ನು ಗೆಲ್ಲುವ ಸ್ಪರ್ಧೆಯಾಗಿರುತ್ತದೆ. ಸುಗ್ಗಿ ಕಾಲದಲ್ಲಿ ಇಂತಹ ಪ್ರದರ್ಶನಗಳು ನಡೆಯುವುದುಂಟು. ಮೋಡಿಕಾರರು ಸಾಮಾನ್ಯವಾಗಿ ತಲೆಗೆ ಕೆಂಪು ವಸ್ತ್ರದ ಪೇಟ ಸುತ್ತಿರುತ್ತಾರೆ. ಅರ್ಧ ತೋಳಿನ ಅಂಗಿ, ಮೇಲೊಂದು ವಾಸ್ ಕೋಟು, ಕೆಂಪು ವಸ್ತ್ರದ ನಡುಕಟ್ಟು ಕಟ್ಟಿರುತ್ತಾರೆ. ಕಾಲಿಗೆ ಪ್ಯಾಂಡೆಯನ್ನು ಹಾಕಿರುತ್ತಾರೆ.

ಮೋಡಿ ಪ್ರತಿಮೋಡಿ ಹಾಕುವವರು ಊರಿನ ಪ್ರಮುಖರ ಒಪ್ಪಿಗೆ ಪಡೆದು ಆಟ ಆಡುತ್ತಾರೆ. ಈ ಆಟವು ಅತ್ಯಂತ ಅದ್ಭುತ, ಭಯಾನಕ, ಆಶ್ಚರ್ಯವನ್ನುಂಟು ಮಾಡುವ ರೀತಿಯಲ್ಲಿರುತ್ತದೆ.

ನಂಬಲಸಾಧ್ಯವಾದ ರೀತಿಯಲ್ಲಿ ಪ್ರದರ್ಶನಗಳು ದಿನಗಟ್ಟಲೆ ನಡೆಯುತ್ತವೆ. ಮೋಡಿಯ ಸತ್ಯಾಸತ್ಯತೆ ಏನೇ ಇರಲಿ. ಅದು ಜನರಲ್ಲಿ ರೋಮಾಂಚನ ಹುಟ್ಟಿಸುತ್ತದೆ. ಜನರ ಮಧ್ಯೆ ಅದು ಅತ್ಯಂತ ಜನಪ್ರಿಯವಾಗಿದೆ.

**ಗೊಂದಲಿಗರು**

ಹೋಲಿದಾಸರು, ಮಟ್ಟಿದಾಸರು, ಗರುಡದಾಸ ಮೊದಲಾದವರು ಭಜನೆ, ಹರಿಕೀರ್ತನೆಯನ್ನು ಮಾಡುತ್ತ, ಕಥೆಯನ್ನು ಹೇಳುತ್ತ, ಹಾಡನ್ನು ಹಾಡುತ್ತ ಈ ಪ್ರದೇಶದಲ್ಲಿ ಅಲೆದಾಡುತ್ತಾರೆ. ಇವರು ಶಿವನನ್ನು, ಶಕ್ತಿಯನ್ನು ತಮ್ಮ ದೇವತೆಯೆಂದು ಪೂಜಿಸಿ, ಹಾಡಿ ಕಥೆಯನ್ನು ಹೇಳುತ್ತಾರೆ. ಇವರ ಕಥನ ಕವನಗಳು ಸಾಮಾನ್ಯವಾಗಿ ಈಶ್ವರ, ಮಹಾದೇವ, ಹರಿಹರ, ಶಿವ, ಕುಮಾರರಾಮ, ಶಿವಲಿಂಗ ಎಂಬ ದೇವರನ್ನೊಳಗೊಂಡ ಕಥೆಗಳೇ ಹೆಚ್ಚು. ಬಿಡಿ ಬಿಡಿ ಹಾಡುಗಳು ಶಕ್ತಿ, ಭೈರವಿ, ಕಾಳಿ, ದುರ್ಗಿ, ಭವಾನಿ ಮೊದಲಾದ ದೇವತೆ ಸ್ತುತಿಗಳಾಗಿರುತ್ತವೆ. ವಿಜಯನಗರದ ಕಾಲದಲ್ಲಿ ಮನರಂಜನೆಗಾಗಿ ಗೊಂದಲವನಾಡಿಸುತ್ತಿದ್ದರೆಂದು ತಿಳಿದುಬರುತ್ತದೆ. ಗೊಂದಲಿಗರು ಉಪಯೋಗಿಸುವ ವಾದ್ಯಗಳು ತಂತಿ, ಸಂಬಾಳ, ತಾಳ ಮೊದಲಾದವುಗಳು. ದಿಮತೋಮ್, ಧಿತ್ತೈ, ಕಣಿಕಡತ್ಯೆ ಎಂದು ತಾಳ ಬಾರಿಸುತ್ತ ಹಾಡುತ್ತಾರೆ. ಸಾಮಾನ್ಯವಾಗಿ ಶ್ರಾವಣಮಾಸದಲ್ಲಿ ಇವರು ಆನೆಗೊಂದಿಯಲ್ಲಿ ಕಥನ ಕವನವನ್ನು ಹೇಳುತ್ತಾರೆ. ಯಾವ ಹಾಡುಗಬ್ಬವೇ ಇರಲಿ, ಹರಕೆಯೊಂದಿಗೆ ಮುಕ್ತಾಯ ಮಾಡುತ್ತಾರೆ. ಟಿ.ವಿ. ಹಾವಳಿ ಹೆಚ್ಚಾದ ಮೇಲೆ ಇವರ ಕಥೆ ಕೇಳೋದು ತುಂಬಾ ಕಡಿಮೆಯಾಗಿದೆ. ಈಗೀಗ ಇವರನ್ನು ಕರೆಸೋದು ಕಡಿಮೆ ಎಂದು ಆನೆಗೊಂದಿ ಜನರು ಹೇಳುತ್ತಾರೆ..

**ದುರಗ ಮುರಗಿಯರು**

ದುರಗ ಮುರುಗಿಯರು ತಿರುಗದ ಹಳ್ಳಿಯೇ ಇಲ್ಲ. ಇವರು ಮಾರಮ್ಮನ ಭಕ್ತರು,ದುರುಗಮ್ಮನ ಪೂಜಾರಿಯರೆಂದು ಹೇಳಿಕೊಳ್ಳುತ್ತಾರೆ. ದುರುಮುರ್ ದುರುಮುರ್ ಎಂದು ಬಾರಿಸುತ್ತಾ ತಮ್ಮ ಓಣ್ಯಾಗ ಬಂದಾಳು ಭಕ್ತರು ದೀಪಾ ಕೊಟ್ಟಾರು ದೂಪ ಕೊಟ್ಟಾರು ಮುಡುಪು ಕೊಟ್ಟಾರು ಎಂದು ಹಾಡಿ ನಡು ಓಣಿಗೆ ಬಂದು ದುರುಗಮ್ಮನ ಪೆಟ್ಟಿಗೆ ಇಳಿಸುತ್ತಾರೆ. ಸಂಗಾತಿ ಡೊಳ್ಳು ಬಾರಿಸುತ್ತಾರೆ. ದೇವತೆಸ್ತುತಿ ಮಾಡಿ ಹರಕೆ, ಭಿಕ್ಷೆ ಕೊಡಲು ಕೋರುತ್ತಾರೆ. ದೇವಿಯು ರೌದ್ರವತಾರ ಮಾಡಿ ತೋರಿಸಿ ಭಿಕ್ಷೆ ಹರಕೆ ಪಡೆಯುತ್ತಾರೆ. ಸಾಮಾನ್ಯವಾಗಿ ದುರುಗ ಮುರುಗಿ ಕಾಯ ಬಲಿಷ್ಟವಾಗಿರುತ್ತದೆ. ವೇಷಭೂಷಣಗಳು ಭಯಾನಕ. ಇವರ ಆಕಾರಕ್ಕೆ ಚಿಕ್ಕಮಕ್ಕಳು ಅಂಜಿ ಮನೆಯೊಳಕ್ಕೆ ಸೇರುವುದುಂಟು. ಈ ಭಾಗದಲ್ಲಿ ಇವರಿಗೆ ದುರುಗಮ್ಮನ ಆಡಿಸೋರು ಎಂದೂ ಕರೆಯುತ್ತಾರೆ.

**೫.೭. ಕ್ರೀಡೆಗಳು**

ಒಂದು ಜನಾಂಗದ ಅಥವಾ ಒಂದು ಗ್ರಾಮದ ಬೆಳವಣಿಗೆಯನ್ನು, ಬದುಕನ್ನು, ಮನರಂಜನೆಯನ್ನು ತಿಳಿಯಬೇಕಾದರೆ ಕ್ರೀಡೆಗಳ ಕುರಿತಾಗಿ ಅರಿಯಬೇಕಾಗುತ್ತದೆ. ಪ್ರಪಂಚದಲ್ಲಿ ವಾಸಿಸುವ ಜೀವಿಗಳಿಗೆ ಜಾನಪದ ಕ್ರೀಡೆಗಳು ನೈಸರ್ಗಿಕವಾಗಿ ಬಂದ ಆಸ್ತಿಗಳಾಗಿವೆ. ಆಟವಾಡುವುದು ಜೀವಿಗಳ ನೈಸರ್ಗಿಕ ಕ್ರಿಯೆ. ಆಟ

ಹುಟ್ಟಿನಿಂದ ಬಂದ ಪ್ರವೃತ್ತಿ. ಅದು ಜೀವಂತಿಕೆಯ ಪ್ರತೀಕ. ಮನುಷ್ಯನಿಗೆ ಆಟಗಳು ಮನರಂಜನೆ, ಮಾನಸಿಕ ಮತ್ತು ಬೌದ್ಧಿಕ ಉಲ್ಲಾಸ ನೀಡುವ ಸಹಜ ಪ್ರವೃತ್ತಿಯಾಗಿದೆ. ಆಟಗಳು ಮನಸ್ಸಿಗೆ ಅನುಗುಣವಾಗಿ ಬೇರೆ ಬೇರೆ ಹಂತವನ್ನು ಪಡೆದಿವೆ. ಸಹನೆ, ಕಷ್ಟ, ಸಹಿಷ್ಣುತೆ, ಯುಕ್ತಿ, ಐಕ್ಯ ಮನೋಭಾವನೆ, ಭ್ರಾತೃತ್ವ, ಸಹಕಾರ ಮನೋಧರ್ಮ ಮೊದಲಾದ ಗುಣಗಳು ಕ್ರೀಡೆಗಳ ಫಲವಾಗಿ ವರ್ಧಿಸುತ್ತವೆ. ಋತುಮಾನವನ್ನಾಧರಿಸಿ ಶಾಲಾ ಮಕ್ಕಳನ್ನು ಹೊರತುಪಡಿಸಿ ಮಕ್ಕಳು ವರ್ಷಪೂರ್ತಿ ಒಂದಲ್ಲ ಒಂದು, ಹೊಸ ಆಟ ಆಡುತ್ತಿರುತ್ತಾರೆ. ಆದರೆ ದೊಡ್ಡವರ ಆಟಗಳಿಗೆ ಜೀವಂತಿಕೆ ಬರುವುದು ಬೇಸಿಗೆ ಬಿಡುವಿನ ಒಂದೆರಡು ತಿಂಗಳಲ್ಲಿ ಮಾತ್ರ, ಅದರಿಂದ ದೊಡ್ಡವರಿಗಿಂತ ಚಿಕ್ಕವರ ಆಟಗಳು ಹೆಚ್ಚು ವೈವಿಧ್ಯಮಯ ಹಾಗೂ ಅಧಿಕವಾಗಿದ್ದು, ಕಲ್ಪನೆ, ಸೃಜನಾತ್ಮಕತೆಗಳಿಂದ ಕೂಡಿರುವುದು ಉಂಟು. ದೊಡ್ಡವರ ಆಟಗಳು ಜೂಜು ಮನೋಭಾವದಿಂದ, ನೀರಸತೆ ಹೊಂದಿರುವುದೂ ಉಂಟು.

ಒಟ್ಟಿನಲ್ಲಿ ಕ್ರೀಡೆಗಳಲ್ಲಿ ಗುಂಪು ಆಟಗಳೇ ಅಧಿಕ ಮತ್ತು ಕಾಲಮಾನಕ್ಕನುಗುಣವಾಗಿ ಮಹಿಳೆಯರು ಮತ್ತು ಪುರುಷರು ಸಹ ಆಡುವುದುಂಟು. ಮಹಿಳೆಯರು ಮತ್ತು ಪುರುಷರು ಸಹ ಆಡುವುದುಂಟು. ಆನೆಗೊಂದಿಯ ಜನಪದರ ಕ್ರೀಡೆಗಳನ್ನು ಅಧ್ಯಯನದ ದೃಷ್ಟಿಯಿಂದ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ.

**೧. ಮಕ್ಕಳ ಕ್ರೀಡೆಗಳು, ೨. ವಯಸ್ಕರ ಕ್ರೀಡೆಗಳು, ೩. ಸ್ತ್ರೀಯರ ಕ್ರೀಡೆಗಳು**

ಆಧುನಿಕ ಬದುಕಿನ ದಾಳಿಗೆ ಒಳಗಾದ ಜನಪದರ ಬದುಕಿನಲ್ಲಿ ಮನರಂಜನೆ ಕೊಡುವಂತಹ ಆಟಗಳು ಮಾಯವಾಗತೊಡಗಿವೆ. ಆದಾಗ್ಯೂ ತನ್ನದೇ ಆದ ಕೆಲವು ಆಟಗಳನ್ನು ಇನ್ನೂ ಉಳಿಸಿಕೊಂಡು ಬಂದಿದ್ದಾರೆ. ಆನೆಗೊಂದಿ ಪರಿಸರದಲ್ಲಿ ಹಿಂದೆ ಇದ್ದ ಮತ್ತು ಈಗ ಇರುವ ಆಟಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

### ಮಕ್ಕಳ ಕ್ರೀಡೆಗಳು

ಆನೆಗೊಂದಿಯಲ್ಲಿರುವ ಆಟಗಳೆಂದರೆ ಕಳ್ಳ ಪೋಲೀಸ್ ಆಟ, ಸ್ಟ್ಯಾಚ್ಯೂ ಆಟ, ಲಗೋರಿ, ಕಣ್ಣುಮುಚ್ಚಾಲೆ ಆಟ, ಚಿನ್ನಿದಾಂಡು (ಚಿಣಿಪಿಣಿ), ಮರಕೋತಿ ಆಟ, ಹಗ್ಗದ ಆಟ, ಬುಗರಿ, ಗೋಲಿ, ಹಿಟ್ಟಿನಗೋಲಿ, ಸಿಮೆಂಟ್‌ಗೋಲಿ, ಕಡ್ಡಿಪೆಟ್ಟಿಗೆ ಆಟ ಹೀಗೆ ಇನ್ನು ಮುಂತಾದ ಆಟಗಳು ಈ ಗ್ರಾಮದಲ್ಲಿವೆ.

### ಪುರುಷರ ಕ್ರೀಡೆಗಳು

ಕುಸ್ತಿ, ಉಡೋಮ್, ಅಟ್ಟಮುರಿ ಆಟ, ಸಗ್ಗದ ಆಟ, ಕಾಲ್ಚೆಂಡು ಆಟ, ಗಜಗದ ಆಟ, ಅಳ್ಳಿಬತ್ತಿ ಆಟ, ಕಬಡ್ಡಿ (ಉಡದಿ), ಹುಸುಕಿನ ಚೀಲ, ಹುಳ್ಳಿ ಚೀಲ ಹೊರುವದು, ರುಬ್ಬುವಗುಂಡು ಹೊರುವ ಆಟ, ಒಟ್ಟದ ಕಂಬದಾಟ, ನಿಂಬೆಹಣ್ಣಿನಾಟ, ಮುಂಗೈ, ತೆಂಗಿನಕಾಯಿ ಆಟ, ಚೌಕಾಬಾರಾ, ಖೊ ಖೊ, ಹುಲಿಮನಿ ಮುಂತಾದ ಆಟಗಳು ಈ ಪ್ರದೇಶದಲ್ಲಿವೆ.

### ಸ್ತ್ರೀಯರ ಆಟಗಳು

ರಾಯನ ಮಗಳಾಟ, ಕುಂಟಾಬಿಲ್ಲೆ, ಹಗ್ಗದ ಆಟ, ಬಟಗುಣಿ (ಗಟಗುಣಿ), ಚೌ ಆಟ, ಮುಂತಾದವುಗಳು. ಇವುಗಳಲ್ಲಿ ಕೆಲವು ಆಟಗಳನ್ನು ಇಲ್ಲಿ ವಿವರಿಸಲಾಗಿದೆ.

**ಕೆಲವು ಪ್ರಮುಖ ಆಟಗಳ ಸ್ವರೂಪ**

**ಸಗ್ಗದ ಆಟ :** ಸಾಮಾನ್ಯವಾಗಿ ಬೆಳದಿಂಗಳಲ್ಲಿ ಆಡುವ ದೊಡ್ಡವರ ಆಟ (ಪುರುಷರ) ಇದಾಗಿದೆ. ನೆಲದ ಮೇಲೆ ಚೌಕಾಕಾರದಲ್ಲಿ ಒಂದಕ್ಕೊಂದು ಹೊಂದಿಕೊಂಡಂತೆ ನಾಲ್ಕು ನಾಲ್ಕು ಮನೆಗಳಂತೆ ಒಟ್ಟು ಎಂಟು ಮನೆಗಳನ್ನು ಬರೆದು, ಪರ ವಿರೋಧಿ ಎರಡು ಗುಂಪುಗಳಲ್ಲಿ ಎಂಟು ಮನೆಗಳಲ್ಲಿ ಉಪ್ಪುದಾಟುವ ಪದ್ಧತಿಯನ್ನು ಸಾರ ಆಡುತ್ತಾರೆ. ಇಲ್ಲಿ ನಿಜವಾಗಿಯೂ ಉಪ್ಪು ದಾಟಬೇಕಾಗಿಲ್ಲ. ಅದು ಸಾಂಕೇತಿಕವಷ್ಟೆ. ಚೌಕಾಕಾರದ ಮನೆಗಳಲ್ಲಿ ಎರಡು ಗುಂಪುಗಳನ್ನು ಒಬ್ಬರನ್ನೊಬ್ಬರು ಮುಟ್ಟಲು, ಪ್ರಯತ್ನಿಸುತ್ತಾರೆ. ಹಿಡಿಯಲು ಪ್ರಯತ್ನಿಸುವ ಹುದ್ದರಿಯು ವಿರೋಧಿ ಗುಂಪನ್ನು ಮುಟ್ಟಿದರೆ ಅವನು ಸೋತಂತೆ. ಇದೇ ರೀತಿ ವಿರೋಧಿ ಗುಂಪಿನ ಎಲ್ಲಾ ಆಟಗಾರರನ್ನು ಸೋಲಿಸಬೇಕಾಗುತ್ತದೆ. ಎಲ್ಲರನ್ನು ಸೋಲಿಸಿದ ನಂತರ ವಿರೋಧಿ ಗುಂಪು ಇದೇ ರೀತಿಯಲ್ಲಿ ಎದುರಿನ ಹುದ್ದರಿಯನ್ನು ಸೋಲಿಸಬೇಕಾಗುತ್ತದೆ.

**ಕುಸ್ತಿ :** ಕುಸ್ತಿ ಇದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವ ಕ್ರೀಡೆ. ಇದಕ್ಕೆ ಮಲ್ಲಯುದ್ಧವೆಂತಲೂ ಕರೆಯುತ್ತಾರೆ. ೬೪ ವಿದ್ಯೆಗಳಲ್ಲಿ ಶೌರ್ಯಕಲೆ. ಐತಿಹಾಸಿಕ ಗಗನ ಮಹಲ್‌ನ ಮುಂಭಾಗವು ಕುಸ್ತಿಯ ಅಖಾಡವಾಗಿತ್ತೆಂಬುದು ಸ್ಥಳೀಯರ ಅಭಿಪ್ರಾಯ. ಅಂದು ರಾಣಿಯರ ಪ್ರಜೆಗಳ ಸಮ್ಮುಖದಲ್ಲಿ ಕುಸ್ತಿಯು ಪ್ರದರ್ಶನಗೊಳ್ಳುತ್ತಿತ್ತು. ಈಗಲೂ ರಂಗನಾಥ ಸ್ವಾಮಿ ಜಾತೆಯ ಸಂದರ್ಭದಲ್ಲಿ, ಆನೆಗೊಂದಿ ಉತ್ಸವದ ಸಂದರ್ಭದಲ್ಲಿ ಕುಸ್ತಿ ಸ್ಪರ್ಧೆ ನಡೆಯುತ್ತದೆ. ಕುಸ್ತಿ ಪಟುಗಳು ಕುಸ್ತಿ ಅಖಾಡಕ್ಕಿಳಿದು, ಕುಸ್ತಿ ಆಡಲು ಸಿದ್ಧರಾಗುತ್ತಾರೆ. ಕುಸ್ತಿ ಪಟುಗಳು ಎಷ್ಟೇ ದಷ್ಟಪುಷ್ಟರಾಗಿದದ್ದರೂ ಕೂಡಾ ಪಟ್ಟುಗಳನ್ನು ಕಲಿಯದ ಹೊರತು ಕುಸ್ತಿಯಲ್ಲಿ ಜಯಶೀಲರಾಗಲಾರರು. ಸುಮಾರು ೨೦-೩೦ ಪಟ್ಟುಗಳನ್ನು ಆನೆಗೊಂದಿಯ ಕುಸ್ತಿ ಪಟುಗಳು ಬಳಸಿಕೊಳ್ಳುತ್ತಿದ್ದರೆಂಬುದು ಸ್ಥಳೀಯ ಅಭಿಪ್ರಾಯ. ಗಂಗೋಜ, ತಿಮ್ಮರಾಜು, ಪೆರುಮಾಳ್, ಕೃಷ್ಣ, ಬುಡನ್‌ಸಾಬ್, ನೀಲಗಾರ ಇವರು ಪ್ರಮುಖ ಕುಸ್ತಿ ಪಟುಗಳೆಂಬುದು ಸ್ಥಳೀಯರ ಅಭಿಪ್ರಾಯ.

**ಗುಂಡು ಎತ್ತುವ ಸ್ಪರ್ಧೆ :** ಆನೆಗೊಂದಿಯಲ್ಲಿ ಅನೇಕರು ಗುಂಡು ಎತ್ತುವುದರಲ್ಲಿ ನಿಪುಣರೆನಿಸಿಕೊಂಡಿದ್ದಾರೆ. ಗಗನ ಮಹಲ್‌ನ ಮುಂದೆ ಈ ಆಟವು ಇತಿಹಾಸಕಾಲದಿಂದಲೂ ಮನರಂಜನಾ ಚಟುವಟಿಕೆಯಾಗಿ ನಡೆಯುತ್ತಿದೆಂಬುದು ಸ್ಥಳೀಯರ ಅಭಿಪ್ರಾಯ. ಈಗಲೂ ಗ್ರಾಮಸ್ಥರು ತಮ್ಮ ಬದುಕಿನ ವಿರಾಮದ ವೇಳೆ ಸಾಮಾನ್ಯವಾಗಿ ಸಂಜೆ, ರಾತ್ರಿ ವೇಳೆಯಲ್ಲಿ ಈ ಸ್ಪರ್ಧೆಯು ನಡೆಯುತ್ತಿರುತ್ತದೆ. ಸುಮಾರು ೧೦೦, ೧೫೦ ಕೆ.ಜಿ. ತೂಕದ ಗುಂಡುಗಳನ್ನು ಎತ್ತಿದ ಉದಾಹರಣೆಗಳುಂಟು.

**ಚೌಕಾಬಾರ (ಚೌ ಆಟ) ಆಟ :** ಮಹಿಳೆಯರ ಆಟಗಳಲ್ಲಿ ಇದೊಂದು ಜನಪ್ರಿಯ ಆಟ. ಇಬ್ಬರು ಅಥವಾ ನಾಲ್ಕು ಜನರು ಆಟದಲ್ಲಿ ಭಾಗವಹಿಸುತ್ತಾರೆ. ಐದು ಐದು ಅಥವಾ ಏಳು ಏಳು ಮನೆ ಬರೆದು ಕಾಯಿ ಅಥವಾ ಬಳೆ ಚೂರು ಇಟ್ಟು ಆಡುತ್ತಾರೆ. ಮೂಲ ಮತ್ತು ಮಧ್ಯದ ಮನೆಗಳು ಕಟ್ಟೆ ಮನೆ ಎನಿಸಿಕೊಳ್ಳುತ್ತವೆ. ಕವಡೆ ಅಥವಾ ತಿಕ್ಕಿದ ಹುಣುಸೆ ಹಣ್ಣಿನ ಬೀಜದಿಂದ ಕೈಯಿಂದ ಕುಲಕಿ ನೆಲದ ಮೇಲೆ ಹಾಕುವರು. ಅಂಗಾತ

ಬಿದ್ದ ಕವಡೆಗಳ ಆಧಾರದಲ್ಲಿ ಆಟ ನಡೆಯುತ್ತದೆ. ಯಾರು ಎಲ್ಲಾ ಕಾಯಿಗಳನ್ನು ಮೊದಲು ಹಣ್ಣು ಮಾಡಿಕೊಳ್ಳುತ್ತಾರೆ, ಅವರು ಗೆದ್ದಂತೆ. ಹೆಣ್ಣು ಮಕ್ಕಳು ಸಾಮಾನ್ಯವಾಗಿ ತಮ್ಮ ವಿರಾಮದ ವೇಳೆಯಲ್ಲಿ ಈ ಆಟವನ್ನು ಆಡುತ್ತಾರೆ.

**ಕುಂಟಾಬಿಲ್ಲೆ ಆಟ :** ಇದು ಹೆಣ್ಣು ಮಕ್ಕಳ ಆಟಗಳಲ್ಲೊಂದು. ಚೌಕಾಕಾರ ಅಥವಾ ವೃತ್ತಾಕಾರದಲ್ಲಿ ಮನೆ ಬರೆದು ಒಡೆದ ಬೋಕಿ ಅಥವಾ ತಳ್ಳನೆ ಕಲ್ಲು ವೃತ್ತದಲ್ಲಿ ಹಾಕಿ ಕುಂಟುತ್ತಾ ಎಲ್ಲಾ ಮನೆಗಳನ್ನು ಗೆಲ್ಲುವುದು. ಹೆಚ್ಚು ಮನೆಗಳನ್ನು ಗೆಲ್ಲುವುದು. ಹೆಚ್ಚು ಮನೆಗಳನ್ನು ವಶಮಾಡಿಕೊಂಡವರು ಗೆದ್ದಂತೆ. ಹೆಚ್ಚಾಗಿ ಚಿಕ್ಕ ಹೆಣ್ಣು ಮಕ್ಕಳು ಈ ಆಟ ಆಡುತ್ತಾರೆ. ಟಿ.ವಿ.ಮಾಧ್ಯಮದ ಪ್ರಭಾವದಿಂದ ಇಂತಹ ಅನೇಕ ಆಟಗಳು ಈಗ ಮಾಯವಾಗುವ ಹಂತದಲ್ಲಿದೆ.

**ಗಟಗುಣಿ (ಬಟಗುಣಿ) ಆಟ :** ಕಟ್ಟಿಗೆಯ ಹಲಗೆಯಲ್ಲಿ ಎರಡು ಸಾಲುಗಳಲ್ಲಿ ಏಳೇಳು ಮನೆಗಳನ್ನು ತಗ್ಗು ಮಾಡಿರುತ್ತಾರೆ. ಇದರಲ್ಲಿ ಕಾಯಿ ಹಾಕುವುದು. ನಾಲ್ಕು ಕಾಯಿ ಬಂದರೆ ಕರ ಬಂತೆಂದು ತೆಗೆದುಕೊಳ್ಳುವುದು. ಪತ್ತ ತೆಗೆದುಕೊಳ್ಳುವದು ಮುಂತಾಗಿ ಆಟದ ವಿಧಿ ವಿಧಾನಗಳು ಇಲ್ಲಿವೆ. ಹೆಚ್ಚು ಕಾಳು ಬಂದವರು ಗೆದ್ದಂತೆ, ಇದನ್ನೂ ಸಹ ಮಹಿಳೆಯರು ತಮ್ಮ ವಿರಾಮದ ವೇಳೆಯಲ್ಲಿ ಆಡುತ್ತಾರೆ.

**ಮರಕೋತಿ ಆಟ :** ಸಾಮಾನ್ಯವಾಗಿ ದನಕಾಯುವ ಗಂಡು ಹುಡುಗರು ದನ ಮೇಯಿಸಲು ಹೋದಾಗ ಈ ಆಟ ಆಡುತ್ತಾರೆ. ಸುಮಾರು ಐದಾರು ಹುಡುಗರ ಗುಂಪು ಮರದ ಕೊಂಬೆ ಕೊಂಬೆಗಳಲ್ಲಿ ಏರಿ ಕುಳಿತುಕೊಳ್ಳುತ್ತಾರೆ. ನಂತರ ಕೊನೆಗೆ ಒಬ್ಬ ಮರ ಏರಿ ಯಾರನ್ನು ಮೊದಲು ಮುಟ್ಟುತ್ತಾನೋ ಅವನು ಔಟ್ ಆಗುತ್ತಾನೆ.

**ಚಿಣಿಪಿಣಿ (ಚಿನ್ನಿದಾಂಡು) :** ಎಂಟತ್ತು ಮಕ್ಕಳು ಕೂಡಿಕೊಂಡು, ಒಬ್ಬರಾದ ಮೇಲೆ ಒಬ್ಬರಂತೆ ಈ ಆಟವನ್ನು ಆಡುತ್ತಾರೆ. ಈ ಆಟಕ್ಕೆ ವಿಶಾಲ ಮೈದಾನ, ಅರ್ಧ ಅಡಿ ಮತ್ತು ಒಂದೂವರೆ ಅಡಿ ಚೂಪಾದ ಕಟ್ಟಿಗೆ ತುಂಡುಗಳು ಬೇಕು. ಇವೇ ಪ್ರಮುಖ ಆಟದ ವಸ್ತುಗಳು. ಚಿಣಿಯಿಂದ ಪಿಣಿಯನ್ನು ಚಿಮ್ಮುವದು. ನೆಲದಿಂದ ಮೇಲಕ್ಕೆ ಚಿಮ್ಮಿಸಿ ಜೋರಾಗಿ ಹೊಡೆಯುವುದು. ಚಿಣಿಯಿಂದ ಪಿಣಿ ಹೋದ ಜಾಗದಿಂದ ಅಳತೆ ಮಾಡುವುದು, ಯಾರು ಹೆಚ್ಚು ಮೊತ್ತವನ್ನು ಪಡೆದಿರುತ್ತಾರೆ ಅವರು ಗೆದ್ದಂತೆ. ಈ ಆಟವನ್ನು ಸಾಮಾನ್ಯವಾಗಿ ಗಂಡು ಹುಡುಗರು ಊರೊಳಗೆ ಆಡುತ್ತಾರೆ. ಈ ಆಟದಿಂದ ಕೆಲವು ಸಾರಿ ಅಪಾಯ ಸಂಭವಿಸುವುದೂ ಉಂಟು.

**ಲಗೋರಿ :** ಈ ಆಟವನ್ನು ಶಾಲಾಮಕ್ಕಳಷ್ಟೇ ಅಲ್ಲದೆ ಊರುಗಳಲ್ಲಿರುವ ಎಲ್ಲಾ ಹುಡುಗರು ಆಡುತ್ತಾರೆ. ಇದು ಒಂದು ಗುಂಪು ಆಟ. ಅಗಲವಾದ ಚಿಕ್ಕಪುಟ್ಟ ಕಲ್ಲುಗಳನ್ನು ಒಂದರ ಮೇಲೊಂದರಂತೆ ಇಟ್ಟು ಎರಡು ತಂಡಗಳಲ್ಲಿ ವಿರುದ್ಧ ದಿಕ್ಕಿನಲ್ಲಿ ನಿಂತ ಹುಡುಗರು ಚಂಡು ಒಗೆದು ಕಲ್ಲುಗಳನ್ನು ಕೆಡವಬೇಕು. ಕೆಡವಿದ ಕಲ್ಲನ್ನು ವಿರೋಧಿ ಗುಂಪು ಬೇಗ ಹೊಂದಿಸಿ ಲಗೋರಿ ಹೇಳದಿದ್ದಲ್ಲಿ ಚಂಡಿನಿಂದ ಬೆನ್ನಿಗೆ ಏಟು ತಿನ್ನಬೇಕಾಗುತ್ತದೆ. ಒಬ್ಬರ ನಂತರ ಒಬ್ಬರು ಇದೇ ರೀತಿ ಆಡಬೇಕಾಗುತ್ತದೆ.

## ೫.೮. ಆಡಳಿತ

ಆನೆಗೊಂದಿಯು ಸುಮಾರು ೧೦೦೦ ವರ್ಷಗಳ ಇತಿಹಾಸವನ್ನು ಹೊಂದಿದ ವಿಶಿಷ್ಟ ಗ್ರಾಮವಾಗಿದೆ. ಇಷ್ಟೊಂದು ಸುದೀರ್ಘ ಇತಿಹಾಸದ ಪ್ರಜ್ಞೆಯನ್ನು ಮೌಖಿಕ ಪರಂಪರೆಯನ್ನು ಕಾಣಲು ಕಷ್ಟವಾದರೂ ಆನೆಗೊಂದಿ ಸಂಸ್ಥಾನದ ಆಡಳಿತ, ಇತಿಹಾಸದ ಕುರಿತಾದ ಮಾಹಿತಿಯು ಸ್ಪಷ್ಟವಾಗಿ ದೊರೆಯುತ್ತದೆ. ಇಲ್ಲಿ ಜನಪದರು ನಿರೂಪಿಸಿರುವ ಅರಸೊತ್ತಿಗೆಯ ಆಡಳಿತ ವೈಖರಿಯನ್ನು ಸಂಕ್ಷಿಪ್ತವಾಗಿ ವಿವರಿಸಿ, ನಂತರ ಪ್ರಜಾಪ್ರಭುತ್ವದ ಆಡಳಿತ ವ್ಯವಸ್ಥೆಯ ಕಡೆ ಗಮನ ಹರಿಸೋಣ. ರಾಜರು ದರ್ಬಾರಕ್ಕೆ ಬರುವ ಸಮಯದಲ್ಲಿ ರಾಜರ ಸುತ್ತ ರಾಜ ಭಟರು ಕಾವಲು ಇರುತ್ತಿದ್ದರು. ಮುಂದೆ ಮುಂದೆ ಮಂಗಳವಾದ್ಯ ಮೊಳಗುತ್ತಿತ್ತು. ರಾಜರು ಬಹುಪುರಾಣದೊಡನೆ ಸಿಂಹಾಸನವೇರುತ್ತಿದ್ದರು. ಪ್ರಜೆಗಳ ಕಷ್ಟ ಸುಖಗಳನ್ನು ವಿಚಾರಿಸಿ ದರ್ಬಾರಿನಿಂದ ಮರುಳುತ್ತಿದ್ದರು. ಮಹಾಮಂತ್ರಿ, ಕರಣಿಕ, ಪಟೇಲ, ಇವರು ಆಡಳಿತದ ಸಂಪರ್ಕ ಕೊಂಡಿಯಾಗಿದ್ದರು. ರಾಜರು ಪ್ರಜೆಗಳ ಮೇಲೆ ಅಪಾರವಾದ ಕಾಳಜಿ ವಹಿಸುತ್ತಿದ್ದರು. ಪ್ರಜೆಗಳಿಗೂ ರಾಜನ ಬಗ್ಗೆ ಭಯ ಭಕ್ತಿ ಇತ್ತು. ಭದ್ರವಾದ ಕೋಟೆಗಳು, ಕಾವಲು ವ್ಯವಸ್ಥೆ, ಕಂದಕ ನಿರ್ಮಾಣದಿಂದ ಪ್ರಜೆಗಳನ್ನು ಶತೃಗಳಿಂದ ಕಾಪಾಡುತ್ತಿದ್ದರು.

**ನಗರ, ಉಪನಗರ :** ಪ್ರಾಚೀನ ಭಾರತದ ಅರಸು ಮನೆತನಗಳು ತಮ್ಮ ರಾಜ್ಯಗಳನ್ನು ಶ್ರೇಣೀಕೃತ ವಿಭಾಗಗಳನ್ನಾಗಿ ವಿಭಜಿಸಿ ಆಡಳಿತವನ್ನು ನಡೆಸಿದಂತೆಯೇ ವಿಜಯನಗರ ಅರಸರು, ಆನೆಗೊಂದಿ ಸಂಸ್ಥಾನದ ಅರಸರು ತಮ್ಮ ರಾಜ್ಯವನ್ನು ವಿಭಾಗಿಸಿ ಆಳಿದ್ದಾರೆಂಬುದು ಇತಿಹಾಸಕಾರ ಅಭಿಪ್ರಾಯ. ಇಂತಹ ಶ್ರೇಣೀಕೃತ ವಿಭಾಗವೇ ನಗರ ಅಥವಾ ಪಟ್ಟಣ. ಸಾಮಾನ್ಯವಾಗಿ ನಗರದಲ್ಲಿ ಸುಸಂಸ್ಕೃತರು, ಸಮಾಜದಲ್ಲಿ ಉನ್ನತ ಸ್ಥಾನ ಮಾನಗಳನ್ನು ಹೊಂದಿರುವವರು, ಆಡಳಿತಗಾರರು ಮತ್ತು ಸಮಾಜದ ಶ್ರೇಷ್ಠಿಗಳು ವಾಸಿಸುವ ಜನವಸತಿ ಪ್ರದೇಶಕ್ಕೆ ನಗರ ಎಂದು ವರ್ಗೀಕರಿಸಲ್ಪಟ್ಟಿದ್ದಾರೆ. ಒಂದು ಅರಸು ಮನೆತನದ ಆಳ್ವಿಕೆಗೆ ಒಳಪಟ್ಟ ಪ್ರದೇಶದ ಆಡಳಿತವನ್ನು ಸುಸೂತ್ರವಾಗಿ ನಡೆಸಲು ಆ ಪ್ರದೇಶವನ್ನು ಶ್ರೇಣೀಕೃತ ವಿಭಾಗಗಳನ್ನಾಗಿ ವಿಂಗಡಿಸಿರುವದು ಚರಿತ್ರೆಯಿಂದ ತಿಳಿದ ವಿಷಯವೇ ಸರಿ. ಇಂತಹ ಶ್ರೇಣೀಕೃತ ವಿಭಾಗಗಳು ಯಾವುದೆಂದರೆ ರಾಷ್ಟ್ರ, ನಾಡು, ಮಹಾನಾಡು, ಸೀಮೆ, ಸ್ಥಳ, ಪಟ್ಟಣ, ನಗರ, ಪುರ, ಗ್ರಾಮ, ಹಳ್ಳಿ ಮುಂತಾದವುಗಳೇ ಆಗಿವೆ. ಸಾಮಾನ್ಯವಾಗಿ ರಾಜಧಾನಿಯನ್ನು ನಗರ ಅಥವಾ ಪುರ ಎಂದು ಗುರುತಿಸುತ್ತಾರೆ. ಇದಲ್ಲದೆ ರಾಜ್ಯದಲ್ಲಿನ ಮುಖ್ಯ ಪ್ರದೇಶದಲ್ಲಿ ವಾಣಿಜ್ಯ, ವ್ಯವಹಾರ, ನಾಗರೀಕ ಸೌಲಭ್ಯಗಳನ್ನು ಹೊಂದಿರುವ ಧಾರ್ಮಿಕವಾಗಿ ಪ್ರಸಿದ್ಧಿ ಪಡೆದ ಪ್ರದೇಶವನ್ನು ನಗರವಾಗಿರುವುದನ್ನು ನೋಡಬಹುದಾಗಿದೆ. ಇಂತಹ ನಗರಗಳು ವಿಜಯನಗರ ಕಾಲದಲ್ಲಿ ಪಟ್ಟಣವು ಸ್ವಾಮಿಗಳು ಎಂಬ ಅಧಿಕಾರಿಗಳ ಉಸ್ತುವಾರಿಯಲ್ಲಿ ಇರುತ್ತಿದ್ದವೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಆನೆಗೊಂದಿಯ, ವಿಜಯನಗರಕಾಲದ ಪ್ರಮುಖ ನಗರವಾಗಿತ್ತೆಂದು ವಿದೇಶಿ ಪ್ರವಾಸಿಗರ ಬರಹಗಳಿಂದ ತಿಳಿದು ಬರುತ್ತದೆ.

ಉಪ ನಗರಗಳನ್ನು ಭೌಗೋಳಿಕ ವ್ಯಾಪ್ತಿಯನ್ನು ಮಾನದಂಡವಾಗಿಟ್ಟುಕೊಂಡು ಪರಿಶೀಲಿಸಿದಾಗ ಇವು ಮೂರು ಖಚಿತ ವಲಯಗಳಲ್ಲಿರುವುದನ್ನು ಗಮನಿಸಬಹುದು. ಅವು ಯಾವುವೆಂದರೆ:

೧. ಕೇಂದ್ರ ವಲಯ, ೨. ವ್ಯವಸಾಯ ಅಥವಾ ಕೃಷಿ ವಲಯ, ೩. ಹೊರ ವಲಯ

ವ್ಯವಸಾಯದ ಉತ್ಪನ್ನಗಳ ಮಾರಾಟ ಸ್ಥಳ, ಬೆಳೆಯುವ ಪ್ರದೇಶ ಇತ್ಯಾದಿಗಳು ವಲಯ, ಉಪನಗರಗಳನ್ನವಲಂಬಿಸಿದ್ದವು. ಕುಡಿಯುವ ನೀರಿಗೆ, ಕೃಷಿಗೆ, ಮದಲಗಟ್ಟಿ, ವಿಜಯನಗರ ಕಾಲುವೆ, ಹಳೇಕಾಲುವೆ ವ್ಯವಸ್ಥೆಯಾಗಿತ್ತು. ಇಂದಿಗೂ ಇಲ್ಲಿ ಈ ಕಾಲುವೆಗಳನ್ನು ನೋಡಬಹುದು. ಅರಮನೆಯಲ್ಲಿ ಅನೇಕ ಕೆಲಸಗಾರರಿದ್ದು ಅವರಿಗೆ ಭೂಮಿಯನ್ನು ಸಂಭಾವನೆ ರೂಪದಲ್ಲಿ ಕೊಡುತ್ತಿದ್ದರು. ಮಂಗಳವಾದ್ಯ ಊದಿದವರಿಗೆ ಸನಾದಿ ಪಟ್ಟಿ, ಕೋತಿಗಳಿಗಳಾಗಿ ಕೋತಿ ಮಾನೇವು, ತಳವಾರರಿಗೆ ತಳವಾರ ಪಟ್ಟಿ, ಎಲಿ ಅಡಿಕೆ ಕೊಡುವವರಿಗೆ ಎಲೆಡಿಕಿ ಮಾನೇವು, ಹೂವು ಕೊಡುವವರಿಗೆ ಜೀರ ಪಟ್ಟಿ, ಪಾತ್ರದವರ ಗದ್ದಿ, ದುಗ್ಗಾ ಮಾನೇವು ಇನ್ನೂ ಮುಂತಾದ ಹೆಸರಿನ ಭೂಮಿಗಳನ್ನು ಈಗಲೂ ಕಾಣಬಹುದು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲೆಡೆಯಂತೆ ಇಲ್ಲೂ ಆಡಳಿತ ವ್ಯವಸ್ಥೆಗೆ ಗಗನ ಮಹಲ್‌ನಲ್ಲಿ ಇದ್ದು. ಅಧ್ಯಕ್ಷ, ಉಪಾಧ್ಯಕ್ಷರು, ಸದಸ್ಯರುಗಳನ್ನೊಳಗೊಂಡ ಜನಪ್ರತಿನಿಧಿಗಳ ಗುಂಪು ಮತ್ತು ಸರ್ಕಾರದಿಂದ ನೇಮಕವಾದ ಕಾರ್ಯದರ್ಶಿ, ಬಿಲ್‌ಕಲೆಕ್ಟರ್ ಮುಂತಾದ ನೌಕರರು ಇಲ್ಲಿ ಕೆಲಸ ಮಾಡುತ್ತಾರೆ. ವಸತಿ, ನೈರ್ಮಲ್ಯ, ನೀರು, ರಸ್ತೆ, ಶಿಕ್ಷಣ ಇನ್ನೂ ಮುಂತಾದ ಸೇವೆಯನ್ನು ಒದಗಿಸುವ ಮೂಲಕ ಗ್ರಾಮ ಪಂಚಾಯತಿಯು ಕೆಲಸ ನಿರ್ವಹಿಸುತ್ತದೆ.

### ೫.೯. ಮಹಿಳೆಯರ ಸ್ಥಾನ-ಮಾನ

ನಮ್ಮ ಸಮಾಜವು ಮೊದಲಿನಿಂದಲೂ ಪುರುಷ ಪ್ರಧಾನವಾದ ಸಮಾಜವಾಗಿದೆ. ಇಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ. ಆನೆಗೊಂದಿ ಗ್ರಾಮವು ಸಹ ಇದಕ್ಕೆ ಹೊರತಾಗಿಲ್ಲ. ಪಂಚಾಯ್ತಿ ಕಟ್ಟೆಯ ಮೇಲೆ ಕುಳಿತು ನ್ಯಾಯ ತೀರ್ಪು ಕೊಡುವ ಅಧಿಕಾರ ಇಂದಿಗೂ ಪುರುಷರೇ ಪಡೆದಿದ್ದಾರೆ. ಇಲ್ಲಿ ಮಹಿಳೆಯರಿಗೆ ಅವಕಾಶಗಳಿಲ್ಲ. ಆನೆಗೊಂದಿ ಗ್ರಾಮದಲ್ಲಿರುವ ಹೋಟೆಲ್ಲುಗಳಿಗೆ ಮಹಿಳೆಯರು ಹೋಗುವಂತಿಲ್ಲ. ಇದು ಒಂದು ಖಡ್ಡಾಯ ನಿಯಮವಲ್ಲದಿದ್ದರೂ ಮರ್ಯಾದೆಯ ದೃಷ್ಟಿಯಿಂದ ಹೋಗುವುದಿಲ್ಲ. ಕುಟುಂಬದ ಯಾವುದೇ ಪ್ರಮುಖ ತೀರ್ಮಾನಗಳಿಗೆ ಬರುವಾಗ ಮಹಿಳೆಗೆ ಎರಡನೆಯ ಸ್ಥಾನ ಕೊಡುತ್ತಾರೆ. ವಿಜಯನಗರದ ಕಾಲದಲ್ಲಿ ಹಾಗೂ ಆನೆಗೊಂದಿ ಸಂಸ್ಥಾನದ ಕಾಲದಲ್ಲಿ ಕೆಲವು ಮಹಿಳೆಯರು ರಾಜರುಗಳಿಗೆ, ಪ್ರಜೆಗಳಿಗೆ ಮನರಂಜನೆ ನೀಡುವ ನೃತ್ಯಗಾರರಾಗಿ ಪ್ರಮುಖ ಪಾತ್ರ ವಹಿಸಿದ್ದರು. ತದನಂತರ ದೇವದಾಸಿ ಅಥವಾ ಬಸವಿ ಸಂಪ್ರದಾಯ, ವೇಶ್ಯಾ ಸಂಪ್ರದಾಯ ಬೆಳೆದು ಬಂದಿತು. ಬಡತನದ ಪರಿಸ್ಥಿತಿಯು ಮಹಿಳೆಯರನ್ನು ಇಂತಹ ಸ್ಥಿತಿಗೆ ತಳ್ಳಲು ಕಾರಣವಾಗಿದೆ. ಆದರೆ ಇಂದು ಇಂತಹ ಅನಿಷ್ಟ ಪದ್ಧತಿ ಆನೆಗೊಂದಿ ಗ್ರಾಮದಲ್ಲಿ ಇಲ್ಲ. ಆಧುನಿಕ ಸ್ಥಿತ್ಯಂತರಗಳಿಗೆ ಒಳಗಾದ ಆನೆಗೊಂದಿ ಗ್ರಾಮದಲ್ಲಿ ಇಂದು ಮಹಿಳೆಯರು ಸುಶಿಕ್ಷಿತರಾಗ

ತೊಡಗಿದ್ದಾರೆ.ಪ್ರಾಥಮಿಕ ಹಂತದಿಂದ ಹಿಡಿದು ಪದವಿ, ಸ್ನಾತಕ ಪದವಿ ಪಡೆದ ಮಹಿಳೆಯರು ಅನೇಕರಿದ್ದಾರೆ. ಕಿಷ್ಕಿಂದಾ ಟ್ರಸ್ಟ್‌ನಂತಹ ಸಂಘ ಸಂಸ್ಥೆಗಳಿಂದ ಸ್ವಯಂ ಉದ್ಯೋಗದ ಹಾಗೂ ಕರಕುಶಲ ಕಲೆಯ ತರಬೇತಿ ಪಡೆದು ಗುಡಿ ಕೈಗಾರಿಕೆಗಳಾದ ಅಗರಬತ್ತಿ ತಯಾರಿಸುವ, ಬಾಳೆ ನಾರಿನಿಂದ ನಾನಾ ರೀತಿಯ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವ, ಹಪ್ಪಳ, ಉಪ್ಪಿನಕಾಯಿ ತಯಾರಿಸುವ ಇನ್ನೂ ಮುಂತಾದ ಕೆಲಸದಲ್ಲಿ ನಿರಂತರವಾಗಿ ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಾರೆ. ಮಹಿಳಾ ಸ್ವ ಸಹಾಯ ಗುಂಪನ್ನು ರಚಿಸಿಕೊಂಡು ಹಣಕಾಸಿನ ಸೌಲಭ್ಯ ಪಡೆದು ಕಿರಾಣಿ, ಹೋಟೆಲ್ಲು, ಗುಡಿಕೈಗಾರಿಕೆಗಳನ್ನು ನಡೆಸುತ್ತಿದ್ದಾರೆ. ಕೃಷಿ, ಧಾರ್ಮಿಕ ಕ್ಷೇತ್ರಗಳಲ್ಲಿಯೂ ಹೆಚ್ಚಿನ ಸ್ಥಾನ-ಮಾನ ಪಡೆಯ ತೊಡಗಿದ್ದಾರೆ. ಗ್ರಾಮ ಪಂಚಾಯಿತಿಯಲ್ಲಿ ಜನಪ್ರತಿನಿಧಿಗಳಾಗಿ ಆಯ್ಕೆಯಾಗಿದ್ದಾರೆ. ವಿವಿಧ ಇಲಾಖೆಗಳಲ್ಲಿ, ಅಂಗನವಾಡಿಗಳಲ್ಲಿ ನೌಕರಿ ಮಾಡುವ ಮಹಿಳೆಯರೂ ಇದ್ದಾರೆ. ವನಿತಾ ಯುವತಿ ಮಂಡಳದ ಮುಖಾಂತರ ಮಹಿಳೆಯರು ತಮ್ಮ ಅಸ್ತಿತ್ವವನ್ನು ಬಲಪಡಿಸಿಕೊಳ್ಳುತ್ತಾ ಬರುತ್ತಿದ್ದಾರೆ.

### ೫.೧೦. ಗ್ರಾಮ ಲೋಕದೃಷ್ಟಿ

ಆನೆಗೊಂದಿಯು ಪೌರಾಣಿಕವಾಗಿ ಐತಿಹಾಸಿಕವಾಗಿ ವಿಶಿಷ್ಟ ಹಿನ್ನೆಲೆಯನ್ನು ಹೊಂದಿದೆ. ಹನುಮಂತ ಜನಿಸಿದ ಸ್ಥಳವಾದರಿಂದ ರಾಮಾಯಣ ಕಾಲದ ಕಿಷ್ಕಿಂದೆ ಎಂದು ಈ ಸ್ಥಳ ವರ್ಣಿಸಲ್ಪಟ್ಟಿದೆ. ಜಗತ್ತಿನ ಗಮನ ಸೆಳೆದ ವಿಜಯನಗರ ಸಾಮ್ರಾಜ್ಯವು ಮೊದಲು ಸ್ಥಾಪನೆಯಾದದ್ದು ಇಲ್ಲಿಯೇ. ಕಲೆ, ಸಾಹಿತ್ಯ, ಕ್ರೀಡೆ, ವಾಸ್ತು ಶಿಲ್ಪ, ಆಡಳಿತ, ದೇವಾಲಯ ಇನ್ನೂ ಮುಂತಾದ ಅಂಶಗಳಲ್ಲಿ ವಿಜಯನಗರದ ಅಂಗವಾಗಿಯಷ್ಟೇ ಅಲ್ಲದೆ ತನ್ನದೇ ಆದ ಸ್ವಂತಿಕೆಯನ್ನು ಪಡೆದುಕೊಂಡ ದೇಶ, ವಿದೇಶದ ಪ್ರವಾಸಿಗರ, ವ್ಯಾಪಾರಿಗಳ, ಸಂದರ್ಶಕರ, ರಾಯಭಾರಿಗಳ, ಸಮಕಾಲೀನ ಪಾಶ್ಚಾತ್ಯ ಬರಹಗಾರರ ಗಮನವನ್ನು ಸೆಳೆದಿದೆ. ವಿದೇಶಿ ಪ್ರವಾಸಿ ನ್ಯೂನಿಜ್‌ನು ಜಗತ್ಪ್ರಸಿದ್ಧ ವಿಜಯನಗರವು ಆರಂಭಕಾಲದಲ್ಲಿ ಆನೆಗೊಂದಿಯನ್ನು ಪ್ರಮುಖ ಸ್ಥಳವನ್ನಾಗಿ ಮಾಡಿಕೊಂಡಿತ್ತು. ಆದ್ದರಿಂದ ಇದನ್ನು ವಿಜಯನಗರದ ಮಾತೃಸ್ಥಾನ ಎನ್ನಬಹುದು ಎಂದು ಹೇಳಿದ್ದಾನೆ. ಇಟಲಿಯ ಪ್ರವಾಸಿ ನಿಕೋಲೋ ಕೊಂಟೆ ವರ್ಣನೆ ಹೀಗಿದೆ. ಗುಡ್ಡಗಳ ಪಕ್ಕದ ವಿಜಯನಗರ ಸು.೮ ಮೈಲು ಸುತ್ತಳತೆಯುಳ್ಳದ್ದಾಗಿದೆ. ಗುಡ್ಡದ ಬುಡದವರೆಗೆ ಇದ್ದ ಕೋಟೆಯ ಗೋಡೆಗಳು ಚಾಚಿವೆ. ಅಲ್ಲಿ ತೊಂಬತ್ತು ಸಾವಿರ ವೀರ ಯೋಧರಿದ್ದಾರೆ. ಪರ್ಶಿಯಾದ ಪ್ರವಾಸಿ ಅಬ್ದುಲ್ ರಜಾಕ್ ಇಡೀ ಪ್ರಪಂಚದಲ್ಲೇ ಇಂತಹ ಮತ್ತೊಂದು ಪಟ್ಟಣವಿರುವುದನ್ನು ಯಾರೂ ಕಣ್ಣಿಂದ ನೋಡಿರಲಾರರು, ಕಿವಿಯಿಂದ ಕೇಳಿರಲಾರರು, ಇಲ್ಲಿನ ಸಂಪತ್ತಿನ ಹೊಳೆಯೂ ಹರಿಯುತ್ತಿದೆ. ನಗರ, ಉದ್ಯಾನವನ, ವಿಶಾಲ ಬೀದಿಗಳಿಂದ ಕಂಗೊಳಿಸುತ್ತಿದೆ. ಮುತ್ತು, ರತ್ನ, ವಜ್ರ, ವೈಢೂರ್ಯಗಳನ್ನು ಇಲ್ಲಿನ ಪೇಟೆಯ ಬೀದಿಗಳಲ್ಲಿ ಯಾವ ವಿಧವಾದ ಭೀತಿಯೂ ಇಲ್ಲದೆ ಬಹಿರಂಗವಾಗಿ ಮಾರುತ್ತಾರೆ. ರಷ್ಯಾದ ನಿಕಿಟನ್ ವಿಜಯನಗರದ ಸೈನ್ಯ ಒಂದು ಲಕ್ಷ ಕಾಲ್ದಳ ಐವತ್ತು ಸಾವಿರ ಅಶ್ವದಳ ಹೊಂದಿತ್ತು. ವಿಜಯನಗರವನ್ನು ಮೂರು ಕಡೆ ಬೆಟ್ಟಗಳೂ

ಒಂದು ಕಡೆ ನದಿಯೂ ಸುತ್ತುವರೆದಿದೆ. ಅದೊಂದು ದುರ್ಗಮವಾದ ಸುರಕ್ಷಿತ ನಗರ ಎಂದಿದ್ದಾರೆ. ಡ್ಯೂರಾಟೆ ಬಾರ್ಬೋಸ್ ಪೋರ್ಚುಗಲ್ಲಿನ ಪ್ರವಾಸಿಯು ತನ್ನ ಪ್ರವಾಸ ಕಥನದಲ್ಲಿ, ಪರ್ವತಗಳಿಂದ ೪೫ ರಹದಾರಿ ದೂರದಲ್ಲಿ ಬಿಜನಗರ ಎಂಬ ಬಹುದೊಡ್ಡ ನಗರವಿದೆ. ಅದು ವಿಪುಲ ಜನಸಂಖ್ಯೆ ಉಳ್ಳದ್ದು, ಒಂದು ಬದಿಯಲ್ಲಿ ಉತ್ತಮ ಗೋಡೆಯಿಂದ ಇನ್ನೊಂದು ಬದಿಯಲ್ಲಿ ನದಿಯಿಂದ ಮತ್ತೊಂದು ಬದಿಯಲ್ಲಿ ಪರ್ವತದಿಂದ ಸುತ್ತುವರೆಯಲ್ಪಟ್ಟಿದೆ. ನಗರವು ಸಮತಲ ನೆಲದ ಮೇಲಿದೆ ಎಂದು ದಾಖಲಿಸಿದ್ದಾನೆ. ಅದೇ ರೀತಿ ಡಾಮಿನಿಗೋ ಪೇಸ್, ವಾರ್ಥಿಮಾರವರು ಸಹ ತಮ್ಮ ಪ್ರವಾಸ ಕಥನದಲ್ಲಿ ಇಲ್ಲಿಯ ಇತಿಹಾಸ, ಆಡಳಿತ, ವೈಭವದ ಕುರಿತು ದಾಖಲಿಸಿದ್ದಾರೆ. ಆರನೆಯ ಶತಮಾನದ ಮಧ್ಯಭಾಗದ ನಂತರ ಚೀನಿ ಯಾತ್ರಿಕ ಹೊಯ್ಯೆನ್‌ತ್ಸಾಂಗ್ ಈ ಭಾಗದಲ್ಲಿ ಸಂಚರಿಸಿದಾಗ ಇಲ್ಲಿನ ವೈಭವದ ಬಗ್ಗೆ ವರ್ಣಿಸುತ್ತಾ, ಕೊಂಕಣಪುರವೆಂದು ಅರ್ಥೈಸಿಕೊಂಡಿದ್ದಾನೆ. ಆಗ ಈ ಭಾಗವನ್ನು ಕಲ್ಯಾಣ ಪುರವೆಂದು ಕರೆದಿದ್ದಾಗಿ ತಿಳಿಯುತ್ತದೆ. ಈ ಆನೆಗೊಂದಿಯು ವಿಜಯನಗರ ಸಾಮ್ರಾಜ್ಯ ಹುಟ್ಟುವುದಕ್ಕಿಂತ ಪೂರ್ವದಲ್ಲಿ ಅಂದರೆ ೬೦೦ ವರ್ಷಗಳ ಹಿಂದೆಯೇ ಇಲ್ಲಿ ರಾಜ್ಯಭಾರ ನಡೆದುದ್ದಾಗಿ ಪರ್ಶಿಯನ್ ಪ್ರವಾಸಿ ಅಭಿಪ್ರಾಯಪಟ್ಟಿದ್ದಾರೆ.

# ಅಧ್ಯಾಯ ೬

# ಆಚರಣೆಗಳು

## ೬.೧. ಜೀವನಾವರ್ತನದ ಆಚರಣೆಗಳು (Life Cycle Cermonies)

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳನ್ನು ಸ್ಥಿತ್ಯಂತರದ ವಿಧಿಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಜಾತಿಯಿಂದ ಜಾತಿಗೆ, ಧರ್ಮದಿಂದ ಧರ್ಮಕ್ಕೆ ವ್ಯತ್ಯಾಸವಾಗುತ್ತ ಹೋಗುತ್ತವೆ. ಭಾರತೀಯ ಸಂದರ್ಭವನ್ನು ಗಮನಿಸಿ ಹೇಳುವುದಾದರೆ ಹೆಂಗಸರಲ್ಲಿ ಈ ಸ್ಥಿತ್ಯಂತರ ಹೆಚ್ಚು. ಹದಿಹರೆಯ, ಮೈನೆರೆಯುವಿಕೆ, ಮದುವೆ, ಸೀಮಂತ, ನಾಮಕರಣ, ಹುಟ್ಟಿನ ಆಚರಣೆ, ಸಾವಿನ ಆಚರಣೆ ಹೀಗೆ ವೈವಿಧ್ಯಮಯ ಸಮಾಜವು ಒಂದು ವ್ಯಕ್ತಿಯನ್ನು ಅಂಗೀಕರಿಸುವಂತೆ ಮಾಡುವಲ್ಲಿ ಈ ಜೀವನಾವರ್ತನದ ಆಚರಣೆಗಳು ನೆರವಾಗುತ್ತವೆ.

ಆನೆಗೊಂದಿ ಪರಿಸರವು ಸಾಮಾನ್ಯವಾಗಿ ಎಲ್ಲ ಊರುಗಳಂತೆ ಬಹು ಧರ್ಮ, ಜಾತಿಗಳಿಂದ ಕೂಡಿದ ಗ್ರಾಮವೇ ಆಗಿದೆ. ಎಲ್ಲ ಧರ್ಮ, ಜಾತಿಯ ಪ್ರತ್ಯೇಕ ಜೀವನಾನದ ಆಚರಣೆಗಳನ್ನು ಗಮನಿಸಿದರೂ ಸಹ ಎಲ್ಲರಲ್ಲೂ ಬರುವ ಸಾಮಾನ್ಯ ಆಚರಣೆಗಳನ್ನು ಗಮನಿಸಿದರೂ ಸಹ ಎಲ್ಲರಲ್ಲೂ ಬರುವ ಸಾಮಾನ್ಯ ಆಚರಣೆಗಳನ್ನು ಇಲ್ಲಿ ನೋಡಬಹುದಾಗಿದೆ.

### ಹುಟ್ಟು ಮತ್ತು ನಾಮಕರಣ

ಹೆರಿಗೆಯಾದ ದಿನದಿಂದ ನಾಮಕರಣ ದಿನದವರೆಗೆ ಅನೇಕ ಆಚರಣೆಗಳೂ ಈಗಲೂ ಆನೆಗೊಂದಿಯಲ್ಲಿ ನಡೆದುಕೊಂಡು ಬಂದಿವೆ. ಹೆರಿಗೆಯಾದ ದಿನದಿಂದ ಮೂರು ದಿನ ಅಥವಾ ಒಂಬತ್ತು ದಿನಗಳವರೆಗೆ ರಿದ್ದಿ ಆಚರಣೆ ಮಾಡುತ್ತಾರೆ. ಈ ದಿನಗಳಲ್ಲಿ ದೇವರಿಗೆ ರಕ್ತ ಸಂಬಂಧಿಕರು ಮಾತ್ರ ಪೂಜೆ ಮಾಡುವಂತಿಲ್ಲ. ೨ನೇ ಅಥವಾ ೧೧ ದಿನ ಬಾಣಂತಿಯನ್ನು ಗಂಗಮ್ಮಗೆ ಕರೆದುಕೊಂಡು ಹೋಗುತ್ತಾರೆ. ಬಾವಿಗೆ ಅಥವಾ ಹೊಳೆಗೆ ಹೋಗುತ್ತಿದ್ದ ಜನ ಇಂದು ನಳದ ಮುಂದೆಯೇ ಗಂಗಮ್ಮ ಆಚರಣೆ ಮಾಡುತ್ತಾರೆ. ೫ನೇ ದಿನ ನೀರಲ ಮಾಡುತ್ತಾರೆ. ೧೬ ದಿನಗಳವರೆಗೆ ಬಾಣಂತಿ ಹೊರಗೆ ಹೋಗುವಂತಿಲ್ಲ. ಯಾವಾಗಲೂ ಮನೆಯಲ್ಲಿ ಮೃದು ಚಪ್ಪಲಿ ಧರಿಸಿ ಓಡಾಡುತ್ತಿರಬೇಕು.

ನಾಮಕರಣ ೧೬ನೇ ದಿನದಲ್ಲಿ, ೩ ತಿಂಗಳಲ್ಲಿ ಕೆಲವರು ತಮಗೆ ಅನುಕೂಲವಾದ ದಿನ ನಾಮಕರಣ ಮಾಡುತ್ತಾರೆ. ಮಗುವಿಗೆ ಅತ್ತೆ, ಮಾವ, ಆಗುವವರು ಹೆಸರು ಇಡುತ್ತಾರೆ. ನಾಮಕರಣ ಮಾಡುವವರಿಗೆ ಎಲೆ, ಅಡಿಕೆ, ಕೊಬ್ರಿ ಬಟ್ಲ, ಹಣ ಅಥವಾ ಬಟ್ಟೆ ಕೊಡುತ್ತಾರೆ. ಮಗುವಿಗೆ ಹೆಸರು ಕರೆಯುವ ಮೊದಲು ಆಂಜನೇಯ, ರಂಗನಾಥ, ಊರಮ್ಮ ಹೀಗೆ ಐದು ದೇವರ ಹೆಸರು ಕರೆದನಂತರ ಮಗುವಿಗೆ ಹೆಸರು ಕರೆಯುತ್ತಾರೆ. ಹೆಸರು ಇಡುವವರಿಗೆ ಅತ್ತೆ, ಮಾವ ಆಗುವವರು ಬೆನ್ನಿಗೆ ತಟ್ಟುತ್ತಾರೆ. ಬಾಣಂತಿಗೆ ಐದು ಜನ ಮುತ್ತೈದೆಯರಿಂದ ಉಡಿ ಅಕ್ಕಿ ಹಾಕುತ್ತಾರೆ. ನಾಮಕರಣಕ್ಕೆ ಬಂದ ಬಂಧುಬಳಗಕ್ಕೆ ಎಳ್ಳುಬೆಗಳಿ, ತಾಂಬೂಲ ಕೊಡುತ್ತಾರೆ.

**ಮೈ ನೆರೆದ ಆಚರಣೆ**

ಮೈನೆರೆದ ಆಚರಣೆಯಲ್ಲಿ ಹುಡುಗಿಯನ್ನೂ ಆಕೆಯ ವಾಸಸ್ಥಾನದಿಂದ ಪ್ರತ್ಯೇಕಿಸಲಾಗುತ್ತದೆ. ಅವಳನ್ನು ಯಾರೂ ಮುಟ್ಟುವಂತಿಲ್ಲ. ಮೈನೆರೆದಂದಿನಿಂದ ಸ್ನಾನದವರೆಗೆ ಐದು ದಿನ ಆಕೆಗೆ ಸಂಕ್ರಮಣ ಕಾಲಾವಧಿ. ಈ ಕಾಲಾವಧಿಯಲ್ಲಿ ವಿಶಿಷ್ಟ ಆಹಾರ, ಕೆಲವೊಂದು ವಿಧಿ ನಿಷೇಧಗಳಿರುತ್ತವೆ. ಐದನೇ ದಿನದಿಂದ ಕೆಲವರಲ್ಲಿ ದಿನಗಳಲ್ಲಿ ವ್ಯತ್ಯಾಸವಿದೆ. ಊರ ಮುತ್ತೈದೆಯರಿಂದ ಸ್ನಾನ, ಗಂಗಾಪೂಜೆ, ಹೊಸ್ತಿಲು ಬರೆಯುವಿಕೆ, ದೇವಸ್ಥಾನಕ್ಕೆ ಭೇಟಿಯ ಮೂಲಕ ಆಕೆಯನ್ನು ಸಮಾಜದೊಳಗೆ ಮತ್ತೆ ತರಲಾಗುತ್ತದೆ. ಹೊಲೆ-ಶುದ್ಧಗಳ ಆಚರಣೆ ಇಲ್ಲಿ ನಡೆಯುತ್ತದೆ. ಆಚರಣೆಯನ್ನು ಕೆಲವರು ಇಷ್ಟಕ್ಕೆ ಮುಗಿಸಿದರೆ ಮತ್ತೆ ಕೆಲವರು ಮುಂದುವರೆದು ೫ ದಿನ ೧೧ ದಿನಗಳವರೆಗೆ ರಾಮಾಯಣ, ಶಾಕುಂತಲ, ದೇವರುಗಳ ಪಾತ್ರವನ್ನು ಧರಿಸಿ, ಇತರರು ಧರಿಸಿ ಸಂಭ್ರಮಾಚರಣೆ ನಡೆಸುತ್ತಾರೆ. ನೆಂಟರಿಷ್ಟರು ಹುಡುಗಿಗೆ ಬಟ್ಟೆ, ಸಿಹಿ, ಖಾರ ತಂದು ಒಸಗೆ ಮಾಡುತ್ತಾರೆ. ಇಂಥ ವಿಶಿಷ್ಟ ಸಂಪ್ರದಾಯ ಆನೆಗೊಂದಿಯಲ್ಲಿ ಈಗಲೂ ಆಚರಣೆಯಲ್ಲಿದೆ.

**ಸೀಮಂತ**

ಗರ್ಭಿಣಿಯರಿಗಾಗಿ ಮಾಡುವ ಆಚರಣೆ ಇದಾಗಿದೆ. ಸಾಮಾನ್ಯವಾಗಿ ಗರ್ಭಿಣಿಯಾದ ಐದನೇ ಅಥವಾ ಎಂಟನೇ ತಿಂಗಳಲ್ಲಿ ತವರು ಮನೆಯವರು ಗಂಡನ ಮನೆಯಲ್ಲಿ ಇರುವ ಮಗಳಿಗೆ ಮಾಡುವ ಆಚರಣೆಯಾಗಿದೆ. ತವರಿನಿಂದ ಗರ್ಭಿಣಿಯಾದ ಮಗಳಿಗಾಗಿ ಬಯಕೆ ಬುತ್ತಿ ತರುತ್ತಾರೆ. ಜೋಳದ ರೊಟ್ಟಿ, ಸಜ್ಜಿ ರೊಟ್ಟಿ, ಬೇರೆ ಬೇರೆ ತರದ ಕಾಳಿನ ಪಲ್ಯ, ಬದನೆಕಾಯಿ ಪಲ್ಯ, ಪಟ್ನಿ, ಚಿತ್ರಾನ್ನ, ಪುಳಿಯೊಗರೆ, ಮೈಸೂರುಪಾಕು, ಜಲೇಬಿ ಹೋಳಿಗೆ, ಉಪ್ಪಿನಕಾಯಿ, ಹಪ್ಪಳ, ಸಂಡಿಗೆ ಹೀಗೆ ಮುಂತಾದ ಭಕ್ಷ್ಯಗಳನ್ನು ಬಯಕೆಬುತ್ತಿಯಾಗಿ ತರುತ್ತಾರೆ. ಈ ಊಟ ಕೇವಲ ಮಗಳಿಗಾಗಿ ಮಾತ್ರವಲ್ಲದೆ ಸೀಮಂತ ಕಾರ್ಯಕ್ಕೆ ಬಂದ ಬಳಗಕ್ಕೆ ಸಾಕಾಗುವಷ್ಟು ತಂದಿರುತ್ತಾರೆ. ಗರ್ಭಿಣಿ ಸ್ತ್ರೀಗೆ ತವರು ಮನೆಯಿಂದ, ಗಂಡನ ಮನೆಯವರಿಂದ, ಬಂದು ಬಳಗದವರಿಂದ ಸೀರೆ, ಕುಪ್ಪಸ ಕೊಡುತ್ತಾರೆ. ಗರ್ಭಿಣಿ ಸ್ತ್ರೀ ಮತ್ತು ಅವಳ ಗಂಡನನ್ನು ಜೊತೆಗೆ ಕೂಡಿಸಿ ಹೂವಿನ ಹಾರ ಹಾಕಿ ಆರತಿ ಮಾಡಿ ಹಾಡು ಹಾಡುತ್ತಾರೆ. ಗರ್ಭಿಣಿಗೆ ಇಷ್ಟವಾದ ಎಲ್ಲ ತರಹದ ತಿಂಡಿಗಳಾದ ಬೆಸನ್

ಉಂಡಿ, ಹೆಸರುಂಡಿ, ಕರ್ಜಿಕಾಯಿ, ಸಿಪ್ಪಟ್ಟು, ಕೋಡುಬಳೆ, ಅವಲಕ್ಕಿ, ಮೈಸೂರುಪಾಕು, ಜಿಲೇಬಿ ಇವು ಮುಂತಾದ ತಿಂಡಿಗಳನ್ನು ಕಾರ್ಯಕ್ರಮದಲ್ಲಿ ಪ್ರದರ್ಶನಕ್ಕೆ ಇಟ್ಟಿರುತ್ತಾರೆ. ಗರ್ಭಿಣಿ ಸ್ತ್ರೀ ಅವುಗಳನ್ನು ಮುಟ್ಟುತ್ತಾಳೆ. ಅದು ಸಿಹಿಯನ್ನು ಸ್ವೀಕರಿಸಿದುದರ ಸಂಕೇತವಾಗಿರುತ್ತದೆ.

ಗರ್ಭಿಣಿಯು ಮಾನಸಿಕವಾಗಿ, ದೈಹಿಕವಾಗಿ ತುಂಬಾ ಸ್ವಸ್ಥವಾಗಿರಬೇಕಾಗಿರುತ್ತದೆ. ಸದಾ ಉಲ್ಲಾಸಿತಳಾಗಿರುವುದರಿಂದ ಹುಟ್ಟುವ ಮಗು ಎಲ್ಲಾ ರೀತಿಯಿಂದಲೂ ಚೆನ್ನಾಗಿರುತ್ತದೆ ಎಂಬ ದೃಷ್ಟಿಯಿಂದ ಗರ್ಭಿಣಿಯರಿಗೆ ಈ ರೀತಿಯಾದ ಆಚರಣೆಗಳನ್ನು ಮಾಡಿ ಸಂತೋಷಪಡಿಸುವ ಉದ್ದೇಶ ಇದಾಗಿದೆ.

**ಮದುವೆ**

ಗಂಡುಹೆಣ್ಣಿನ ಸಂಬಂಧವನ್ನು ಕಾನೂನುಬದ್ಧಗೊಳಿಸಿ ಸಂತಾನವನ್ನು ಬೆಳೆಯುವುದಕ್ಕೆ ಅನುವು ಮಾಡಿಕೊಡುವ ವ್ಯವಸ್ಥೆ ಇದು. ಕುಟುಂಬ ರಚನೆಯ ಚಾಲನಾಶಕ್ತಿ ಮದುವೆ. ಅಕ್ಕನ ಮಗಳ, ಸೋದರಮಾವನ ಹಾಗೂ ಸೋದರತ್ತೆಯ ಮಗಳ ಮದುವೆಗೆ ಒಪ್ಪಿಗೆ ಇದೆ. ಅಣ್ಣ ತಂಗಿಯರ ನಡುವೆ ಮದುವೆಗೆ ಬಲವಾದ ನಿಷೇಧ ಹೇರಲಾಗಿದೆ. ಒಂದೇ ಗೋತ್ರ ಅಥವಾ ಬೆಡಗು ಇರುವವರ ನಡುವೆ ಮದುವೆ ನಿಷಿದ್ಧ. ಕೈ ಬೆರಳುಗಳಿಗೆ ದಾರ ಹಾಕಿ ಮದುವೆ ಹೊಂದಾಣಿಕೆ ನೋಡುವುದೂ ಉಂಟು.

ಮದುವೆಗೆ ಮುನ್ನ ಆನೆಗೊಂದಿಯ ಎರಡೂ ಕಡೆಯ ಮನೆಗಳಲ್ಲಿ ವಿವಿಧ ಶಾಸ್ತ್ರಗಳು ನಡೆಯುತ್ತವೆ. ಮದುವೆಗೆ ಮುಂಚೆ ಇಬ್ಬರ ಬೀಗರು ನಡುವೆ ದೇವರೂಟ ನಿಶ್ಚಿತಾರ್ಥ ನಡೆಯುತ್ತದೆ. ಇದನ್ನು ಇಳೇವು ಎಂತಲೂ ಕರೆಯುತ್ತಾರೆ. ಇದನ್ನು ಹೋಳ್ಗಿ ಗಟ್ಟಿ ಆತು ಎಂದು ಅರ್ಥೈಸುತ್ತಾರೆ. ಮದುವೆಯ ಜಾತಿಯ ಆಧಾರದಲ್ಲಿ ಅಥವಾ ಅನುಕೂಲದ ಮೇರೆಗೆ ಗಂಡಿನ ಅಥವಾ ಹೆಣ್ಣಿನ ಮನೆಯ ಮುಂದೆ, ಛತ್ರ, ದೇವಸ್ಥಾನ, ಬಯಲು ಜಾಗದಲ್ಲಿ ನಡೆಯುತ್ತದೆ.

ಮದುವೆ ಹೆಣ್ಣಿನ ಮನೆ ಮುಂದೆ ನಡೆದರೆ ಲಗ್ನ ಪತ್ರ ಕಟ್ಟಿಸುವುದು, ಹಾಲ್ಗಂಬ ಹಾಕುವುದು, ಹಂದ್ರ ಪೂಜೆ, ಸುರುಗಿ ನೀರು, ನಿಶ್ಚಯ ತಾಂಬೂಲ, ಎಣ್ಣೆ ಬೀರುವುದು, ನಾಂದಿ ಸ್ಥಾಪನಾ, ಚಟ್ಟು ಬಡಿಯುವುದು, ಮದುಮಗಳನ್ನು ಮಾಡುವುದು, ನಿಶ್ಚಿತಾರ್ಥ, ಹೈರಾಣಿ ತರುವುದು, ಗೌರಿಪೂಜೆ, ಕಾಶೀಪೂಜೆ, ಉಪನಯನ, ಸಪ್ತಪದಿ, ಅರಿಸಿನೆಣ್ಣೆ ಶಾಸ್ತ್ರ, ಕಂಕಣ ಕಟ್ಟುವುದು, ಉರುಟಣೆ, ಉಂಗುರದಾಟಿ, ಹವಳದಾಟಿ, ಹಾಲುತ್ತುಪ್ಪ, ಕೆರೆ ಮೀಯಿಸುವುದು, ಹೋಮ, ಅರುಂಧತಿ ನಕ್ಷತ್ರ ದರ್ಶನ, ಸುರಗಿ, ಮೆರವಣಿಗೆ, ಮಧುಮಗಳಿಗೆ ಕೊಡುವ ಸಾಮಾನುಗಳ ಮೆರವಣಿಗೆ. ಬಚ್ಚಿಟ್ಟ ಮಧುಮಗಳನ್ನು ಹುಡುಕಿ ಹೆಗಲ ಮೇಲೆ ಹೊತ್ತು ತರುವುದು. ಸುರಿಗಿ ಸುತ್ತುವುದು, ಸುರುಗಿ ಸ್ನಾನ ಮಾಡುವುದು, ವಾರದ ನೀರು ಹೀಗೆ ಹಲವು ಆಚರಣೆಗಳು ಜರುಗುತ್ತವೆ.

ಬಹುತೇಕ ಸಮುದಾಯದವರು ಹಸೆಮಂಟಪದಲ್ಲಿ ತಾಳಿ ಕಟ್ಟುತ್ತಾರೆ. ಸಾಮಾನ್ಯವಾಗಿ ವೀರಶೈವ ಸಮುದಾಯದವರು ದೇವರ ಮುಂದೆ ತಾಳಿಕಟ್ಟಿ ನಂತರ ದೈವದ ಮುಂದೆ ಬಂದು ನಿಲ್ಲುತ್ತಾರೆ. ದೇವರ ಸ್ಯಾಸೆ, ದೈವದ ಸ್ಯಾಸೆ ಎಂಬುದು ಮಾಂಗಲ್ಯದ ಸಂದರ್ಭದಲ್ಲಿ ನಡೆಯುವ ಆಚರಣೆಗಳು. ಮಾಂಗಲ್ಯವಾದ

ನಂತರ ಕಟ್ಟಿಗೆಯ ಗೊಂಬೆಯನ್ನು ಅವರ ಮಗು ಎಂದು ಭಾವಿಸಿ ನಾಮಕರಣ ಮಾಡುತ್ತಾರೆ. ಕನ್ಯಾದಾನ ಅಥವಾ ಹೆಣ್ಣನ್ನು ಹುಡುಗನ ತಂದೆತಾಯಿ, ಬಂಧುಗಳ ದೈವದ ಸಮಕ್ಷಮ ಒಪ್ಪಿಸುವುದು. ಉಡಿ ಅಕ್ಕಿ ಹಾಕುವುದು, ಮುಂತಾದ ಕಾರ್ಯಕ್ರಮ ಆನೆಗೊಂದಿ ಗ್ರಾಮದಲ್ಲಿ ಪ್ರಚಲಿತದಲ್ಲಿವೆ.

**ಸಾವಿನ ಆಚರಣೆ**

ಸಾಯುವ ಕೊನೆ ಕ್ಷಣಗಳಲ್ಲಿ ಎದುರಿಗಿದ್ದವರು ತುಳಸಿ ನೀರು ಹಾಕುತ್ತಾರೆ. ಹೆಂಡತಿ ಮಕ್ಕಳೆಲ್ಲ ಚಮಚಮದಿಂದ ಬಾಯಲ್ಲಿ ನೀರು ಬಿಡುತ್ತಾರೆ. ಸತ್ತಮೇಲೆ ಕಣ್ಣು ತೆರೆದಿದ್ದರೆ ಕಣ್ಣು ಮುಚ್ಚುತ್ತಾರೆ. ಮೂಗಿನ ಹೊಳ್ಳೆಗಳಿಗೆ ಹತ್ತಿ ಇಟ್ಟು ಕೈಕಾಲು ಮುಚ್ಚಿಡುತ್ತಾರೆ. ಕಾಲಿನ ೨ ಹೆಬ್ಬೆರಳನ್ನು ಸೇರಿಸಿ ದಾರ ಕಟ್ಟುತ್ತಾರೆ. ತಲೆಯ ಹತ್ತಿರ ದೀಪ ಹಚ್ಚುವುದು, ಅಂಗಳದಲ್ಲಿ ಕುಳ್ಳಿನ ಬೆಂಕಿ ಹಾಕುತ್ತಾರೆ. ಕೆಲವರು ಕೂಡಿಸಿ ಗುಟಿಗೆ ಬಡಿಯುತ್ತಾರೆ. ಕ್ಷತ್ರಿಯರು, ಬ್ರಾಹ್ಮಣರು, ವೈಶ್ಯರು, ಶವವನ್ನು ಸುಡುತ್ತಾರೆ. ಹಿರೇಬ್ಯಾನಿ, ತೊನ್ನು ಬಂದವರನ್ನು ಸಹ ಜಾತಿಭೇದವಿಲ್ಲದೆ ಸುಡುತ್ತಾರೆ. ಗಂಗಾಮತಸ್ಥರು, ಬಲಿಜ, ಕುರುಬ, ಲಿಂಗಾಯತ ಮುಂತಾದ ಜಾತಿಯವರು ಹೂಳುತ್ತಾರೆ. ಸತ್ತ ಮೂರನೇ ಅಥವಾ ೫ನೇ ದಿನದಲ್ಲಿ ಸತ್ತ ಜಾಗದಲ್ಲಿ ಕುರಿ ಅಥವಾ ಕೋಳಿ ಬ್ಯಾಟಿ ಮಾಡಿ ಅದರ ರಕ್ತ ಹೂಳುತ್ತಾರೆ. ಸಮಾಧಿಯ ಮೇಲೆ ಅಥವಾ ಸುಟ್ಟ ಜಾಗದಲ್ಲಿ ತಲೆ, ಎದೆ, ಕಾಲಿನ ಭಾಗದಲ್ಲಿ ೩ನೇ ದಿನದಲ್ಲಿ ಅನ್ನದ ಪಿಂಡ ಇಡುತ್ತಾರೆ. ಇದನ್ನು ಕಾಗೆ ಮುಟ್ಟಿದರೆ ಶ್ರೇಷ್ಠ ಎಂಬ ಭಾವನೆ ಇದೆ.

೨ನೇ ಅಥವಾ ೧೧, ೧೬ನೇ ದಿನದಂದು ವೈಕುಂಠ ಸಮಾರಾಧನೆ ಮಾಡುತ್ತಾರೆ. ಸತ್ತ ಜಾಗದಲ್ಲಿ ಎಡಿ ಮಾಡಿಕೊಡುವುದು, ಪೂಜೆ ಪುನಸ್ಕಾರ ಸಲ್ಲಿಸುವುದು, ಲೋಬಾನ ಹಾಕುವುದು ಮತ್ತು ದೈವದ ಊಟ ನಡೆಯುತ್ತದೆ. ಗಂಡ ಸತ್ತರೆ ಕೆಲವರು ಅಂದೇ ಹೆಂಡತಿಗೆ ಬಳೆ, ಕುಂಕುಮ ತೆಗೆದರೆ ಕೆಲವರು ೧೧ನೇ ದಿನದಂದು ತೆಗೆಯುತ್ತಾರೆ. ವಿಧವೆಯಾದವರು ೧೧ ದಿನದವರೆಗೆ ಯಾರಿಗೂ ಮುಖ ತೋರಿಸುವಂತಿಲ್ಲ.

ತಂದೆ, ತಾಯಿ, ಹೆಂಡತಿ ತೀರಿಕೊಂಡರೆ ಕೆಲವರು ಅಂದೇ ತಲೆ ಬೋಳಿಸಿಕೊಳ್ಳುತ್ತಾರೆ. ಇದು ಋಣ ತೀರಿಸಿದ ಸಂಕೇತವಾಗಿ ಆಚರಣೆ ಮಾಡುತ್ತಾರೆ. ೧೧ ಅಥವಾ ೧೩ ದಿನಗಳವರೆಗೆ ಕರ್ಮಮಾಡಿದವರು, ಬೆಂಕಿ ಹಿಡಿದವರು ಯಾರನ್ನೂ ಮುಟ್ಟುವಂತಿಲ್ಲ. ೯ ದಿನ ಅಥವಾ ೧೩ನೇ ದಿನ ಕರ್ಮ ಮಾಡಿದವರು ಯಾವುದಾದರೊಂದು ಕ್ಷೇತ್ರ ಅಥವಾ ದೇವಸ್ಥಾನದಲ್ಲಿ ಒಂದು ರಾತ್ರಿ ನಿದ್ದೆಮಾಡುವುದು ಬೀಗರಾಗುವವರ ಮನೆಯಲ್ಲಿ ಹೋಳಿಗೆ ಉಂಡು, ಹೊಸ ಬಟ್ಟೆ ಸ್ವೀಕರಿಸಿ ಬರುವುದರೊಂದಿಗೆ ಸತ್ತಾಗ ಮಾಡುವ ಆಚರಣೆ ಕೊನೆಗೊಳ್ಳುತ್ತದೆ. ನಂತರ ವರ್ಷಕ್ಕೊಮ್ಮೆ ವೈದಿಕ ಮಾಡುವುದು, ಉಗಾದಿ ಮಹಾನವಮಿಯದಿನ ಹಿರೇರನ್ನು ಕರೆದುಕೊಳ್ಳುವ ಮೂಲಕ ಸ್ವರ್ಗಸ್ಥರಾದ ಹಿರಿಯರ ಆಹ್ವಾನದ ಆಚರಣೆ ಮಾಡುತ್ತಾರೆ. ಸತ್ತಾಗ ಕ್ಷತ್ರಿಯರಿಗೆ, ಬಲಿಜರಿಗೆ ದಾಸಯ್ಯ ಸ್ವಾಮಿ ಆಚರಣೆಗಳನ್ನು ಮಾಡಿಸುತ್ತಾರೆ, ವೈಶ್ಯ, ಬ್ರಾಹ್ಮಣರಿಗೆ, ಬ್ರಾಹ್ಮಣರು ಕೆಲವರಿಗೆ ಐನೇರು ಮಾಡಿಸುತ್ತಾರೆ.

## ೬.೨. ವಾರ್ಷಿಕಾವರ್ತನದ ಆಚರಣೆಗಳು

### ಗೋಕುಲಾಷ್ಟಮಿ

ಆನೆಗೊಂದಿ ಸಂಸ್ಥಾನದಲ್ಲಿ ನಡೆಯುವ ಗೋಕುಲಾಷ್ಟಮಿ ಆಚರಣೆಯನ್ನು ಇಲ್ಲಿನ ಜನರು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ. ಹನುಮ ಜನಿಸಿದ ಪ್ರದೇಶವೆಂದು ಜನ ಭಾವಿಸಿದ್ದರೂ ಕೃಷ್ಣ ದೈವದ ಆಚರಣೆಗೆ ಯಾವುದೇ ಲೋಪನೆಸಗದಂತೆ ಆಚರಿಸಲಾಗುತ್ತಿರುವುದು ಗಮನಿಸಲಾಗುತ್ತಿತ್ತು. ಕೃಷ್ಣನಿಗೆ ಅಭಿಷೇಕ ಮಾಡಿ ನಾನಾ ತರಹದ ಹೂವುಗಳಿಂದ, ತುಳಸಿಯಿಂದ ಅಲಂಕರಿಸಿ, ಪಲ್ಲಂಗದಲ್ಲಿ ಕೂಡಿಸಿ ತೊಟ್ಟಿಲು ತೂಗಿ ಹಾಡು ಹಾಡಿ ಸಂಭ್ರಮಿಸುತ್ತಿದ್ದರು. ಈ ದಿನಗಳಲ್ಲಿ ಹೀಗೆ ಲಡ್ಡಿನ ತಿನಿಸುಗಳು ಒಂದು ಡಜನ್ ಆಗುತ್ತಿದ್ದವು. ಶ್ರೀ ಕೃಷ್ಣನಿಗೆ ಇಷ್ಟವೆಂದು ಹಾಲಿನಲ್ಲಿ, ಮೊಸರಿನಲ್ಲಿ ಮಾಡುವ ದಿನಿಸುಗಳು ಸಾಕಷ್ಟು. ಗೋದಿ ಅಕ್ಕಿ ಹಿಟ್ಟಿನ ದಿನಿಸುಗಳು, ಹಾಲಿನ ಕೋವಾ, ಜಿಲೇಬಿಗಳನ್ನು ಪ್ರತಿಮನೆಯಲ್ಲಿ ಮಾಡಿ ದೇವರಿಗೆ ನೈವೇದ್ಯ ಮಾಡಿ, ಊಟ ಮಾಡಿ ಸಂತಸಪಡುತ್ತಿದ್ದರು ಎಂಬುದು ಸ್ಥಳೀಯರ ಅಭಿಪ್ರಾಯ.

ಗೋಕುಲಾಷ್ಟಮಿ ಬಂತು ಎಂದರೆ ಆನೆಗೊಂದಿ ಅರಮನೆ ಮುಂಬಾಗದಲ್ಲಿ ಉಟ್ಟು ಒಡೆಯುವ ಕಾರ್ಯಕ್ರಮ ಏರ್ಪಡಿಸಲಾಗುತ್ತಿತ್ತು. ಎಂಟು ಅಡಿಯ ಎತ್ತರದ ಬಲಿಸಿಗೆ ಜಾರುವ ಬೇವಿಯ ರಸ ಪೂರ್ತಿಯಾಗಿ ಹಚ್ಚಿ ಬಿಸಿಲಿನಲ್ಲಿ ಕಾಯಲಿಟ್ಟು ನಂತರ ನಾನಾ ತರಹದ ಜಾರುವ ವಸ್ತುಗಳನ್ನು ಬಲಿಸಿಗೆ ಹಚ್ಚಿ ನುಣ್ಣಗೆ ಜಾರುವ ರೀತಿ ಮಾಡಿ ಅರಮನೆ ಮುಂಭಾಗದಲ್ಲಿ ಬಲಿಸನ್ನು ತಗ್ಗಿನಲ್ಲಿ ಹೂತಿಟ್ಟು ಬಲಿಸಿಗೆ ಸುತ್ತ ಬಟ್ಟೆಯನ್ನು ಸುತ್ತಿ ಅಲಂಕಾರ ಮಾಡಿ ಮೂರು ನಾಲ್ಕು ತರೇಲಿಗಳಲ್ಲಿ ಬಣ್ಣ ತುಂಬಿದ ನೀರನ್ನು ಶೇಖರಿಸಿಟ್ಟುಕೊಂಡು ಬಲಿಸಿನ ಮೇಲ್ಭಾಗದಲ್ಲಿ ಒಂದು ಮೂಟೆಯಲ್ಲಿನ ಹಿಟ್ಟಿನಿಂದ ಮಾಡಿದ ತಿನಿಸುಗಳು ಹಾಗೂ ಬೆಳ್ಳಿಯ ನಾಣ್ಯಗಳನ್ನು ಕಟ್ಟಿದ ಉಂಡೆಯನ್ನು ತಿರುಗಿಸುತ್ತಿರಲು ಕಟ್ಟಿದ ನಾಣ್ಯ ಹಾಗೂ ಉಂಡೆಗಳನ್ನು ಯಾರು ಪಡೆಯುತ್ತಾರೋ ಆ ದಿನದ ಗೆಲುವಿನ ವ್ಯಕ್ತಿ ಎಂದು ಗೌರವಿಸಲಾಗುತ್ತಿತ್ತು. ಉಟ್ಟನ್ನು ತಿರುಗಿಸಲು ಅದನ್ನು ಪಡೆಯುವವನ ಮೇಲೆ ಬಣ್ಣದ ನೀರು, ಹಾಲು ಮೊಸರು ಎರಚಲಾಗುತ್ತಿತ್ತು. ಈ ಮೋಜಿನಾಟವನ್ನು ವೀಕ್ಷಿಸಲು ಸಾವಿರಾರು ಸಂಖ್ಯೆಯಲ್ಲಿ ಅರಮನೆಯ ಮುಂಭಾಗದಲ್ಲಿ ಜನ ಸೇರುತ್ತಿದ್ದರು. ಬಣ್ಣದ ನೀರು, ಹಾಲು ಮೊಸರನ್ನು ಲೆಕ್ಕಿಸದೆ ಉಟ್ಟನ್ನು ಪಡೆದು ಗೆಲುವಿಗೆ ಕಾರಣರಾಗುತ್ತಿದ್ದರು. ನಂತರ ಕೃಷ್ಣನ ವೇಷ ಧರಿಸಿ ನಾಲ್ಕು ಪ್ರಮುಖ ರಸ್ತೆಗಳಲ್ಲಿ ಮೆರವಣಿಗೆ ಸಮೇತ ಶ್ರೀರಂಗನಾಥ ಗುಡಿಗೆ ಸೇರುತ್ತಿದ್ದರು.

### ಬನ್ನಿ ಹಬ್ಬ (ವಿಜಯದಶಮಿ)

ಆನೆಗೊಂದಿ ಸಂಸ್ಥಾನದ ಕಾಲಘಟ್ಟದಲ್ಲಿ ವೈಭವದ ಆಚರಣೆಯಾಗುಳಿದ ಬನ್ನಿಹಬ್ಬವು ಇಂದಿಗೂ ಇಲ್ಲಿ ಉಳಿದುಕೊಂಡು ಬಂದಿದೆ. ಅರಮನೆಯನ್ನು ತಳಿರು ತೋರಣಗಳಿಂದ ಅಲಂಕರಿಸಿ ಹತ್ತು ದಿನಗಳವರೆಗೆ ದಿನಕ್ಕೊಂದು ದೇವರ ವೇಷವನ್ನು ಹಾಕಿ ಮನರಂಜಿಸಲಾಗುತ್ತಿತ್ತು. ಅಲ್ಲದೆ ಅರಮನೆಯ ಒಳಭಾಗದಲ್ಲಿ ಕನಕಗಿರಿಯಿಂದ ವಿಧ ವಿಧದ ಗೊಂಬೆಗಳನ್ನು ತರಿಸಿ ಗೊಂಬೆಗಳನ್ನು ಇಟ್ಟು ಜನರಿಂದ ವೀಕ್ಷಿಸಲ್ಪಡುತ್ತಿತ್ತು.

ಆಯುಧ ಪೂಜೆಯ ದಿನ ಯುದ್ಧದ ಆಯುಧಗಳನ್ನು ಇಟ್ಟು ಅಲಂಕರಿಸಿ ಭಕ್ತಿಪೂರ್ವಕವಾಗಿ ಪೂಜೆಗೈಯ್ಯಲಾಗುತ್ತಿತ್ತು. ವಾದ್ಯಸಮೇತ ರಾಜರನ್ನು ಅರಮನೆಯಿಂದ ಆಹ್ವಾನಿಸಿ ಶ್ರೀ ರಂಗನಾಥನ ಗುಡಿಯಿಂದ ಹೊರಟು ಮಹಾರಾಜರು ಊರಿನ ಎಲ್ಲರ ಸಮಕ್ಷಮ ಮಲ್ಲಾರು ಗುಡಿ ಹತ್ತಿರ ಬನ್ನಿ ಮಹಾಂಕಾಳಿಗೆ ತೆರಳಿ ಬನ್ನಿ ಮಹಾಂಕಾಳಿ ಹತ್ತಿರ ಗುರಿಸಾಧನೆ ಬಂದೂಕಿನಿಂದ ದೂರದ ಒಂದು ತೆಂಗಿನ ಕಾಯಿ ಇಟ್ಟು ಬಂದೂಕಿನಿಂದ ತೆಂಗಿನಕಾಯಿಗೆ ಒಡೆಯುವ ಪದ್ಧತಿ ಇತ್ತು. ನಂತರ ಬನ್ನಿ ಮಹಾಂಕಾಳಿಯನ್ನು ಊರಿನ ನಾಲ್ಕು ಮುಖ್ಯ ಬೀದಿಗಳನ್ನು ಸುತ್ತಿಸಿಕೊಂಡು ಶ್ರೀರಂಗನಾಥನ ಗುಡಿಗೆ ಸೇರಿಸಲಾಗುತ್ತಿತ್ತು. ನಂತರ ರಾಜಭವನಕ್ಕೆ ಊರಿನ ಸಮಸ್ತ ಜನರು ತೆರಳಿ ಮಹಾರಾಜರಿಗೂ, ಮಹಾರಾಣಿಯರಿಗೂ ಬನ್ನಿ ಕೊಟ್ಟು ಶುಭ ಕೋರುತ್ತಿದ್ದರು. ರಾಜಪುರೋಹಿತರು ಸಹಿತ ರಾಜಭವನಕ್ಕೆ ತೆರಳಿ ಮಹಾರಾಜರನ್ನು ಭೇಟಿಯಾಗಿ ಶುಭ ಕೋರಿ ದಕ್ಷಿಣೆಯನ್ನು ಪಡೆದು ಆಶೀರ್ವದಿಸಿ ಬರುತ್ತಿದ್ದರು. ಮುಂದೆ ಊರಿಗೆ ಊರೇ ಬನ್ನಿ ಮುಡಿಯುತ್ತದೆ.

ದಸರೆಯ ಸಂಭ್ರಮಾಚರಣೆಯ ಸಂದರ್ಭದಲ್ಲಿ ರಾಜರು, ಊರಿನ ರೈತರು ಮೃಗ ಭೇಟೆಯಾಡುವ, ಮಹಾಂಕಾಳಿಗೆ ಬಲಿ ಕೊಡುವ ಪದ್ಧತಿಯೂ ಇತ್ತೆಂಬುದು ಸ್ಥಳೀಯರ ನಂಬಿಕೆ. ಆದರೆ ಈಗ ಈ ಪದ್ಧತಿ ಇರುವುದಿಲ್ಲ.

ಚಿಕ್ಕವರು ಮೊದಲು ದೊಡ್ಡವರಿಗೆ ಬನ್ನಿ ಕೊಟ್ಟು "ಬನ್ನಿ ತೆಗೆದುಕೊಂಡು ಬಂಗಾರದಂತೆ ಇರೋಣ" ಬಾಳೋಣ ಎಂಬ ಮಾತನ್ನು ಹೇಳುತ್ತಾ ಹಿರಿಯರ ಕಾಲಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆಯುತ್ತಾರೆ. ನಂತರ ಹಿರಿಯರು ಕಿರಿಯರಿಗೆ ಬನ್ನಿಕೊಟ್ಟು ದೇವರು ನಿಮ್ಮನ್ನು ಚೆನ್ನಾಗಿ ಇಟ್ಟಿರಲಿ ಎಂದು ಆಶೀರ್ವದಿಸುತ್ತಾರೆ. ಬನ್ನಿಯನ್ನು ಕೊಡುವುದು, ತೆಗೆದುಕೊಳ್ಳುವುದು ಒಂದು ಪ್ರೀತಿ ವಿಶ್ವಾಸದ ದ್ಯೋತಕವಾಗಿರುವುದರಿಂದ ಇಲ್ಲಿ ಜಾತಿ, ವರ್ಗ, ವಯೋಮಾನದ ಬೇಧಗಳಿಲ್ಲದೆ ಏಕಭಾವದಿಂದ ಇಡೀ ಊರಿಗೆ ಊರೇ ಆಚರಿಸಲ್ಪಡುವ ಹಬ್ಬ ಇದಾಗಿದೆ.

ಈ ಹಬ್ಬಕ್ಕೆ ಬಹು ಹಿರಿದಾದ ಪರಂಪರೆ ಇದೆ. ಅಜ್ಞಾತವಾಸಕ್ಕೆ ಹೋದ ಪಾಂಡವರು ಅದನ್ನು ಮುಗಿಸಿಕೊಂಡು ಶಮೀ ವೃಕ್ಷದಲ್ಲಿಟ್ಟ ತಮ್ಮ ಶಸ್ತ್ರಾಸ್ತ್ರಗಳನ್ನು ಇಳುವಿಸಿಕೊಂಡ ದಿನವಿದು. ಅಂತೆಯೇ ಈಗಲೂ ಜನರು ಶಸ್ತ್ರಾಸ್ತ್ರಗಳನ್ನು ಮೆರೆಸುತ್ತಾ ಬನ್ನಿಯನ್ನು ಮುಡಿದು ಊರ ಸೇರುವರು. ರೈತರು, ಈಗಲೂ ಕೊಡ್ಲಿ, ಕುಡುಗೋಲು, ಗಂಡುಗೊಡಲಿ ಖಡ್ಗಗಳನ್ನು ಪೂಜೆಯ ದಿನ, ಪೂಜೆ ಮಾಡುವ ಪದ್ಧತಿ ಇಟ್ಟುಕೊಂಡಿದ್ದಾರೆ. ವನವಾಸಕ್ಕೆ ಹೋದ ಪಾಂಡವರು ಶಸ್ತ್ರಾಸ್ತ್ರಧಾರಿಗಳಾಗಿ ಅಂದೇ ಊರನ್ನು ಸೇರಿದರೆಂದು ಒಂದು ಪೌರಾಣಿಕ ಕಥೆಯೂ ಉಂಟು. ಈ ಕಥೆಯನ್ನೇ ನಂಬಿದರೆ, ವಿರಾಟರಾಜ್ಯದಲ್ಲಿದ್ದು ತಮ್ಮ ಅಜ್ಞಾತವಾಸವನ್ನು ಮುಗಿಸಿದ ಪಾಂಡವರು ನಮ್ಮ ಜನಪದರಿಗೆ ಚಿರಪರಿಚಿತರು. ಅಲ್ಲದೆ ಜನಪದರಂತೂ ಪಾಂಡವರನ್ನು ದೇವರೆಂದು ಭಕ್ತಿಯಿಂದ ಪೂಜಿಸುತ್ತಾರೆ. ತಮ್ಮ ಮಕ್ಕಳಿಗೆ ಅವರ ಹೆಸರುಗಳನ್ನು ಇಟ್ಟು

ಕರೆಯುತ್ತಾರೆ. ಮತ್ತು ಪಾಂಡವರನ್ನು ಸುಗ್ಗಿಯಲ್ಲಿ ಕಣದ ದಂಡೆಯ ಮೇಲೆ ಇಟ್ಟು ಪೂಜೆ ಮಾಡುವುದನ್ನು ನಾವು ಕಾಣಬಹುದಾಗಿದೆ.

ಪಾಂಡವರ ಅಜ್ಞಾತವಾಸ ಆರಂಭವಾದದ್ದು ಬನ್ನಿ ದಿವಸ. ಅವರ ಅಜ್ಞಾತವಾಸವನ್ನು ಒಕ್ಕಲಿಗರು ಕರಳು ಕರಗುವಂತೆ ಮನ ಮಿಡಿಯುವಂತೆ ಹಾಡಿದ್ದಾರೆ.

**ಕಲ್ಲು ಕಡುಬ ಮಾಡಿ, ಮುಳ್ಳು ಶಾವಿಗೆ ಮಾಡಿ**
**ಬನ್ನಿ ಎಲಿಯಾಗ ಎಡಿ ಮಾಡಿ ಪಾಂಡವರು**
**ಉಂಡು ಹೋಗ್ಯಾರ ವನವಾಸ**

ಅವರು ಕಡುಬು ಮಾಡಿ ಉಂಡದ್ದು ಕಲ್ಲು, ಸಾವಿಗೆ ಮಾಡಿ ಬಸಿದದ್ದು ಮುಳ್ಳು ಎಂದು ಹೇಳಿ ಒಕ್ಕಲಿಗರು ಪಾಂಡವರಿಗೆ ಬಂದ ವನವಾಸವನ್ನು ಎಂದೇ ಶಬ್ದಗಳಲ್ಲಿ ಹೇಳಿಬಿಟ್ಟಿದ್ದಾನೆ. ಈ ಊಟವನ್ನು ಅವರು ಎಂದು ಹೋದದ್ದು ಬನ್ನಿಯ ಎಲೆಯಲ್ಲಿ ಎಂದು ಹೇಳುವುದರಲ್ಲಿ ಬನ್ನಿಪತ್ರಿಯ ಮಹತ್ವವು ಪಾಂಡವರ ಕಾಲದಲ್ಲಿಯೂ ಇತ್ತೆಂದು ಊಹಿಸಬಹುದು. ಅಲ್ಲದೆ ಪಾಂಡವರು ಈ ಬನ್ನಿಮಹಾಂಕಾಳಿಗೆ ತಮ್ಮ ಶಸ್ತ್ರಾಸ್ತ್ರಗಳನ್ನು ತಾವು ಅಜ್ಞಾತವಾಸ ಮುಗಿಸಿಕೊಂಡು ಬರುವವರೆಗೆ ಕಾಯೆಂದು ಬೇಡಿಕೊಳ್ಳುವುದೆನ್ನ ನೋಡಿದರೆ ಪಾಂಡವರ ಕಾಲದಲ್ಲಿಯೂ ಬನ್ನಿಯ ಹಬ್ಬವು ಇರಬಹುದೆಂದು ಊಹಿಸಲೂಬಹುದಾದರೆ. ಮುಂದೆ ಪಾಂಡವರ ಪ್ರಸಂಗದ ನಂತರ ಈ ಹಬ್ಬವು ಹೆಚ್ಚು ಜನತೆಗೆ ಆದರವಾಗಿ ಜನಾಂಗದಲ್ಲಿ ಸಂಪ್ರದಾಯವಾಗಿ ಬಂದಿರಬಹುದು. ಆದುದರಿಂದ ಪಾಂಡವರಿಂದಲೇ ಈ ಹಬ್ಬವು ಸುರುವಾಯಿತೆಂದು ಹೇಳಬಹುದು. ಇದು ಭರತ ಖಂಡದಲ್ಲಿ ಬುನಾದಿಯಿಂದಲೂ ಬಂದ ಸಂಪ್ರದಾಯವೆಂದು ಹೇಳಬಹುದಾಗಿದೆ.

**ದೀಪಾವಳಿ (ದೀವಳಿಗೆ)**

ಸಾಮಾನ್ಯವಾಗಿ ಮಧ್ಯಮ ಶ್ರೀಮಂತ ವರ್ಗಗಳಲ್ಲಿ, ವ್ಯಾಪಾರಸ್ಥರಲ್ಲಿ ಈ ಆಚರಣೆ ಹೆಚ್ಚಾಗಿ ಕಂಡುಬರುತ್ತದೆ. ಈ ಹಬ್ಬದ ಅಂಗವಾಗಿ ವಾರಗಟ್ಟಲೆ ಆಡಲಾಗುವ ಇಸ್ಪೀಟ್ ಆಟದಲ್ಲಿ ಮಾತ್ರ ಆನೆಗೊಂದಿಯ ಎಲ್ಲಾವರ್ಗವೂ ಭಾಗವಹಿಸುತ್ತದೆ. ಈ ಆಚರಣೆಗೂ ಸಹ ಪುರಾಣ ಕಾಲದ ಹಿನ್ನೆಲೆ ಇಲ್ಲದಿಲ್ಲ. ಹಿಂಗಾಗಿ ಮಳೆಯು ಪ್ರಾರಂಭವಾಗಿ ಬಿತ್ತುಗೆಗಳೆಲ್ಲ ಮುಗಿದು ಸಸಿಗಳು ತಲೆ ಎತ್ತಿ ಗರಿಬಿಡುತ್ತಿರಲು ಬರುವ ಇನ್ನೊಂದು ದೊಡ್ಡ ಸಂಪ್ರದಾಯದ ಹಬ್ಬ ಇದಾಗಿದೆ. ಇದಕ್ಕೆ ಹೆಣ್ಣು ಮಕ್ಕಳು ನೀರು ತುಂಬುವ ಹಬ್ಬವೆಂತಲೂ ಕರೆಯುತ್ತಾರೆ. ಆಗ ಮನೆಯಲ್ಲಿ ದೀಪಾರಾಧನೆಯಾಗುವುದು, ಪಾಂಡವರು ವನವಾಸ ಮುಗಿಸಿಕೊಂಡು ವಿಜಯದಶಮಿಯಾದನಂತರ ದಕ್ಷಿಣ ಭಾರತ ಖಂಡವನ್ನು ಬಿಟ್ಟು ಉತ್ತರ ಹಸ್ತಿನಾವತಿಯನ್ನು ಸೇರುವದೆಂದು ಪೌರಾಣಿಕ ಕಥೆಯುಂಟು. ಅಂತೆಯೇ ಒಕ್ಕಲಿಗತನ ಪ್ರತಿಪದೆಯ ದಿವಸ ಸೆಗಣಿಯಿಂದ ಪಾಂಡವರನ್ನು ಮಾಡಿ ಅವರನ್ನು ಊರಲ್ಲಿ ಬರಮಾಡಿಕೊಳ್ಳುವನು.

**ಹಾಸುಗಲ್ಲಿನ ಮೇಲೆ ಹಾದು ಹೋದವರ್‍ಯಾರು**

**ಪಾದ ಮೂಡ್ಯಾವ ಪರಿಪರಿ ಪಾಂಡವರು**

**ಹಾದು ಹೋಗ್ಯಾರ ಜಳಕಕ**

ಎಂದು ಪಾಂಡವರು ಊರ ಸೇರಿ ಜಳಕಕ್ಕೆ ಕಾಯ್ದು ಹೋಗಲಾಗಿ ಹೆಜ್ಜೆಗಳು ಮೂಡಿದವು.

ದೀಪಾವಳಿಯ ಹಿಂದಿನ ದಿನವನ್ನು ನರಕ ಚತುರ್ದಶಿ ಎಂದು ಆಚರಿಸುತ್ತಾರೆ. ಒಂದು ಕುಟುಂಬದ ಎಲ್ಲಾ ಗಂಡು ಮಕ್ಕಳಿಗೆ ಆ ಮನೆಯ ಹೆಣ್ಣುಮಕ್ಕಳು ಮುಂಜಾನೆ ೫ ಘಂಟೆಗೆ ಮಣೆಯ ಮೇಲೆ ಕೂಡಿಸಿ ಆರತಿ ಮಾಡುತ್ತಾರೆ. ಅಂದು ಆರತಿ ಮಾಡಿಸಿಕೊಂಡ ಗಂಡಸರಿಗೆ ತಲೆ ಸ್ನಾನ ಮಾಡಿ ಬಂದ ಬಳಿಕ ಸಿಹಿತಿಂಡಿಕೊಂಡು ಸತ್ಕರಿಸುತ್ತಾರೆ. ಆರತಿ ಮಾಡಿದವರಿಗೆ ಗಂಡು ಮಕ್ಕಳು ದುಡ್ಡು ಹಾಕುವ ಪರಿಪಾಠವಿದೆ. ಮಿಠಾಯಿ ತಿನ್ನುತ್ತಾ ಬೆಳಿಗ್ಗೆಯೇ ಪಟಾಕಿ ಹಚ್ಚಿ ಸಂಭ್ರಮಿಸುತ್ತಾರೆ. ನರಕಾಸುರನ ವಧೆಯನ್ನು ಶ್ರೀಕೃಷ್ಣನು ಮಾಡಿದ ಮೇಲೆ ಆತನನ್ನು ಆರತಿ ಎತ್ತಿ ಸನ್ಮಾನಿಸಿದ ದಿನ ಇದಾಗಿರುವುದರಿಂದ ಈಗಲೂ ಈ ಆಚರಣೆ ಪ್ರಾಮುಖ್ಯತೆ ಪಡೆದಿದೆ.

ಅಮವಾಸ್ಯೆಯ ದಿನದಂದು ಲಕ್ಷ್ಮಿಯನ್ನು ಪೂಜಿಸಿ ಬಂದ ಭಕ್ತಾದಿಗಳಿಗೆ ಪುಟಾಣಿ ಹಿಟ್ಟು ಸಕ್ಕರೆ ಬೆರಸಿದ ಪ್ರಸಾದವನ್ನು ಮತ್ತು ತಾಂಬೂಲ ಹಂಚುತ್ತಾರೆ. ಲಕ್ಷ್ಮಿಗೆ ಕಾಯಿ, ಕರ್ಪೂರ, ಕುಂಬಳಕಾಯಿ ಹೊಡೆದು ಲಕ್ಷ್ಮಿಯನ್ನು ಪೂಜಿಸುತ್ತಾರೆ. ಪಾಡ್ಯದ ದಿನ ಕಳಸ, ಪುಸ್ತಕ ಇಟ್ಟು ಸರಸ್ವತಿ ಫೋಟೋಗೆ ಪುಸ್ತಕಗಳಿಗೆ ರಾತ್ರಿ ಹೆಣ್ಣು ಮಕ್ಕಳು ಆರತಿ ಮಾಡುತ್ತಾರೆ. ವ್ಯಾಪಾರಸ್ಥರಾಗಿದ್ದರೆ ಖಾತೆ ಕಿರ್ದಿಗಳನ್ನು, ವಿದ್ಯಾರ್ಥಿಗಳಾಗಿದ್ದರೆ ಅವರು ಓದುವ ಪುಸ್ತಕಗಳನ್ನು ಇಟ್ಟು ಸ್ಮರಣೆ ಮಾಡಿ ಪೂಜಿಸುತ್ತಾರೆ. ಈ ಎರಡೂ ದಿನಗಳಂದು ೫ ದೀಪಗಳನ್ನು ಹಚ್ಚುತ್ತಾರೆ. ದೇವರು ಕೊಡುವ ಗದ್ದುಗೆಗಳನ್ನು ವಿಶೇಷವಾಗಿ ಅಲಂಕರಿಸಿ, ಬಣ್ಣದ ಆಳೆಗಳಿಂದ ಸುಂದರಗೊಳಿಸಿ, ವಿದ್ಯುದೀಪಗಳಿಂದ ಮೆರಗು ಬರುವಂತೆ ಮಾಡುತ್ತಾರೆ. ಪಟಾಕಿಯ ಸದ್ದು ಊರ ತುಂಬ ಕೇಳಿ ಬರುತ್ತಿರುತ್ತದೆ. ಈ ಎರಡೂ ದಿನಗಳಂದು ಮನೆಯಲ್ಲಿ ಅನ್ನ ಸಾರು, ಹೋಳಿಗೆ ಊಟ, ಹಪ್ಪಳ, ಸಂಡಿಗೆ ಪಾಯಸ ಮುಂತಾದ ಭಕ್ಷ್ಯ ದೇವರಿಗೆ ನೈವೇದ್ಯವಾಗುತ್ತದೆ. ನಂತರ ಮನೆ ಮಂದಿಯಲ್ಲಿ ಊಟಮಾಡಿ ನಲಿಯುವ ಹಲಾಸ ಆನೆಗೊಂದಿಯಲ್ಲಿ ಬಳಕೆಯಲ್ಲಿದೆ.

**ಜೋಕುಮಾರ**

ಅಷ್ಟಮಿಯ ದಿವಸ, ಜೋಕುಮಾರನು ಹುಟ್ಟಿಬರುತ್ತಾನೆ. ಆನೆಗೊಂದಿ ಪರಿಸರದಲ್ಲಿರುವಂತೆ ಕರ್ನಾಟಕದ ಕೆಲವು ಭಾಗಗಳಲ್ಲಿಯೂ ಕಂಡುಬರುವುದು. ಉತ್ತರ ಕರ್ನಾಟಕ್ಕ ಬಹುತೇಕ ಹಳ್ಳಿಗಳಲ್ಲಿ ಈ ಆಚರಣೆ ಕಂಡುಬರುವುದು. ಭಾದ್ರಪದ ಮಾಸದಲ್ಲಿ ಬೆಳವದಲ್ಲಿ ಮಳೆಯು ಮಳೆಯು ಆಗಿ ಪೈರುಗಳು ಒಣಗ ಹತ್ತುತ್ತವೆ. ಅಲ್ಲಿಯ ರೈತರು ಜೋಕುಮಾರನು ಹುಟ್ಟಿದ ಮೇಲೆ ಮಳೆಯಾಗಬಹುದೆಂದು ಆಸೆ ಮಾಡಿ ಈ ಜೋಕುಮಾರನ ಪೂಜೆಯನ್ನು ಮಣ್ಣು ಪೂಜೆಯೆಂದು ನಂಬುತ್ತಾರೆ. ಇದು ನಾಲ್ಕನೆಯ ಮಣ್ಣು

ಪೂಜೆ ಎನ್ನಬಹುದು. ಇದು ಕೇವಲ ಒಕ್ಕಲಿಗನಿಗೆ ಬೇಕಾದ ಸಂಪ್ರದಾಯವಾಗಿದೆ. ಈ ಭಾಗದಲ್ಲಿ ಸುಣ್ಣಗಾರರಾಗಲಿ ಅಥವಾ ಹರಿಜನರಾಗಲಿ, ಅಂಬಿಗರಾಗಲಿ ಮಣ್ಣಿನಿಂದ ಜೋಕುಮಾರನನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ಓಣಿ ಓಣಿಯಲ್ಲಿ, ಮನೆ ಮನೆಗೆ ತಿರುಗಾಡುತ್ತಾರೆ. ಈ ಆಚರಣೆ ಆನೆಗೊಂದಿ ಪರಿಸರದ ಮಲ್ಲಾಪುರ, ರಾಂಪುರಗಳಲ್ಲೂ ಹೆಚ್ಚಾಗಿ ಕಂಡುಬರುತ್ತದೆ. ಮನೆಯಲ್ಲಿ ತಿಗಣೆ ಮೊದಲಾದ ಕ್ರಿಮಿ ಕೀಟಗಳ ಕಾಟ ಹೋಗಲೆಂದು ಹೆಣ್ಣುಮಕ್ಕಳು ಅಕ್ಕಿ, ಜೋಳ, ಉಪ್ಪು, ಲಭ್ಯವಿದ್ದರೆ ಇತರೆ ಕಾಳು ಕಡಿ, ಒಣಮೆಣಸಿನಕಾಯಿ ಕೊಡುವರು. ಕೆಲವರು ಜೋಕುಮಾರನನ್ನು ಹೊತ್ತು ತಂದವರಿಗೆ ಅಂಬರಿ ಹುಳಿನುಚ್ಚುಯನ್ನು ಬೆಳಸಿಗೆ ಚರಗವೆಂದು ಕೊಡುವರು. ಜೋಕುಮಾರನ ಅಂಬಲಿಯು ಬಹಳ ಮಹತ್ವದ್ದು, ಅವನು ಈ ಅಂಬಲಿಯನ್ನು ಒಯ್ದು, ತನ್ನ ಬೆಳಸು ಹುಲಸಾಗಲೆಂದು ಆ ಅಂಬಲಿಯನ್ನು ಚರಗ ಒಗೆದು ಪೂಜೆ ಮಾಡಿ ಬೆಚ್ಚು ಹಾಕುವನು. ಒಕ್ಕಲಿಗನು ತನ್ನ ಮನೆಗೆ ಬರುವದರೊಳಗೆ ಒಟ್ಟು ಮೂರ, ಚರಗಗಳನ್ನು ಭೂಮಿಗೆ ಒಗೆಯುತ್ತಾನೆ. ಜೋಕನ ಚರಗವೇ, ಅವನು ಒಗೆಯುವ ಚರಗಗಳಲ್ಲಿ ಚರಗವೆನ್ನಬಹುದು. ಘಟಿಂಗನಿಗೆ ಜೋಕುಮಾರ ಎಂದು ಈಗಲೂ ಈ ಭಾಗದಲ್ಲಿ ಸಂಭೋದಿಸುತ್ತಿರುತ್ತಾರೆ. ಜೋಕುಮಾರನ ಹುಣ್ಣಿಮೆಯೆಂದು ಹುಟ್ಟಿದ ಗಂಡು ರಸಿಕನಾಗಿರುತ್ತಾನೆಂಬುದು ಇಲ್ಲಿಯ ಜನರ ನಂಬಿಕೆ.

ಇಂಥ ಜೋಕುಮಾರನು ಯಾರು ಜನಪದರಲ್ಲಿ ಇವನಲ್ಲಿ ಆದರವು ಹೇಗೆ ದೊರೆಯಿತು ಒಕ್ಕಲಿಗನು ಇವನ ಹೆಸರಲೆ ಚರಗ ಒಗೆಯುವನೇಕೆ ಇವೇ ಮೊದಲಾದ ಪ್ರಶ್ನೆಗಳು ನನ್ನಲ್ಲಿ ಮೂಡದೆ ಇರಲಾರವು. ಪುರಾಣ ಕಥೆಗಳಲ್ಲಿ ಜೋಕುಮಾರನು ಜೋಕ ಮುನಿಯಾಗಿ ಮಗನೆಂದು ಒಂದು ಕಥೆಯೂ ಬರುವದು. ಆದರೆ ಜಾನಪದದಲ್ಲಿ ಬರುವ ಕಥೆಯು ಬೇರೆ ರೂಪಾಂತರದಲ್ಲಿ ಕಾಣುವುದು. ಈ ಜೋಕುಮಾರನ ಹೊತ್ತುಕೊಂಡು ತಿರುಗಿ ಹಾಡುವ ಹೆಣ್ಣುಮಕ್ಕಳು ಆತನ ಕಥೆಯನ್ನೇ ಹಾಡುವರು. ನಂತರ ಭಿಕ್ಷೆ ನೀಡಿದವರ ಹೆಸರನ್ನು ಹಾಡಿನಲ್ಲಿ ಸೇರಿಸಿ ಹಾಡಿ ಹರಸುವರು. ಈಗೀಗ ಶಾಲಾಮಕ್ಕಳು ಶಾಲಾ ಮನರಂಜನೆಗಳಲ್ಲಿ, ಯುವಜನ ಮೇಳಗಳಲ್ಲಿ ಈ ಆಚರಣೆಯನ್ನು ನೆನಪಿಸುತ್ತಿರುವುದು ಸ್ಮರಣೀಯ.

**ಮೊಹರಂ ಹಬ್ಬ (ಪೀರ್ಲ ಹಬ್ಬ)**

ರಜಾಕರರ ದಾಳಿ, ರಕ್ಕಸ ತಂಗಡಿ ಯುದ್ಧ ಇನ್ನೂ ಅನೇಕ ಸಂದರ್ಭಗಳನ್ನು ನೋಡಿದಾಗ ಆನೆಗೊಂದಿ ಸಂಸ್ಥಾನದ ಅವನತಿಗೆ ಮುಸಲ್ಮಾನರು ಕಾರಣರೆಂಬಂತೆ ಗೋಚರಿಸುತ್ತಾ ಹೋಗುತ್ತದೆ. ಇಂತಹ ಸಂದರ್ಭದಲ್ಲಿ ಜಾನಪದ ಹೇಗೆ ಪ್ರತಿಕ್ರಿಯಿಸಿದೆ ಎಂದು ನೋಡಹೊರಟರೆ ಭಿನ್ನ ಚರಿತ್ರೆಯೇ ಸಿಗುತ್ತದೆ. ಆನೆಗೊಂದಿ ಪರಿಸರದಲ್ಲಿ ಹಿಂದೂ ಮುಸ್ಲಿಂ ಸಾಮರಸ್ಯ ತಾನೇ ತಾನಾಗಿ ಕ್ರಿಯಾಶೀಲವಾಗಿದೆ ಮತ್ತು ಜನರಲ್ಲಿ ಅಂಥ ಸಾಮರಸ್ಯದ ಬಗೆಗೆ ನಂಬಿಕೆ ಅಥವಾ ಆಚರಣೆಗಳಿವೆ. ಮೊಹರಂ ಅಥವಾ ಪೀರ್ಲ ಹಬ್ಬವು ಆನೆಗೊಂದಿ ಪರಿಸರದಲ್ಲಿ ಪ್ರಚಲಿತದಲ್ಲಿರುವ ಹಿಂದೂ ಮುಸ್ಲಿಂ ಸಾಮರಸ್ಯಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ಮುಸಲ್ಮಾನರ ಕಾಲದ ಕಲ್ಪನೆಯಲ್ಲಿ ಮೊಹರಂ ಮೊದಲ ತಿಂಗಳಿನ ಹೆಸರು. ಈ ತಿಂಗಳಲ್ಲಿ ನಡೆಯುವ ಹಬ್ಬವಾದುದರಿಂದ ಇದಕ್ಕೆ ಮೊಹರಂ ಹಬ್ಬ ಎಂದು ಹೆಸರು. ಬಂತೆಂದು ಹೇಳಲಾಗಿದೆ. ಇದರ ಜೊತೆಗೆ ಈ

ಹಬ್ಬಕ್ಕೆ ಅಲಾವಿ ಹಬ್ಬ, ಅಲಾಯಿ ಹಬ್ಬ, ಪೀರ್ಲ ಹಬ್ಬ ಎಂಬಿತ್ಯಾದಿಯಾಗಿ ಹೆಸರುಗಳು ಆನೆಗೊಂದಿ ಪರಿಸರದಲ್ಲಿ ಪ್ರಚಲಿತದಲ್ಲಿವೆ.

ಹತ್ತು ದಿನಗಳ ಕಾಲ ನಡೆಯುವ ಈ ಹಬ್ಬಕ್ಕೆ ಹಿನ್ನೆಲೆಯಾಗಿ ಒಂದು ಕತೆಯಿದೆ. ಇಸ್ಲಾಂ ಧರ್ಮದ ಸಂಸ್ಥಾಪಕನಾದ ಮಹಮ್ಮದ್ ಪೈಗಂಬರ ತೀರಿಕೊಂಡ ಕೆಲವು ವರುಷಗಳ ಅನಂತರ ನಡೆದ ಘಟನೆಯೇ ಈ ಹಬ್ಬಕ್ಕೆ ಪ್ರೇರಣೆ. ಮಹಮ್ಮದ್ ಪೈಗಂಬರನ ಅಳಿಯನಾದ ಅಜರತ್ ಅಲಿಯು ನ್ಯಾಯ ಪಕ್ಷಪಾತಿಯಾಗಿದ್ದು, ಜನರನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದ. ಇವನ ಅನತರ ಇವನ ಹಿರಿಯ ಮಗನಾದ ಹಜರತ್ ಇಮಾಮ್ ಹಸನ್ ಅಧಿಕಾರಕ್ಕೆ ಬಂದ. ಆದರೆ ಇವನ ಕಾಲದಲ್ಲಿ ಸಿರಿಯಾದ ಅಧಿಕಾರಿಯಾಗಿದ್ದ ಅಮೀರ್ ಮುವಾಯಿಯೂ, ಹಜರತ್ ಇಮಾಮ್ ಹಸನ್‌ನನ್ನು ಸೋಲಿಸಿ ಪೀಠಕ್ಕೇರಿದ, ಈತ ಜನಾಭಿಪ್ರಾಯವನ್ನು ಕಡೆಗಣಿಸಲಿಲ್ಲ, ಮಾತ್ರವಲ್ಲ ತನ್ನ ಮಗನಾದ ಯುಜೀದನೇ ಪಟ್ಟಕ್ಕೆ ಬರುವಂತೆ ಕುಯುಕ್ತಿ ನಡೆಸಿದ. ಯುಜೀದನು ಕ್ರೂರಿಯಾಗಿದ್ದ. ಜನರೆಲ್ಲ ಮಹಮ್ಮದ್ ಪೈಗಂಬರನ ಮೊಮ್ಮಗನಾದ ಇಮಾಂಹಸನ್ ಮೊರೆ ಹೊಕ್ಕರು. ಹಸನನು ಜನಾಭಿಪ್ರಾಯಕ್ಕೆ ಮಣಿದು ಯುಜಿದನೊಡನೆ ಹೋರಾಟಕ್ಕೆ ಸಿದ್ಧನಾದ. ಆದರೆ ಯುದ್ಧ ಆರಂಭವಾಗುವ ಮುನ್ನವೇ ಯುಜೀದನ ಮೋಸಕ್ಕೆ ಇಮಾಂ ಹಸನ್ ಬಲಿಯಾಗುತ್ತಾನೆ. ಹುಸೇನನ ಕುಟುಂಬವಿಡೀ ಯುಜೀದನ ಸೈನ್ಯಕ್ಕೆ ಸೆರೆ ಸಿಗುತ್ತದೆ. ಮಾತ್ರವಲ್ಲಾ ಅಮಾನುಷವಾದ ಹಿಂಸೆಗೆ ಒಳಗಾಗುತ್ತದೆ. ಹುಸೇನನ ಮಗುವಾದ ಅಲಿ ಅಸಗರನನ್ನು ನೀರಿಗಾಗಿ ಬೇಡಿಕೊಳ್ಳುವಾಗ ಅಮಾನುಷನಾಗಿ ಹತ್ಯೆ ಮಾಡಲಾಗುತ್ತದೆ. ಹೀಗೆ ಹತ್ತುದಿನ ಹೋರಾಟ ನಡೆಯುತ್ತದೆ. ಹತ್ತನೆಯ ದಿನದಂದು ಯುಜೀದನ ಸೈನ್ಯದಲ್ಲಿದ್ದ ಶಿವಾರ ಶಮರ ಅಥವಾ ಶಮರ ಎಂಬುವನು ಹುಸೇನನನ್ನು ಕೊಂದು ಬಿಡುತ್ತಾನೆ.

ಹೀಗೆ ಈ ಕತೆಯ ನ್ಯಾಯ ಅನ್ಯಾಯಗಳ ನಡುವೆ ನಡೆದ ಹೋರಾಟದಲ್ಲಿ ಅನ್ಯಾಯವೇ ಗೆಲುವು ಸಾಧಿಸಿದ ಪರಿಯನ್ನು ವಿವರಿಸುತ್ತದೆ. ನ್ಯಾಯಕ್ಕಾಗಿ ಸತ್ತವರ ಕಣ್ಣೀರಿನ ಈ ಕತೆಯನ್ನು ಆನೆಗೊಂದಿ ಪರಿಸರದಲ್ಲಿ ತಮ್ಮದೇ ಕತೆಯೆಂದು ಭಾವಿಸುತ್ತಾರೆ. ಹುಸೇನನ ಮಗನಾದ ಅಸಗರನು ನೀರಿಗಾಗಿ ಬೇಡಿಕೊಂಡಾಗ ನಮ್ಮಾಲೆ ಮುನಿದಾನೋ ಪರಮೇಶ್ವರ ಎಂಬ ಸಾಲು ಬಂದು, ಹಿಂದೂ ಮುಸ್ಲಿಂ ವ್ಯತ್ಯಾಸವನ್ನು ಪೂರ್ಣ ಅಳಿಸಿ ಹಾಕಿದೆ. ಈ ಕತೆಯನ್ನು ಕೇಳಲು ಹಿಂದೂ ಮುಸ್ಲಿಂ ಧರ್ಮದ ಜನರೆಲ್ಲ ಕಲೆಯುತ್ತಾರೆ. ಅವರು ಒಟ್ಟಾರೆ ಕರುಣ ಕತೆಗೆ ಕಣ್ಣೀರಿಡುತ್ತಾರೆ.

ನೂರಾರು ವರ್ಷಗಳ ಹಿಂದೆ, ಬಹಳ ದೂರದಲ್ಲಿ ನಡೆದ ಘಟನೆಯೊಂದು, ಮೊಹರಂ ಹಬ್ಬದಲ್ಲಿ ಪುನರ್‌ಸೃಷ್ಟಿ ಹೊಂದುತ್ತದೆ. ಮೊಹರಂ ತಿಂಗಳು ಆರಂಭವಾದೊಡನೆ. ಮುಸಲ್ಮಾನರು ಸುಣ್ಣ ಬಣ್ಣ ಬಳಿದು ತಮ್ಮ ಮನೆಯನ್ನು ಶುದ್ಧಗೊಳಿಸುತ್ತಾರೆ. ಹೊಸ ಬಟ್ಟೆ ಧರಿಸುತ್ತಾರೆ. ಸಣ್ಣ ಪುಟ್ಟ ಕೈ ದೇವರುಗಳನ್ನು ಶುದ್ಧಗೊಳಿಸಿ ಮನೆಯ ಒಂದು ಕೋಣೆಯಲ್ಲಿ ಇಲ್ಲವೇ ಮಸೀದಿಯ ಸಮೀಪದ ಕಟ್ಟೆಯೊಂದರಲ್ಲಿ

ಪ್ರತಿಷ್ಠಾಪಿಸುತ್ತಾರೆ ಪೂಜಿಸುತ್ತಾರೆ. ಈ ದೇವರುಗಳಿಗೆ ಪೀರ್ಲ ಎಂದು ಕರೆಯುತ್ತಾರೆ. ಈ ದೇವರುಗುರು ಕೆಲವರಿಗೆ ಆವೇಶ ಬರುತ್ತದೆ. ಆವೇಶ ಬಂದವರು ಭವಿಷ್ಯ ಹೇಳುತ್ತಾರಾದ್ದರಿಂದ ಅವರಲ್ಲಿ ಭವಿಷ್ಯ ಕೇಳಲು ಊರಿನ ಜನರೆಲ್ಲ ಕಲೆಯುತ್ತಾರೆ. ಈ ಸಂದರ್ಭದಲ್ಲಿ ಮೈಮೇಲೆ ಬಂದ ಭೂತವನ್ನು ಬಿಡಿಸುವ ಕಾರ್ಯಕ್ರಮವೂ ನಡೆಯುತ್ತದೆ.

ದೊಡ್ಡದಾದ ಅಗ್ನಿ ಕುಂಡವನ್ನು ಎದುರಿಗೆ ನಿರ್ಮಿಸುತ್ತಾನೆ. ಆವೇಶ ಬಂದವರು ನವಿಲುಗರಿಯಿಂದ ಜನರಿಗೆ ಹೊಡೆದಾಗ ಅಗ್ನಿ ತುಳಿಯುತ್ತಾ ಜನ ಹೋಗುತ್ತಾರೆ. ದೇವರು ಸದಾ ಅಗ್ನಿ ತುಳಿಯುತ್ತಾ ಹೋಗುತ್ತವೆ. ಸಾಯಂಕಾಲದ ಹೊತ್ತು ಮೊಹರಂ ಪದ ಹೇಳುವ ಮೇಳದವರು ಮೊಹರಂ ಹಾಡನ್ನು ಹಾಡುತ್ತಾರೆ. ೧೧ನೆಯ ದಿನ ಅಂದರೆ ಮೊಹರಂ ಹಬ್ಬದ ಕೊನೆಯದಿನ ಮಸೀದಿಯಲ್ಲಿ, ಮನೆಯಲ್ಲಿ ಅಥವಾ ಇತರೆಡೆಯಲ್ಲಿ ಇರಿಸಲಾದ ಕೈದೇವರುಗಳನ್ನು ಎತ್ತಿಕೊಂಡು ಮೆರವಣಿಗೆಗೆ ಹೋಗುತ್ತಾರೆ. ಊರ ಅಂಚಿನಲ್ಲಿರುವ ತುಂಗಭದ್ರಾ ನದಿಯಲ್ಲಿ ದೇವರುಗಳನ್ನು ತೊಳೆದು ಮತ್ತೆ ಹಿಂದಕ್ಕೆ ಬರುತ್ತಾರೆ. ಇಲ್ಲಿಗೆ ಮೊಹರಂ ಆಚರಣೆ ಮುಗಿಯುತ್ತದೆ.

ಈ ಪೀರ್ಲ ದೇವರ ಆಚರಣೆಯಲ್ಲಿ ಬೇಡರು, ಅಗಸರು, ದಲಿತರು, ಶ್ರಮಿಕ ವರ್ಗ ಇತ್ಯಾದಿ ಜನರು ಸಕ್ರಿಯವಾಗಿ ಭಾಗವಹಿಸುತ್ತಾರೆ. ಹುಲಿವೇಷ, ಕೋಲಾಟ, ಸ್ತ್ರೀವೇಷ, ಜೋಕರ್ ವೇಷ ತೊಡುವುದು ಕುಣಿಯುವುದು ವಿಶೇಷ. ಹುಲಿವೇಷದಿಂದ ಭಿಕ್ಷೆ ಬೇಡಿ ಹರಿಕೆ ಒಪ್ಪಿಸುತ್ತಾರೆ. ಹಲಗೆ ಬಾರಿಸುತ್ತಾ ಹುಸೇನ್ ಸ್ಮರಣೆ ಮಾಡುತ್ತಾರೆ. ಹೀಗೆ ಆನೆಗೊಂದಿ ಪರಿಸರದ ಮೊಹರಂ ಹಬ್ಬವು ಹಿಂದೂ ಮುಸ್ಲಿಂರ ಭಾವೈಕ್ಯತೆಯನ್ನು ಸೊಗಸಾಗಿ ಪ್ರತಿನಿಧಿಸುತ್ತದೆ. ಅಕ್ಷರ ಇತಿಹಾಸ ಹೇಳುವ ಹಿಂದೂ ಮುಸ್ಲಿಂ ಘರ್ಷಣೆ ಇಲ್ಲಿಲ್ಲ.

**ಇತರ ಜನಪದ ಹಬ್ಬಗಳು**

ಈವರೆಗೆ ನೋಡಿದ ಆಚರಣೆಗಳಲ್ಲದೆ ಇತರ ಅನೇಕ ಜನಪದ ಆಚರಣೆಗಳು ಆನೆಗೊಂದಿ ಪರಿಸರದಲ್ಲಿವೆ. ಮಳೆಗಾಲದ ಕೊನೆಯ ಸಂಪ್ರದಾಯವಾಗಿ ಗೌರಿ ಹುಣ್ಣಿಮೆ ಗ್ರಾಮದ ಹೆಣ್ಣುಮಕ್ಕಳ ಸಡಗರ ಸಂಭ್ರಮಕ್ಕೊಂದು ಸಾಕ್ಷಿ. ಗೌರಿಗೆ ದಿನವೊಂದು ತರಹದ ಆರತಿ ಮಾಡಿ, ಕೊನೆಯ ದಿನ ಸಕ್ಕರೆ ಅಚ್ಚಿನ ಆರತಿ ಬೆಳಗಿ ಹೂಗಳನ್ನು ಗೌರಿಗೆ ಏರಿಸಿ ಆರತಿ ಬೆಳಗಿ ಹಾಡು ಹಾಡಿ ಸಂಭ್ರಮಿಸುವರು. ಶಿವಯೋಗದ ಪುಣ್ಯದಿವರು ಅಂಗವಾಗಿ ಶಿವರಾತ್ರಿಯನ್ನು ಶಿವನಿಗೆ ಪಂಪಾಸರೋವರ, ನಗರೇಶ್ವರ ಅಭಿಷೇಕ, ಉತ್ಸವ, ಜಾಗರಣೆ, ಭಜನೆ, ಪ್ರಸಾದ ಸೇವನೆ ಇತ್ಯಾದಿ ಆಚರಣೆಗಳೂ ತುಂಬಾ ಅರ್ಥಪೂರ್ಣವಾಗಿ ನಡೆಯುತ್ತವೆ.

ಸಂಪ್ರದಾಯದ ದೊಡ್ಡ ಹಬ್ಬವಾದ ಯುಗಾದಿಯು ಇಲ್ಲಿ ಆಚರಣೆಗೊಳಗಾಗುವ ದೊಡ್ಡ ಹಬ್ಬ. ಬೇವುಬೆಲ್ಲ ಸವಿಯತ್ತ ಬಾಳಿನ ಸುಖ ದುಃಖದ ಸಂಕೇತವೆಂದು ಭಾವಿಸಿ ಆಚರಿಸುವ ಮಹತ್ವದ ಹಬ್ಬ.

ಮಣ್ಣೆತ್ತಿನ ಪೂಜೆಯು ಈ ಗ್ರಾಮದ ಜನತೆಗೆ ಹರುಷದ ಸಂದರ್ಭವಾಗಿದೆ. ಇದು ಇಲ್ಲಿನ ಒಂದು ದಿವ್ಯಸಂಪ್ರದಾಯ. ಜೇಷ್ಠ ಬಹುಳ ಅಮವಾಸ್ಯಯ ದಿವಸ ಇದರ ಪೂಜೆ ನಡೆಯುತ್ತದೆ.

ಇದಲ್ಲದೆ ಕಾರಹುಣ್ಣಿಮೆಯ ದಿನ ಎತ್ತುಗಳಿಂದ ಕರಿಹರಿಯುವ, ನಾಗರ ಪಂಚಮಿಯಂದು ನಾಗಾರಾಧನೆ ನಾಗಪ್ಪನಿಗೆ ಹಾಲು ಹಾಕುವದು ಬಗೆಬಗೆ ಉಂಡಿ ಎಡೆಮಾಡಿ, ಉಂಡು ತಿಂದು ಜೋಕಾಲಿ ಜೀಕುವ ಆಚರಣೆ ಹೀಗೆ ಅನೇಕ ವಾರ್ಷಿಕಾಚರಣೆಗಳು ಈ ಗ್ರಾಮದಲ್ಲಿ ಜನಪದರ ಗಮನವನ್ನು ಸೆಳೆಯುತ್ತವೆ.

**ಆನೆಗೊಂದಿ ಜಾತ್ರೆ**

ತ್ರೇತಾಯುಗದ ಕಿಷ್ಕಿಂದೆಯಾಗಿದ್ದ ಆನೆಗೊಂದಿಯು ಕೇವಲ ಪೌರಾಣಿಕ ಮಹತ್ವವನ್ನಷ್ಟೆ ಪಡೆಯದೆ ಚಾರಿತ್ರಿಕ, ಸಾಂಸ್ಕೃತಿಕ ಮಹತ್ವವನ್ನೂ ಸಹ ಪಡೆದು ಉತ್ತರ ಕರ್ನಾಟಕದಲ್ಲೇ ವಿಶಿಷ್ಟ ಗ್ರಾಮ ಎನಿಸಿದೆ. ಅಷ್ಟೇ ಅಲ್ಲ, ಉತ್ತರ ಕರ್ನಾಟಕದ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ, ತಲತಲಾಂತರಗಳಿಂದ ಸಾಗಿಬಂದಿರುವ ಅತಿ ಪ್ರಾಚೀನ ಜಾತ್ರೆಗಳಲ್ಲಿ ಆನೆಗೊಂದಿಯ ಶ್ರೀರಂಗನಾಥ ಸ್ವಾಮಿಯ ಜಾತ್ರೆ ಹಾಗೂ ಅಲ್ಲಿನ ಆಚರಣೆಗಳು ಬಹು ಪ್ರಮುಖವಾದವುಗಳಾಗಿವೆ. ಪ್ರತಿವರ್ಷ ಮಾರ್ಚ್ ಅಥವಾ ಏಪ್ರಿಲ್‌ನಲ್ಲಿ ಚೈತ್ರ ಬಹುಳ ಕೃಷ್ಣಪಕ್ಷ ಪಂಚಮಿಯಿಂದ ನವಮಿಯವರೆಗೆ ಸತತ ಐದು ದಿನಗಳವರೆಗೆ ವೈವಿಧ್ಯಮಯ, ವಿಶಿಷ್ಟವಾದ ಉತ್ಸವಗಳು, ಮೂರನೆಯ ದಿನದಂದು ಜಾತ್ರೆ ಮತ್ತು ಧೂಳೋತ್ಸವ ಜರುಗುವದು. ಆನೆಗೊಂದಿಯ ಪ್ರಮುಖ ದೈವಗಳಾದ ಶ್ರೀರಂಗನಾಥಸ್ವಾಮಿ, ಶ್ರೀದೇವಿ, ಭೂದೇವಿ ಲಕ್ಷ್ಮಿಯನ್ನು ಕೇಂದ್ರವಾಗಿಟ್ಟುಕೊಂಡು ಈ ಜಾತ್ರೆ ನಡೆಯುತ್ತದೆ.

ಹಿಂದಿನಿಂದಲೂ ಆನೆಗೊಂದಿ ಸಂಸ್ಥಾನದ ರಾಜಮಹಾರಾಜರ ನೇತೃತ್ವದಲ್ಲಿ ನಡೆಸಲ್ಪಡುವ ಈ ಗ್ರಾಮದ ಜಾತ್ರೆಯು ಇಂದೂ ಸಹ ಆನೆಗೊಂದಿ ರಾಜ ಮನೆತನದವರಾದ ಶ್ರೀ ರಾಜಾ ಅಚ್ಯುತದೇವರಾಯಲು, ಶ್ರೀರಾಜಾಶ್ರೀರಂಗದೇವರಾಯಲು, ಶ್ರೀರಾಜಾನರಸಿಂಹದೇವರಾಯಲು, ಶ್ರೀ ರಾಜಾ ರಾಮದೇವರಾಯಲು ಇನ್ನೂ ಮುಂತಾದ ರಾಜ ಮುಖಂಡರ ಹಾಗೂ ಗ್ರಾಮದ ಪ್ರಮುಖರ ನೇತೃತ್ವದಲ್ಲಿ ಸಹಸ್ರಾರು ಭಕ್ತರ ಸಮ್ಮುಖದಲ್ಲಿ ಈ ಜಾತ್ರೆ ನಡೆಯುತ್ತದೆ. ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ಸಾಮಾನ್ಯವಾಗಿ ಗ್ರಾಮೀಣ ಜನತೆಗೆ ಬಿಡುವಿರುತ್ತದೆ. ಈ ದಿನಗಳಲ್ಲಿ ಸುತ್ತಮುತ್ತಲಿನ ಗ್ರಾಮಗಳಾದ ಕಡೆಬಾಗಿಲು, ಬಸವನದುರ್ಗ, ರಾಂಪುರ, ಮಲ್ಲಾಪುರ, ಸಂಗಾಪುರ, ಹನುಮನಹಳ್ಳಿ, ಸಣಾಪುರ, ಹರ್ಲಾಪುರ ಸೇರಿದಂತೆ ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆಯ ಹಾಗೂ ಬೇರೆ ಜಿಲ್ಲೆಯ ಭಕ್ತರೂ ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಎತ್ತಿನ ಬಂಡಿ, ಟ್ರ್ಯಾಕ್ಟರ್, ಬಸ್, ಪಾದಯಾತ್ರೆ ಮೂಲಕ ಭಕ್ತಾದಿಗಳು ಬಂದು ಪುಣ್ಯದರ್ಶನ ಪಡೆದು ಹೋಗುತ್ತಾರೆ. ಜಾತಿ ಧರ್ಮಗಳ ಭೇದವಿಲ್ಲದೆ ಎಲ್ಲರೂ ಭಾಗವಹಿಸುತ್ತಾರೆ. ಅಲ್ಲದೆ ಹುಲಿಗೆಮ್ಮ, ಗಾಳೆಮ್ಮ, ಎಲ್ಲಮ್ಮ ದೇವರುಗಳ ಸಂಪ್ರದಾಯದ ಜೋಗಪ್ಪ ಜೋಗಮ್ಮರು ಕಂಡುಬರುತ್ತಾರೆ. ಗ್ರಾಮದವರು, ಸುತ್ತಮುತ್ತಣ ಹಳ್ಳಿಯ ಜನರು ದೇವರಿಗೆ ಸೇವೆ ಮಾಡಿ ಹರಕೆ ಒಪ್ಪಿಸುತ್ತಾರೆ. ರಂಗನಾಥ ಸ್ವಾಮಿಯು ನಂಬಿದ ಭಕ್ತರನ್ನು ಕೈಬಿಡದೆ ಕಾಪಾಡಿ ಉದ್ಧರಿಸುತ್ತಾನೆ ಎಂಬ ನಂಬಿಕೆ ಇಲ್ಲಿಯ ಭಕ್ತರದು.

ಇಲ್ಲಿನ ಜಾತ್ರೆಯಲ್ಲಿ ನಡೆಯುವ ಆಚರಣೆಗಳನ್ನು ಪ್ರಮುಖವಾಗಿ ಎರಡು ಬಗೆಗಳಾಗಿ ವಿಂಗಡಿಸಿಕೊಳ್ಳಬಹುದು. ೧. ದೇವಸ್ಥಾನದಲ್ಲಿ ನಡೆಸುವ ಆಚರಣೆಗಳು. ೨. ಭಕ್ತಾದಿಗಳು ದೇವರ ಹೆಸರಿನಲ್ಲಿ ಹೊರಗೆ ನಡೆಸುವ ಆಚರಣೆಗಳು.

**ದೇವಸ್ಥಾನದಲ್ಲಿ ನಡೆಸುವ ಆಚರಣೆಗಳು**

**ಮೊದಲನೆಯ ದಿನದಂದು :** ಮುಂಜಾನೆ ಅಂಕುರಾರ್ಪಣ ಕಾರ್ಯಕ್ರಮದಲ್ಲಿ ವಾಸ್ತುಪುರುಷನ, ಅಷ್ಟ ದಿಕ್ಪಾಲಕರ, ನವಗ್ರಹ ಆಹ್ವಾನ ಬೆಳಿಗ್ಗೆ ಮತ್ತು ಸಂಜೆ ಅಗ್ನಿ ಪ್ರತಿಷ್ಠೆ ಮತ್ತು ಹೋಮ ಕಾರ್ಯಗಳು ಜರುಗುವವು.

ಅಂದು ಮಧ್ಯಾಹ್ನ ಧ್ವಜಾರೋಹಣ ಕಾರ್ಯಕ್ರಮವು ರಾಜ ಮನೆತನದವರ, ಗ್ರಾಮಸ್ಥರ ಸಮ್ಮುಖದಲ್ಲಿ ನೆರವೇರುತ್ತದೆ. ವಿಷ್ಣುವಿನ ವಾಹನವಾದ ಗರುಡನ ಚಿತ್ರವುಳ್ಳ ಹರಿಷಿಣ ಹಚ್ಚಿದ ಧ್ವಜಪಟವನ್ನು ರಾಜರು ಮುಟ್ಟಿದ ನಂತರ ಪುರೋಹಿತರು ಧ್ವಜಾರೋಹಣ ಮಾಡುತ್ತಾರೆ. ನಂತರ ಮಂಗಳಾರತಿ ಪ್ರಸಾದ ವಿನಿಯೋಗವಾಗುತ್ತದೆ.

**ಕಲ್ಯಾಣೋತ್ಸವ :** ಶ್ರೀ ರಂಗನಾಥ ಸ್ವಾಮಿ ಹಾಗೂ ಶ್ರೀದೇವಿ ಭೂದೇವಿಯರ ಕಲ್ಯಾಣೋತ್ಸವವು ಮೊದಲನೇ ದಿನದ ರಾತ್ರಿಯಂದೇ ಜರುಗುವುದು. ರಾಜರ, ಗ್ರಾಮಸ್ಥರ ಸಮಕ್ಷಮದಲ್ಲಿ ಹೆಣ್ಣಿನವರ ಪರವಾದ ಮತ್ತು ಗಂಡಿನವರ ಪರವಾದ ಎರಡು ಗುಂಪು ಮಾಡಿ ಮದುವೆ ಆಚರಣೆಗೆ ಮುಂದಾಗುತ್ತಾರೆ. ಮೊದಲು ವಿಘ್ನೇಶ್ವರನ ಪೂಜೆಯಾಗುತ್ತದೆ. ನಂತರ ಮದುವೆಗೆ ಅಷ್ಟದಿಕ್ಪಾಲಕರ ಆಹ್ವಾನವಾಗುತ್ತದೆ. ದೇವತೆಗಳಿಗೆ ಕಂಕಣಧಾರಣೆ ಸ್ವಾಮಿಗೆ ಯಜ್ಞೋಪ ವೀತಧಾರಣೆ, ಶ್ರೀದೇವಿ ಭೂದೇವಿಯವರಿಗೆ ಸ್ವಾಮಿಯಿಂದ ಮುಟ್ಟಿಸಿ ಶ್ರೀದೇವಿ ಭೂದೇಐವಿಯರಿಗೆ, ದೇವಿಯರು ಮುಟ್ಟಿದ ಹಾರವನ್ನು ಸ್ವಾಮಿಗೆ ಹಾಕಿ ಅಕ್ಷತಧಾರಣೆ ಮಾಡಿ ಸ್ವಾಮಿಯ ಕಲ್ಯಾಣೋತ್ಸವವನ್ನು ನೆರವೇರಿಸುತ್ತಾರೆ. ನಂತರ ದೇವರಿಗೆ ಲಡ್ಡು ಪುಳಿಯೊಗೆರೆಯನ್ನು ನೈವೇದ್ಯ ಮಾಡುತ್ತಾರೆ.

**ಎರಡನೇ ದಿನ ಗರುಡೋತ್ಸವ :** ಮೊದಲು ರಾಜ ಮನೆತನದವರನ್ನು ಸಕಲ ವಾದ್ಯಸಮೇತ ಹೋಗಿ ಗರುಡೋತ್ಸವ ಕಾರ್ಯಕ್ರಮ ನಡೆಸಿಕೊಡುವ ಸಲುವಾಗಿ ಕರೆತರುತ್ತಾರೆ. ಬೆಳಗಿನ ಗರುಡೋತ್ಸವದಲ್ಲಿ ಆನೆಗೊಂದಿಯ ಗ್ರಾಮಸ್ಥರು ಭಾಗವಹಿಸಿದರೆ ಸಂಜೆ ನಡೆಯುವ ಗರುಡೋತ್ಸವದಲ್ಲಿ ಸುತ್ತಮುತ್ತಲಿನ ಗ್ರಾಮಸ್ಥರು ಭಾಗವಹಿಸುತ್ತಾರೆ. ಗರುಡ ಪೀಠದಲ್ಲಿ ಸ್ವಾಮಿಯನ್ನು ಕುಳ್ಳರಿಸಿ ಗ್ರಾಮ ಪ್ರದಕ್ಷಿಣೆ ಮಾಡಲಾಗುವ ಉತ್ಸವವೇ ಗರುಡೋತ್ಸವ.

**ಸಾಮೂಹಿಕ ವಿವಾಹ :** ಅಂದೇ ಸಾಮೂಹಿಕ ವಿವಾಹ ನಡೆಯುತ್ತದೆ. ರಾಜ ಮನೆತನದವರಾದ ಹಾಗೂ ದಾನಿಗಳಾದ ಶ್ರೀಮತಿ ಲಲಿತಾರಾಣಿ ಶ್ರೀರಂಗದೇವರಾಯಲು ದಂಪತಿಗಳು ಸಾಮೂಹಿಕ ವಿವಾಹದಲ್ಲಿ ವಿವಾಹವಾಗುವ ದಂಪತಿಗಳಿಗೆ ಮಾಂಗಲ್ಯವನ್ನು ವಿತರಣೆ ಮಾಡುತ್ತಾರೆ. ಆನೆಗೊಂದಿ ರಾಜ ಮನೆತನದವರು ಅನ್ನ ಸಂತರ್ಪಣೆ ವ್ಯವಸ್ಥೆ ಏರ್ಪಡಿಸಿರುತ್ತಾರೆ.

**ರಥಾಂಗ ಹೋಮ :** ರಾತ್ರಿ ೮ ರಿಂದ ೯ಕ್ಕೆ ತೇರಿನ ಮುಂದೆ ಅಷ್ಟದಿಕ್ಪಾಲಕರನ್ನು ಆಹ್ವಾನ ಮಾಡಿ ರಥಕ್ಕೆ ಬಲಿ ಅರ್ಪಿಸುತ್ತಾರೆ. ಸ್ವಾಮಿಯ ದೇವಸ್ಥಾನದ ಸುತ್ತಲೂ ಅನ್ನದ ಬಲಿ ಕೊಡಲಾಗುತ್ತದೆ.

**ಮೂರನೇ ದಿನ ಜಾತ್ರೆ (ಬ್ರಹ್ಮ ರಥೋತ್ಸವ ಮತ್ತು ಧೂಳೋತ್ಸವ) :** ಗ್ರಾಮದ ಎಲ್ಲ ದೇವರುಗಳಿಗೆ ಗ್ರಾಮ ಬಲಿ ನಡೆಯುತ್ತದೆ. ನಂತರ ತೇರಿಗೆ ಕುಂಬಳಕಾಯಿಯನ್ನು ಬಲಿಯಾಗಿ ಅರ್ಪಿಸಲಾಗುತ್ತದೆ. ಪಲ್ಲಕ್ಕಿ ಸಮೇತ ಗ್ರಾಮ ದೈವಗಳಿಗೆ ಪೂಜೆ ನೆರವೇರುತ್ತದೆ.

**ಮಡಿತೇರು:** ಶ್ರೀರಂಗನಾಥಸ್ವಾಮಿ, ಶ್ರೀದೇವಿ ಭೂದೇವಿಯ ಮೂರ್ತಿಗಳನ್ನು ಬೆಳಗ್ಗೆ ೧೦.೩೦ರ ಸುಮಾರಿನಲ್ಲಿ ಪಲ್ಲಕ್ಕಿಯಲ್ಲಿ ಕೂರಿಸಿ ದೇವಸ್ಥಾನದಿಂದ ತೇರಿನವರಿಗೆ ಸಕಲ ವಾದ್ಯಗಳ ಸಮೇತ ಕರೆತಂದು ತೇರಿನಲ್ಲಿ ಸ್ಥಾಪಿಸಿ, ಮಂಗಳಾರತಿ, ಪೂಜೆ ನಡೆಸುತ್ತವೆ. ಬಂದ ಭಕ್ತಾದಿಗಳು ತೇರಿನ ಗಾಲಿಗೆ ಕಾಯಿ ಒಡೆಯುತ್ತಾರೆ. ಮಡಿಯಿಂದ ಭಕ್ತಿ ಭಾವದಿಂದ ತೇರನ್ನು ಹತ್ತು ಹದಿನೈದು ಹೆಜ್ಜೆಯವರೆಗೆ ಎಳೆಯುತ್ತಾರೆ.

ನಂತರ ರಾಜಮನೆತನದವರ ಜೊತೆಗೆ ಗ್ರಾಮಸ್ಥರು ಸೇರಿ ರಾಮದೇವರ ಗುಡಿಗೆ ಹೋಗಿ ಪೂಜೆ ಸಲ್ಲಿಸಿ ತೀರ್ಥ ಪ್ರಸಾದ ಸ್ವೀಕರಿಸುತ್ತಾರೆ. ಮಧ್ಯಾಹ್ನ ಸಾರ್ವಜನಿಕರಿಗೆ ದೇವಸ್ಥಾನದಲ್ಲಿ ಮಹಾಪ್ರಸಾದದ ವ್ಯವಸ್ಥೆ ಇರುತ್ತದೆ. ಅಂದು ಸಂಜೆ ದೇವಸ್ಥಾನದ ಮುಂಭಾಗದಲ್ಲಿ ಸಮ್ಮುಖದಲ್ಲಿ ಧ್ವಜ ಪಟ ಹರಾಜು ನಡೆಯುತ್ತದೆ.

**ತೇರು:** ಅಂದು ಸಂಜೆ ಸುಮಾರು ೫ ಗಂಟೆಗೆ ತೇರಿನಲ್ಲಿರುವ ಶ್ರೀರಂಗನಾಥಸ್ವಾಮಿ, ಶ್ರೀದೇವಿ, ಭೂದೇವಿಯರಿಗೆ ಮಂಗಳಾರತಿ, ಪ್ರದಕ್ಷಿಣೆಯಾಗುತ್ತದೆ. ನಂತರ ಗ್ರಾಮದ ಮತ್ತು ಸುತ್ತಮುತ್ತಲಿನ ಗ್ರಾಮಗಳಿಂದ ಬಂದ ಸಹಸ್ರಾರು ಭಕ್ತಾದಿಗಳ ಮಧ್ಯದಲ್ಲಿ ಬ್ರಹ್ಮ ರಥೋತ್ಸವದ ತೇರು ಹೊರಟು ಎದುರು ಆಂಜನೇಯ ದೇವಸ್ಥಾನವನ್ನು ತಲುಪಿ ಮತ್ತೆ ವಾಪಾಸ್ ಬರುತ್ತದೆ. ನಂತರ ಮಂಗಳಾರತಿ ಮಾಡಿ ಸ್ವಾಮಿಯನ್ನು ತೇರಿನಿಂದ ಕೆಳಕ್ಕೆ ಕರೆತಂದು ಪಲ್ಲಕ್ಕಿಯಲ್ಲಿ ಕೂಡಿಸಿ ಗ್ರಾಮ ಪ್ರದಕ್ಷಿಣೆ ಮಾಡಲಾಗುತ್ತದೆ. ನಂತರ ಧ್ವಜವನ್ನು ಹರಾಜಿನಲ್ಲಿ ಸ್ವೀಕರಿಸಿದವರ ಜೊತೆಗೆ ಅವರ ಮನೆಗೆ ವಾದ್ಯ ಸಮೇತ ಹೊರಟು ಧ್ವಜವನ್ನು ಅವರ ಮನೆಗೆ ಮುಟ್ಟಿಸಿ ಬರುತ್ತಾರೆ.

**ನಾಲ್ಕನೇ ದಿನ ಪಾರ್ವಟೋತ್ಸವ (ಮೃಗಾಯಾತ್ರಾ) :** ಮಣಿ ಮೇಲೆ ಕುದುರೆ ವಾಹನ ಕೂಡಿಸಿ ಅದರಲ್ಲಿ ಸ್ವಾಮಿಯ ಉತ್ಸವ ಮೂರ್ತಿಯನ್ನು ಕೂಡಿಸಿ ಮೆರವಣಿಗೆ ಸಮೇತ ಆನೆಗೊಂದಿ ರಾಜರ ಮನೆಗೆ ಹೋಗುತ್ತಾರೆ. ನಂತರ ರಾಜರ ಮನೆಯಲ್ಲಿ ವಿಷ್ಣುಭಕ್ತರಾದ ತಿರುಮಂಗಯ್ಯ ಆಳ್ವಾರರವರ ಚರಿತ್ರೆಯನ್ನು ಪಾರಾಯಣ ಮಾಡಲಾಗುತ್ತದೆ.

**ಕಡುಬಿನ ಕಾಳಗ :** ನವ ವಿವಾಹಿತೆಯಾದ ಲಕ್ಷ್ಮಿಯನ್ನು ಮೂರ್ತಿಯನ್ನು ರಾಜರ ಮನೆಯಲ್ಲಿ ಬೋಯಿ ಗಂಗಾ ಮತಸ್ಥರು ಮನೆತನದವರು ಬಚ್ಚಿಡುತ್ತಾರೆ. ರಂಗನಾಥಸ್ವಾಮಿಯ ಪರವಾಗಿ ದಾಸಯ್ಯನು ಬಚ್ಚಿಟ್ಟ ಲಕ್ಷ್ಮಿಯನ್ನು ಹುಡುಕಲು ಬರುತ್ತಾನೆ. ದೇವಸ್ಥಾನದ ನಾರಾಯಣ ಚಕ್ರ ಹೊತ್ತ ದಾಸಯ್ಯ ಕಟ್ಟೆ ಸುತ್ತ ತಿರುಗಿ ಹುಡುಕುತ್ತಾನೆ. ಹುಡುಕುವಾಗ ದಾಸಯ್ಯ ಪೂಜಾರಿ ಬಂದ್ರಪ್ಪೊ ಎಂದು ಕೂಗುತ್ತಾನೆ. ಆಗ ಬೋಯಿಯವರ ಲಕ್ಷ್ಮಿಯನ್ನು ಬಚ್ಚಿಟ್ಟ ಸ್ಥಳವನ್ನು ದಾಸಯ್ಯ ತೋರಿಸಿದ ಎಂಬ ಕಾರಣದಿಂದ ಶಾಸ್ತ್ರಕ್ಕೆ ದಾಸಯ್ಯನಿಗೆ ಟವೆಲ್ಲಿನಿಂದ ಹೊಡೆಯುತ್ತಾರೆ. ದಾಸಯ್ಯನು ಇದೇ ರೀತಿಯಾಗಿ ರಾಜರು ಬಂದ್ರಪ್ಪೊ, ರೈತರು

ಬಂದ್ರಪ್ಪೋ, ಗೌಡರು ಬಂದ್ರಪ್ಪೋ, ಪಟೇಲರು ಬಂದ್ರಪ್ಪೋ ಎಂದು ಕೂಗಿ ಓಡುತ್ತಾನೆ. ಕೊನೆಗೆ ಲಕ್ಷ್ಮೀಯನ್ನು ಹುಡುಕಿ ಪತ್ತೆ ಹಚ್ಚಿ ರಂಗನಾಥಸ್ವಾಮಿಯ ಜೊತೆಗೆ ಉತ್ಸವದಲ್ಲಿ ಕೂಡಿಸಿ ದೇವಸ್ಥಾನಕ್ಕೆ ಕರೆತರುತ್ತಾರೆ. ಇದನ್ನು ಕಡುಬಿನ ಕಾಳಗ ಆಚರಣೆ ಎಂದು ಕರೆಯುತ್ತಾರೆ.

**ಐದನೇ ದಿನ ವಸಂತೋತ್ಸವ (ಓಕಳಿ), ಸಾಯಂಕಾಲ ಪುಷ್ಪಯೋಗ :** ಪಲ್ಲಕ್ಕಿಯಲ್ಲಿ ಸ್ವಾಮಿಯನ್ನು ಕೂಡಿಸಿ ಸುದರ್ಶನ ಚಕ್ರದ ಜೊತೆಗೆ ಗ್ರಾಮ ಪ್ರದಕ್ಷಿಣೆ ಮಾಡುತ್ತಾರೆ. ಈ ಸಂದರ್ಭದಲ್ಲಿ ರಾಜರಿಗೆ, ಗ್ರಾಮಸ್ಥರಿಗೆ ಕೇಸರಿ ಬಣ್ಣ ಎರಚುತ್ತಾರೆ. ಈ ಸಂದರ್ಭದಲ್ಲಿ ಬಣ್ಣ ಸಿಡಿಸಿಕೊಂಡರೆ ಪೀಡೆ, ಪಿಶಾಚಿ ತೊಲಗುತ್ತವೆ, ಒಳ್ಳೆಯದು ಆಗುತ್ತದೆ ಎಂಬ ಭಾವನೆ ಇದೆ. ಓಕಳಿ ಆಟದ ನಂತರ ನದಿಗೆ ಹೋಗಿ ಸ್ವಾಮಿ ಸಮೇತ ಸಾರ್ವಜನಿಕರು ಸ್ನಾನ ಮಾಡುತ್ತಾರೆ. ನಂತರ ಎಲ್ಲಾ ಭಕ್ತಾದಿಗಳಿಗೆ ಇನಾಮ ಇಡುತ್ತಾಳೆ. ಮಂಗಳಾರತಿ ಪ್ರಸಾದದ ನಂತರ ಪಲ್ಲಕ್ಕಿ ಸಮೇತ ದೇವಸ್ಥಾನಕ್ಕೆ ಮರಳಿ ಬರುವರು.

ಅಂದು ಮಧ್ಯಾಹ್ನ ಗರುಡಪಟ ಅವರೋಹಣ ಮಾಡುವುದು ರಾಜರಿಗೆ, ಪುರೋಹಿತರಿಗೆ ಕಟ್ಟಿದ ಕಂಕಣ ವಿಸರ್ಜನೆ ಮಾಡಿ ಪ್ರಸಾದ ವಿನಿಯೋಗ ಮಾಡಲಾಗುವುದು.

**ಪುಷ್ಪಯಾಗ:** ಸ್ವಾಮಿಗೆ ಹೂವಿನ ಅಲಂಕಾರ ಮಾಡಿ ಅಷ್ಟ ದಿಕ್ಪಾಲಕರಿಗೆ, ಬ್ರಹ್ಮವಿಷ್ಣು ಮಹೇಶ್ವರಾದಿಯಾಗಿ ಆಹ್ವಾನಿತ ಎಲ್ಲ ದೇವತೆಗಳನ್ನು ವಾದ್ಯಗಳ ಸಮೇತ ಭಕ್ತಿಪೂರ್ವಕವಾಗಿ ಅವರನ್ನು ಯಥಾಸ್ಥಾನಕ್ಕೆ ಕಳಿಸುವುದುಂಟು.

**ಶಯನೋತ್ಸವ :** ಸ್ವಾಮಿಗೆ ಅಲಂಕಾರ ಮಾಡಿ, ವಿಶೇಷ ಭಕ್ಷ್ಯ, ಹಣ್ಣು ಹಂಪಲು, ಹೊಸ ಬಟ್ಟೆ ಅರ್ಪಿಸಿ ಸುಖವಾಗಿ ಹೂವಿನ ಹಾಸಿಗೆಯ ಮೇಲೆ ಮಲಗಿ ನಿದ್ರಿಸು ಸ್ವಾಮಿ ಎಂದು ಭಕ್ತರು ಪ್ರಾರ್ಥನೆ ಮಾಡಿಕೊಳ್ಳುತ್ತಾರೆ. ಇಲ್ಲಿಗೆ ಪಂಚಾಹ್ನಿಕೊತ್ಸವವು ಸಂಪೂರ್ಣವಾಗಿ ಮುಕ್ತಾಯಗೊಳ್ಳುತ್ತದೆ.

### ಭಕ್ತಾದಿಗಳು ದೇವರ ಹೆಸರಿನಲ್ಲಿ ಹೊರಗೆ ನಡೆಸುವ ಆಚರಣೆಗಳು

ರಥೋತ್ಸವವನ್ನು ಹೆಣ್ಣು ಗಂಡುಗಳ ಮೆರವಣಿಗೆಯ ಸಂಕೇತವೆಂದು ಭಾವಿಸುತ್ತಾರೆ. ರಥೋತ್ಸವದ ಸಂದರ್ಭದಲ್ಲಿ ತೇರಿಗೆ ಭಕ್ತ ಸಮೂಹವು ಹೂಹಣ್ಣು ಬಾಳೆಹಣ್ಣು ಎಸೆದು ನಮಸ್ಕಾರ ಮಾಡಿ ಧನ್ಯತೆಯ ಭಾವವನ್ನು ಹೊಂದುತ್ತಾರೆ. ಜಾತ್ರೆಯ ದಿನ ಊರಿಗೆ ಊರೇ ಶೃಂಗಾರಗೊಂಡಿರುತ್ತದೆ. ಗ್ರಾಮದ ಜನರು ಜಾತ್ರೆಗಾಗಿ ತಮ್ಮ ತಮ್ಮ ನೆಂಟರಿಸ್ಟರನ್ನು ಮನೆಗೆ ಕರೆಸುತ್ತಾರೆ. ಜಾತ್ರೆಯ ದಿನ ವಿಶೇಷ ಅಡಿಗೆ ಮಾಡಿ ಮನೆಯಲ್ಲಿ ದೇವರ ಪೂಜೆ ಮಾಡಿ ರಂಗನಾಥ ಸ್ವಾಮಿಗೆ ಎಡೆ ಕೊಡುವ, ಕಾಯಿಕರ್ಪೂರ ಮಾಡುವ ಹರಕೆ ತೀರಿಸುವ ಆಚರಣೆಗಳನ್ನು ಮಾಡುತ್ತಾರೆ. ಇಷ್ಟಾರ್ಥ ಸಿದ್ಧಿಯಾದವರು ಉರುಳು ಸೇವೆ, ಹೆಜ್ಜೆ ನಮಸ್ಕಾರ, ರಥದ ಗಾಲಿಗೆ ತೆಂಗಿನಕಾಯಿ ಒಡೆಸುವುದು, ಚಿನ್ನ ಬೆಳ್ಳಿಯ ಆಭರಣ ಮಾಡಿಸುವುದು, ಮಡಿ, ವಸ್ತ್ರ, ಸೀರೆ ಕೊಡುವುದು, ಪಲ್ಲಕ್ಕಿ ಸೇವೆ ಮಾಡುವುದು ಇತ್ಯಾದಿಗಳ ರೂಪದಲ್ಲಿ ಹರಕೆ ತೀರಿಸುತ್ತಾರೆ.

ಆನೆಗೊಂದಿಯ ರಂಗನಾಥಸ್ವಾಮಿಯ ಮಠದಿಂದ ಮುಂದೆ ಸಾಲು ಮಳಿಗೆಗಳ ಮುಂಭಾಗದಲ್ಲಿ ಕುಂಕುಮ, ಬಳೆ, ಆಟಿಕೆ, ಸಿಹಿತಿಂಡಿಯ ಅಂಗಡಿಗಳು ಸಾಲುಗಟ್ಟಿರುತ್ತವೆ. ಇವು ಜಾತ್ರೆಯ ದಿನಗಳಲ್ಲಿ ಮಾತ್ರ ಇರುವಂತಹ ಸಂಚಾರಿ ಅಂಗಡಿಗಳಾಗಿರುತ್ತವೆ. ಇಲ್ಲಿನ ತೇರು ಸುಮಾರು ೩೦-೩೫ ಅಡಿಗಳಷ್ಟು ಎತ್ತರದಾಗಿದ್ದು, ತೇರನ್ನು ಕಟ್ಟಿಗೆಯ ತುಂಡುಗಳಿಂದ ನಿರ್ಮಿಸಿ ಅದನ್ನು ಪೂರ್ಣವಾಗಿ ಮುಚ್ಚಿಕೊಳ್ಳುವಂತಹ ಬಣ್ಣಬಣ್ಣದ ದೊಡ್ಡ ಬಟ್ಟೆಯನ್ನು ಹೊದಿಸಿ, ಅದರ ನೆತ್ತಿಯ ಮೇಲೆ ಕಂಚಿನ ಕಳಸವನ್ನು ಇಟ್ಟಿರುತ್ತಾರೆ. ಅನಂತರ ಎಂಟು ದಿಕ್ಕುಗಳಿಗೂ ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಕಟ್ಟುತ್ತಾರೆ. ಜೊತೆಗೆ ಬಾಳೆಕಂಬ, ಮಾವಿನ ತೋರಣದಿಂದ ರಥವನ್ನು ಅಲಂಕರಿಸುತ್ತಾರೆ. ಬೋಯಿಯವರು ರಥದ ದುರಸ್ತಿ ಅಲಂಕಾರದ ಹೊಣೆ ಹೊತ್ತಿರುತ್ತಾರೆ. ಕಿನ್ನಾಳಿನ, ಗಂಗಾವತಿಯ ಚಿತ್ರಗಾರರು ರಥದ ಗೊಂಬೆಗಳಿಗೆ ಬಣ್ಣ ಕೊಡುತ್ತಾಳೆ.

ರಥವನ್ನು ರಾಜಮನೆತನದ ನೇತೃತ್ವದಲ್ಲಿ ಸಹಸ್ರಾರು ಭಕ್ತರ ಸಮೂಹವನ್ನು ಎಳೆಯಲಾಗುತ್ತದೆ. ತೇರು ಎಳೆದ ನಂತರ ಪ್ರತಿಯೊಂದು ಕುಟುಂಬದವರು ಕುಂಕುಮ, ಬಳೆ, ಬೆಂಡು, ಬತಾಸ, ಮೈಸೂರುಪಾಕ್, ಜಿಲೇಬಿ, ಮಂಡಾಳುಕೊಳ್ಳುತ್ತಾರೆ. ಅತಿಥಿಗಳಿಗೂ ಕೊಡಿಸುತ್ತಾರೆ. ಇದು ಜಾತ್ರೆಯ ಪ್ರಸಾದವೆಂದು ಭಾವಿಸುತ್ತಾರೆ.

ಜಾತ್ರೆ ಎಂದರೆ ಕಲಾವಿದರಿಗೆ ಹಬ್ಬ. ಇಲ್ಲಿ ಸಾಮಾನ್ಯವಾಗಿ ನಾಟಕ ಬಯಲಾಟಗಳು ಪ್ರದರ್ಶನ ಗೊಳ್ಳುತ್ತವೆ. ಡೊಳ್ಳು, ನಂದಿ ಧ್ವಜ ಕುಣಿತ, ತಮ್ಮಟೆ ವಾದನ, ಹುಸುಕಿನ ಚೀಲ ಎತ್ತುವುದು, ರುಬ್ಬುವ ಗುಂಡು ಎತ್ತುವುದು, ಒಟ್ಟದ ಕಂಬ ಏರಿ ಬಂಗಾರದ ಉಂಗುರ ಗೆಲ್ಲುವುದು ಮುಂತಾದ ಗ್ರಾಮೀಣ ಆಟಗಳು ಪ್ರದರ್ಶನಗೊಳ್ಳುತ್ತವೆ. ವಿಶಿಷ್ಟಪೂರ್ಣವಾದ, ವೈವಿಧ್ಯತೆಯಿಂದ ಕೂಡಿದ ಈ ಜಾತ್ರೆ ಇಲ್ಲಿನ ಜನರ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಭಕ್ತಿ, ಭಾವೈಕ್ಯತೆಯನ್ನು ಸೂಚಿಸುತ್ತದೆ. ಕಲೆ, ಸಾಹಿತ್ಯ, ಸಂಗೀತ, ವೇಷಭೂಷಣ, ಮನರಂಜನೆಯ ಪ್ರತೀಕಗಳಾಗಿವೆ. ಹೀಗೆ ಆನೆಗೊಂದಿ ಜಾತ್ರೆಯು ಜನರಿಗೆ ಸಂತೋಷ, ನೆಮ್ಮದಿ, ಶಾಂತಿ ಮನರಂಜನೆ ಮತ್ತು ಧಾರ್ಮಿಕ ಮನೋಭಾವನೆ ಬೆಳೆಸುತ್ತವೆ.

# ಅಧ್ಯಾಯ : ಏಳು

# ಆನೆಗೊಂದಿ ಗ್ರಾಮದ ದೈವಗಳು, ನಂಬಿಕೆ ಮತ್ತು ವಿಧಿ-ನಿಷೇಧಗಳು

## ಅಧ್ಯಾಯ ೭

# ಆನೆಗೊಂದಿ ಗ್ರಾಮದ ದೈವಗಳು, ನಂಬಿಕೆ ಮತ್ತು ವಿಧಿ-ನಿಷೇಧಗಳು

### ೭.೧. ಗ್ರಾಮದ ದೈವಗಳು

ಆನೆಗೊಂದಿಯು ಪೌರಾಣಿಕ ಮತ್ತು ಐತಿಹಾಸಿಕ ಸ್ಥಳವಾದ್ದರಿಂದ ಇಲ್ಲಿ ಸಹಜವಾಗಿ ದೇವಾಲಯಗಳು ನಿರ್ಮಾಣಗೊಂಡಿವೆ. ದೇವಾಲಯಗಳನ್ನು ಅಧ್ಯಯನದ ದೃಷ್ಟಿಯಿಂದ ಶಿಷ್ಟ ದೇವತೆಗಳ ದೇವಾಲಯ ಮತ್ತು ದೇವಾಲಯವೆಂದು ಗ್ರಾಮ ದೇವತೆಗಳ ಎರಡು ರೀತಿಯಿಂದ ವಿಭಜಿಸಲಾಗಿದೆ. ಶಿಷ್ಟ ದೇವತೆಗಳ ದೇವಾಲಯದಲ್ಲಿ ಈಗಲೂ ಪೂಜಿಸಲ್ಪಡುವ ದೇವಾಲಯಗಳು ಮತ್ತು ಪೂಜಾ ರಹಿತ ದೇವಾಲಯಗಳೆಂದು ಮತ್ತು ಗ್ರಾಮ ದೇವತೆಗಳ ದೇವಾಲಯವೆಂದು ಎರಡು ರೀತಿಯಿಂದ ವರ್ಗೀಕರಿಸಲಾಗಿದೆ. ಆನೆಗೊಂದಿ ದೈವಗಳಲ್ಲಿ ವಿಶಿಷ್ಟವಾದ ಧಾರ್ಮಿಕ ವಿಧಿ ವಿಧಾನಗಳು, ಪೂಜೆ, ಪುನಸ್ಕಾರಗಳು, ಆಚರಣೆಗಳು ನಡೆಯುತ್ತವೆ. ಪ್ರಮುಖವಾದ ಕೆಲವು ದೈವಗಳ ವಿವರ ಮಾಹಿತಿಯನ್ನು ಈ ಕೆಳಗಿನಂತೆ ಒದಗಿಸಲಾಗಿದೆ.

**ಪೂಜಾ ಸಹಿತ ದೇವಾಲಯಗಳು**

ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ದೇವಾಲಯಗಳನ್ನು ಪಟ್ಟಿ ಮಾಡಲಾಗಿದೆ.

೧. ರಂಗನಾಥಸ್ವಾಮಿ ದೇವಾಲಯ, ೨. ಗವಿ ರಂಗಾನಾಥಸ್ವಾಮಿ ದೇವಾಲಯ, ೩. ಜಯಲಕ್ಷ್ಮೀ ದೇವಾಲಯ (ಪಂಪಾ ಸರೋವರ), ೪. ಬಂಡೆ ರಂಗನಾಥ ದೇವಾಲಯ, ೫. ಆಂಜನೇಯ ದೇವಸ್ಥಾನ (ಅಂಜನಾದ್ರಿ ಬೆಟ್ಟ), ೬. ಚಂದ್ರರಾಯನ ದೇವಾಲಯ, ೭. ನವ ವೃಂದಾವನ, ೮. ವೆಂಕಟೇಶ್ವರ ದೇವಾಲಯ, ೯. ಈಶ್ವರ ದೇವಾಲಯ, ೧೦. ರಾಮ ದೇವಾಲಯ, ೧೧. ಚನ್ನಕೇಶವ ದೇವಾಲಯ, ೧೨. ಗಣೇಶ ದೇವಾಲಯ (ಜೈನ ಮಂದಿರದ ಪಕ್ಕದಲ್ಲಿ), ೧೩. ಆಂಜನೇಯ ದೇವಾಲಯ (ಆನೆಗೊಂದಿ ಗ್ರಾಮದಲ್ಲಿ), ೧೪. ರಾಘುವೇಂದ್ರಸ್ವಾಮಿ ಮಠ, ೧೫. ವೀರಭದ್ರೇಶ್ವರ ದೇವಾಲಯ, ೧೬. ನರಸಿಂಹ ದೇವಾಲಯ (ಚಿಂತಾಮಣಿ), ೧೭. ಚಿಂತಾಮಣಿ ಮಠ

**ಪೂಜಾ ರಹಿತ ದೇವಾಲಯಗಳು**

೧. ಆಂಜನೇಯ ದೇವಾಲಯ (ಸುಂಕದ ಅಗಸಿ, ತಳವಾರಘಟ್ಟ), ೨. ಜೈನ ಮಂದಿರ, ೩. ಗಣೇಶನ ಗುಡಿ (ರಾಮ ಪ್ರಕಾಶ, ರಾಮರಾಜ ತಂದೆ, ವೆಂಕಟರಾವ್ ಇವರ ಮಾಲೀಕತ್ವದಲ್ಲಿ ಇರುವದು), ೪. ನಗರೇಶ್ವರ ಗುಡಿ (ಹಳೆಯದು), ೫. ಚಂದ್ರಶೇಖರ ಗುಡಿ (ಅವದೂತ ಮಠ), ೬. ಬಸವಪ್ಪ, ೭. ನಾಗಪ್ಪ, ೮. ಹುಚ್ಚಪ್ಪಯ್ಯನ ಮಠ, ೯. ಬೆಣ್ಣೆಮಠ

**ಗ್ರಾಮ ದೇವತೆಗಳು**

೧. ಊರಮ್ಮ, ೨. ಗಾಳೆಮ್ಮ, ೩. ದುರ್ಗಾ ದೇವಾಲಯ (ಘಟ್ಟಿಕೋಟೆ), ೪. ಬಸ್ಸಿಮಾಂಕಳಿ (ಅಂಬಿಗರ ಹೊಳೆ ಹತ್ತಿರ), ೫. ಗಂಗಮ್ಮ ದೇವಾಲಯ, ೬. ಮಲೆಮ್ಮ, ೭. ಎಲ್ಲಮ್ಮ (ಬೆಟ್ಟದ ಎಲ್ಲಮ್ಮ), ೮. ಕಾಳಮ್ಮ, ೯. ಗುಂಡ್ಲಮ್ಮ

**ಮಠಗಳು**

೧. ಉತ್ತರಾಧಿಮಠ (ಪೂಜಾಸಹಿತ), ೨. ರಾಯರ ಮಠ (ಪೂಜಾಸಹಿತ), ೩. ವ್ಯಾಸರಾಯರ ಮಠ (ಪೂಜಾಸಹಿತ), ೪. ಅವದೂತ ಮಠ (ಪೂಜಾರಹಿತ), ೫. ಹುಚ್ಚಪ್ಪಯ್ಯನ ಮಠ (ಪೂಜಾರಹಿತ), ೬. ಚಿಂತಾಮಣಿ ಮಠ (ಪೂಜಾಸಹಿತ), ೭. ಬೆಣ್ಣೆ ಮಠ (ಪೂಜಾರಹಿತ), ೮. ಮ್ಯಾಗಳ ಮಠ (ಪೂಜಾರಹಿತ)

## ೭.೨. ದೈವಗಳು ಮತ್ತು ಆಚರಣೆಗಳು

ಆನೆಗೊಂದಿ ಗ್ರಾಮದ ಕೆಲವು ಪ್ರಮುಖ ದೈವಗಳು ಮತ್ತು ದೈವಗಳೊಂದಿಗಿನ ಜನಪದರ ಆಚರಣೆಗಳು ಸಂಪ್ರದಾಯಬದ್ಧವಾಗಿದೆ.

**ರಂಗನಾಥ ಸ್ವಾಮಿ :** ಆನೆಗೊಂದಿ ಗ್ರಾಮದ ಪ್ರಮುಖ ದೇವರು ಇದಾಗಿದ್ದು. ವಿಜಯನಗರ ವಾಸ್ತುಶೈಲಿಯಲ್ಲಿ ಇದನ್ನು ನಿರ್ಮಿಸಲಾಗಿದೆ. ಸಭಾಮಂಟಪ, ಅಂತರಾಳ, ಗರ್ಭಗೃಹ ಮತ್ತು ಭಾಗಶಃ ಪ್ರಾಕಾರವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಆಕರ್ಷಕ ಅನಂತಶಯನ ರಂಗನಾಥ ಶಿಲ್ಪವಿದೆ. ಇದು ಆನೆಗೊಂದಿ ಮತ್ತು ಸುತ್ತಮುತ್ತಲಿನ ಗ್ರಾಮದ ಜನಪದರ ದೈವವಾಗಿದೆ. ಗ್ರಾಮದ ಎಲ್ಲ ಜಾತಿ ಜನಾಂಗದವರು ಈ ದೈವಕ್ಕೆ ನಡೆದುಕೊಳ್ಳುತ್ತಾರೆ. ಜನಪದರು ತಮ್ಮ ಕಷ್ಟ ದುಃಖಗಳ ಪರಿಹಾರಕ್ಕಾಗಿ ಜಾತ್ರೆ, ಉತ್ಸವ, ಸಂದರ್ಭಗಳಲ್ಲಿ ಹರಕೆ ತೀರಿಸುವುದುಂಟು.

**ಜಾತ್ರೆ :** ಐತಿಹಾಸಿಕ ಸ್ಥಳಗಳಲ್ಲಿ, ತಲತಲಾಂತರಗಳಿಂದ ಸಾಗಿಬಂದಿರುವ ಅತಿ ಪ್ರಾಚೀನ ಜಾತ್ರೆಗಳಲ್ಲಿ ಆನೆಗೊಂದಿಯ ರಂಗನಾಥಸ್ವಾಮಿ ಜಾತ್ರೆಯು ಒಂದು. ಇಲ್ಲಿನ ಆಚರಣೆಗಳು ಬಹು ಪ್ರಮುಖವಾದವುಗಳಾಗಿವೆ. ಚೈತ್ರಬಹುಳ ಕೃಷ್ಣಪಕ್ಷ, ತಿಥಿಯಂದು ಹುಣ್ಣಿಮೆಯಾದ ಐದನೇ ದಿನದಿಂದ ಸತತವಾಗಿ ಐದು ದಿನಗಳವರೆಗೆ ವಿಶೇಷ ಪೂಜೆ ಪುನಸ್ಕಾರ, ಉತ್ಸವಗಳು ನಡೆಯುತ್ತವೆ. ಮೂರನೇ ದಿನ ಅತಿ ವಿಜೃಂಭಣೆಯಿಂದ, ಜನಸಾಗರದ ಮಧ್ಯದಲ್ಲಿ ಆನೆಗೊಂದಿ ರಾಜರುಗಳ ನೇತೃತ್ವದಲ್ಲಿ ನೆರವೇರುತ್ತದೆ. ಇದೇ ಸಂದರ್ಭದಲ್ಲಿ ಸಾಮೂಹಿಕ ವಿವಾಹಗಳು ಜರುಗುತ್ತವೆ.

ಶ್ರಾವಣಮಾಸದಲ್ಲಿ ಎರಡನೇ ಶುಕ್ರವಾರದಂದು ವರಮಹಾಲಕ್ಷ್ಮಿಗೆ ಗ್ರಾಮದ ಮುತ್ತೈದೆಯರಿಂದ ಪೂಜೆ ನೆರವೇರುತ್ತದೆ. ನಂತರ ಪ್ರಸಾದ ವಿತರಣೆಯಾಗುತ್ತದೆ. ದಸರಾ ಹಬ್ಬದಲ್ಲಿ ಆನೆಗೊಂದಿ ರಾಜರ ನೇತೃತ್ವದಲ್ಲಿ ಗ್ರಾಮೀಣ ಜನರೊಂದಿಗೆ ರಂಗಾಥಸ್ವಾಮಿಯ ಪಲ್ಲಕ್ಕಿಯ ಮಲ್ಲಾದೇವರ ಮಂಟಪಕ್ಕೆ ತೆರಳಿ

ಬನ್ನಿ ಗಿಡಕ್ಕೆ ಪೂಜೆ ಸಲ್ಲಿಸಿ, ಬನ್ನಿ ಮುಡಿದು, ನಂತರ ಗ್ರಾಮ ಪ್ರದಕ್ಷಿಣೆ ಮಾಡಿ, ದೇವಸ್ಥಾನಕ್ಕೆ ಬರುವುದು. ಮಹಾಮಂಗಳಾರತಿ ಆದ ಮೇಲೆ ದೇವರಿಗೆ, ರಾಜರಿಗೆ ಬನ್ನಿ ಸಮರ್ಪಿಸಿ ನಂತರ ಪರಸ್ಪರ ಜನರು ಬನ್ನಿ ವಿನಿಮಯ ಮಾಡಿಕೊಳ್ಳುತ್ತಾರೆ. ಕಾರ್ತಿಕ ಮಾಸದಲ್ಲಿ ದೇವಸ್ಥಾನದಲ್ಲಿ ದೀಪಾಲಂಕಾರ ಮಾಡಿ, ಪಲ್ಲಕ್ಕಿಯ ಎರಡು ಬದಿಗಳಲ್ಲಿ ದೀಪ ಇರಿಸಿ, ಪಲ್ಲಕ್ಕಿಯ ಮಧ್ಯದಲ್ಲಿ ರಂಗನಾಥಸ್ವಾಮಿಯನ್ನು ಕೂಡಿಸಿ, ಗ್ರಾಮ ಪ್ರದಕ್ಷಿಣೆ ಮಾಡಿ. ಗ್ರಾಮಸ್ಥರೆಲ್ಲ ಪೂಜೆ ಸಲ್ಲಿಸಿ ಪ್ರಸಾದ ಸ್ವೀಕರಿಸಿ ಮನೆಗೆ ತೆರಳುತ್ತಾರೆ.

**ದುರ್ಗಾ ದೇವಸ್ಥಾನ (ಘಟ್ಟಿಕೋಟೆ):** ಆನೆಗೊಂದಿಯ ಊರ ಹೊರಗಿನ ಪಶ್ಚಿಮ ಭಾಗದ ಬೆಟ್ಟದ ಮೇಲೆ ಇರುವ ದುರ್ಗಾದೇವಿ ದೇವಸ್ಥಾನವನ್ನು ಆನೆಗೊಂದಿ ರಾಜರು ಕಟ್ಟಿಸಿದರು ಎನ್ನಲಾಗಿದೆ. ಕೋಟೆಯ ರಕ್ಷಕ ದೈವ ದುರ್ಗಾಮಾತೆ. ಆನೆಗೊಂದಿ ರಾಜರ ಮನೆ ದೇವರು ಕೂಡಾ. ಹಿಂದೆ ಕೋಣವನ್ನು ಬಲಿಕೊಡುವ ಮೂಲಕ ಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸುತ್ತಿದ್ದರು. ವಿಜಯ ದಶಮಿಯಲ್ಲಿ ಇಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ದುರ್ಗಾದೇವಸ್ಥಾನದಿಂದ ಆನೆಗೊಂದಿ ಉತ್ಸವದ ಆರಂಭವನ್ನು ಮಾಡಲಾಗುತ್ತದೆ. ಜಂಬೂಸವಾರಿಯೊಂದಿಗೆ ಕಲಾತಂಡಗಳ ನೃತ್ಯ ಪ್ರದರ್ಶನಗಳೊಂದಿಗೆ ಅತ್ಯಂತ ವೈಭವ ಮೆರವಣಿಗೆಯು ದುರ್ಗಾದೇವಸ್ಥಾನದಿಂದ ಗ್ರಾಮಪ್ರದಕ್ಷಿಣೆ ಮಾಡಿ ಉತ್ಸವ ಮಂಟಪಕ್ಕೆ ತೆರಳುತ್ತದೆ. ಆನೆಗೊಂದಿಯ ಎಲ್ಲ ಜಾತಿ ಜನಾಂಗದವರಷ್ಟೇ ಅಲ್ಲದೆ ದೂರ ದೂರದ ಗ್ರಾಮ, ಪಟ್ಟಣಗಳ ಭಕ್ತರೂ ದೇವಿಗೆ ನಡೆದುಕೊಳ್ಳುತ್ತಾರೆ. ಅಮವಾಸ್ಯ, ಶುಕ್ರವಾರ, ಮಂಗಳವಾರಗಳಂದು ವಿಶೇಷ ಪೂಜೆ, ಪ್ರಸಾದ ಸೇವೆ ಇರುವುದರಿಂದ ಬಹಳಷ್ಟು ಜನ ಭಕ್ತರು ಆಗಮಿಸುತ್ತಾರೆ. ಪಕ್ಕದಲ್ಲೇ ಕನ್ನೆರಮ್ಮನ ಬಾವಿ, ಕೋಟೆ, ಗುಹೆ, ಕುದುರೆ ಲಾಯ ಇರುವುದರಿಂದ ಇದು ಪ್ರವಾಸಿಗಳಿಗೆ ಪ್ರೇಕ್ಷಣೀಯ ಸ್ಥಳವಾಗಿದೆ.

**ಊರಮ್ಮ:** ಗ್ರಾಮದ ಮುಂಭಾಗದಲ್ಲಿ ಊರಮ್ಮ, ಗಾಳೆಮ್ಮ ದೈವಗಳನ್ನು ಪ್ರತಿಷ್ಠಾಪಿಸಲಾಗಿದ್ದು. ಈ ದೈವಗಳು ಗ್ರಾಮದ ಗ್ರಾಮದೇವತೆಗಳಾಗಿವೆ. ಎಲ್ಲ ಜಾತಿಯ ಜನಾಂಗದವರು ಊರಮ್ಮನನ್ನು ಪೂಜಿಸುತ್ತಾರೆ. ಈಕೆಗೆ ಮಂಗಳವಾರ, ಶುಕ್ರವಾರಗಳಂದು ಹೆಚ್ಚಾಗಿ ಭಕ್ತರು ನಡೆದುಕೊಳ್ಳುತ್ತಾರೆ. ಅಂದು ಭಕ್ತರಿಂದ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ವರ್ಷಕ್ಕೊಮ್ಮೆ ಕುರಿ, ಕೋಳಿ ಬೇಟೆ ನಡೆಯುತ್ತದೆ. ಕಷ್ಟ ಕಾರ್ಪಣ್ಯಗಳಿಗಾಗಿ, ಊರಿಗೆ ಮಾರಿ ಬಂದಾಗ, ವಾಂತಿ, ಭೇದಿ ಆದಾಗ, ತಟ್ಟು, ಗಣಜಲಿ ಇನ್ನೂ ಮುಂತಾದ ಕಷ್ಟಗಳಿಗೆ ಊರಮ್ಮ ದೈವಕ್ಕೆ ಜನರು ಮೊರೆ ಹೋಗುತ್ತಾರೆ. ಹರಕೆ ಹೊರುವುದು, ಎಡೆ ಒಪ್ಪಿಸುವುದು ಇಲ್ಲಿನ ವಿಶೇಷವಾಗಿದೆ. ಊರಿಗೆ ಅಥವಾ ಹೊಲ ಗದ್ದೆಗಳಿಗೆ ಹೋಗುವ ಜನರು ಊರಮ್ಮನಿಗೆ ನಮಸ್ಕರಿಸಿ ಹೋಗುವುದು ರೂಢಿಯಲ್ಲಿದೆ.

**ಬನ್ನಿ ಮಹಾಂಕಾಳಿ:** ಆನಗೂಂದಿಯಿಂದ ಲಂಬಿಗರ ಹೊಳೆಗೆ ಹೋಗುವ ದಾರಿಯಲ್ಲಿ ಬನ್ನಿಮಾಂಕಾಳಿ ಮತ್ತು ಈರಣ್ಣ ದೈವಗಳಿವೆ. ಇಲ್ಲಿ ಮೊದಲು ಬೃಹತ್ತಾದ ಬನ್ನಿಮರವಿದ್ದು ಅದು ಬಿದ್ದು ಹೋಗಿ ಹೊಸ ಮರ ಬೆಳೆದಿದೆ. ಮಕ್ಕಳಾಗದವರು, ಮದುವೆಯಾಗದವರು ಕೂಸುದಕ್ಕದಿದ್ದರೆ ಇತರೆ ರೋಗ ರುಜಿನಗಳು ಮನೆತನಕ್ಕೆ

ಅಂಟಿದರೆ ಇನ್ನು ಮುಂತಾದ ಸಮಸ್ಯೆಗಳು ಬಂದಾಗ ಈ ದೈವಕ್ಕೆ ನಡೆದುಕೊಳ್ಳುತ್ತಾರೆ. ಕಷ್ಟ ಪರಿಹಾರವಾದವರು ಬನ್ನಿ ಮಾಂಕಾಳಿಗೆ ಬೆಳ್ಳಿ ಕುದುರೆ, ಹಸಿರು ಸೀರೆ, ಕುಪ್ಪಸ, ಹಸಿರು ಬಳೆ ಅರ್ಪಿಸುತ್ತಾರೆ. ಹರಕೆ ರೂಪದಲ್ಲಿ ಬಂದ ಬಳೆಗಳನ್ನು ಬನ್ನಿ ಮಾಂಕಾಳಿಗೆ ದೊಡ್ಡ ಬಳೆಯ ಹಾರ ಮಾಡಿ ಹಾಕಲಾಗಿದೆ. ಇಲ್ಲಿನ ಬನ್ನಿ ಮಾಂಕಾಳಿಗೆ ಹೆಚ್ಚಾಗಿ ಹೆಣ್ಣು ಮಕ್ಕಳು ನಡೆದುಕೊಳ್ಳುವುದುಂಟು.

**ಗಾಳೆಮ್ಮ :** ಆನೆಗೊಂದಿಯ ಗ್ರಾಮದಲ್ಲಿ ಜನರಿಗೆ ಸಾಮೂಹಿಕವಾಗಿ ವಾಂತಿ ಭೇದಿಯಾದರೆ, ಮಾರಿ ಬಂದರೆ, ಮುಂತಾದ ಕಷ್ಟಗಳ ಪರಿಹಾರಕ್ಕಾಗಿ ಊರೊಳಗೆ ಗಾಳೆಮ್ಮನ ಪ್ರತಿಷ್ಠಾಪನೆ ಮಾಡುತ್ತಾರೆ. ಊರ ಹೊರಗೆ ಗಾಳೆಮ್ಮ ದೈವ ಇದ್ದರೂ, ಗ್ರಾಮದ ಸಾಕಮ್ಮನವರ ಮನೆಯಂಗಳದ ಬಯಲಿನಲ್ಲಿ ಗಾಳೆಮ್ಮ ದೇವತೆಯನ್ನು ಸ್ಥಾಪನೆ ಮಾಡುತ್ತಾರೆ. ಇಡೀ ಊರಿನ ಜನತೆ ಅಂದು ಈ ದೈವಕ್ಕೆ ಕಾಯಿ, ಅನ್ನ, ಸಾರು, ಹೋಳಿಗೆಯನ್ನು ಎಡೆ ಕೊಟ್ಟು ಕಷ್ಟದಿಂದ ಪಾರುಮಾಡು ತಾಯಿ ಎಂದು ಬೇಡಿಕೊಂಡು ತಿರುಗಿ ನೋಡದೆ ಮನೆಗೆ ತೆರಳುತ್ತಾರೆ. ನಂತರ ಸಂಗ್ರಹವಾದ ಎಲ್ಲಾ ಎಡೆಯನ್ನು ಅಲ್ಲಿನ ಜನರು ಊಟ ಮಾಡುತ್ತಾರೆ. ಕೊನೆಯಲ್ಲಿ ದೈವ ಸ್ಥಾಪನೆ ಮಾಡಿದ ಜಾಗದಲ್ಲಿ ಏನೂ ಉಳಿಯದಂತೆ ಬಳಿದುಕೊಂಡು ಆನೆಗೊಂದಿಯ ವಲಿಮಾರಿ (ಮಲ್ಲಾಪುರದ ಕರೆಕಲ್ಲು ಮಾಗಾಣಿ)ಗೆ ಬಿಟ್ಟು ಹಿಂದುರುಗಿ ನೋಡದೆ ವಾಪಸ್ ಬರುತ್ತಾರೆ. ಇದರಿಂದ ಊರಿಗೆ ಬಂದ ಮಾರಿ ಹೋಗುತ್ತಾಳೆಂಬುದು ಆನೆಗೊಂದಿ ಜನಪದರ ನಂಬಿಕೆಯಾಗಿದೆ.

**ಪಂಪಾ ಸರೋವರ :** ಆನೆಗೊಂದಿಯಿಂದ ಹುಲಿಗಿಗೆ ಹೋಗುವ ಮಾರ್ಗದ ಬೆಟ್ಟಗಳ ಮಧ್ಯದಲ್ಲಿ ಪಂಪಾಸರೋವರವಿದೆ. ಪುರಾಣ ಪ್ರಸಿದ್ಧವಾದ ಪಂಪಾಸರೋವರ ಮತ್ತು ಮಾನಸ ಸರೋವರಗಳ ದಡದ ಮೇಲೆ ಜಯಲಕ್ಷ್ಮಿ (ಕೆಲವರು ದುರ್ಗೆ, ಪಂಪಾಂಬಿಕೆ ಎಂದು ಹೇಳುತ್ತಾರೆ) ಮತ್ತು ಪಂಪಾಪತಿ (ಈಶ್ವರ) ದೇವಸ್ಥಾನಗಳಿವೆ. ಸಾಧು ಸಂತರು ಈ ದೈವಗಳಿಗೆ ನಿತ್ಯ ಪೂಜೆ ಮಾಡುತ್ತಾರೆ. ಶುಕ್ರವಾರ, ಮಂಗಳವಾರ, ಸೋಮವಾರ ಈ ದೈವಗಳಿಗೆ ವಿಶೇಷ ಅಲಂಕಾಕರ ಪೂಜೆ ನೆರವೇರುತ್ತದೆ. ಶ್ರಾವಣ ಮಾಸದಲ್ಲಿ ಭಕ್ತಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ದರ್ಶನಕ್ಕೆ ಬರುತ್ತಾರೆ. ಗೋಕುಲಾಷ್ಟಮಿಯಂದು ರಾತ್ರಿಯಿಡೀ ಭಜನೆ, ಪೂಜೆ ಪುನಸ್ಕಾರ ನಡೆಯುತ್ತದೆ. ಧನುರ್ಮಾಸದಲ್ಲೂ ಪೂಜೆ ನೆರವೇರುತ್ತದೆ. ಈ ದೇವಸ್ಥಾನದ ನಿರ್ವಹಣೆಯನ್ನು ಗಂಗಾವತಿಯ ತಾಲೂಕು ಆಡಳಿತ ನೋಡಿಕೊಳ್ಳುತ್ತದೆ.

**ಅಂಜನಾದ್ರಿ ಬೆಟ್ಟ :** ಆನೆಗೊಂದಿಯಿಂದ ಹುಲಿಗಿಗೆ ಹೋಗುವ ಮಾರ್ಗದಲ್ಲಿ ಬರುವ ಬೆಟ್ಟವೇ, ಅಂಜನಾದ್ರಿ ಬೆಟ್ಟ ಅಂಜನಾದ್ರಿಯು ಹನುಮಂತನಿಗೆ ಇಲ್ಲಿಯೇ ಜನ್ಮ ನೀಡಿದ್ದಾಳೆಂದು ಐತಿಹ್ಯ ಪ್ರಚಲಿತದಲ್ಲಿದೆ. ಆಂಜನೇಯನು ಈ ಭಾಗದ ಎಲ್ಲಾ ಜಾತಿಯ ಜನರಿಗೆ ಪೂಜ್ಯನೀಯ ದೈವವಾಗಿದ್ದಾನೆ. ಪ್ರತಿ ಶನಿವಾರ, ಸಂಕ್ರಾಂತಿಯ ದಿನಗಳಲ್ಲಿ, ಶ್ರಾವಣ ಮಾಸದಲ್ಲಿ, ಹನುಮನ ಜಯಂತಿಯಂದು ಇಲ್ಲಿನ ವಿಶೇಷ ಪೂಜೆಗೆ ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತಾರೆ. ಮೇಣದಂತಿರುವ ಕೇಸರಿ ಬಣ್ಣವನ್ನು ಆಂಜನೇಯನಿಗೆ ಯಾವಾಗಲೂ ಮೆತ್ತಿರುತ್ತಾರೆ. ಭಕ್ತರಿಗೆ ಈ ಕೇಸರಿ ಬಣ್ಣವೇ ಹಣೆಗೆ ಹಚ್ಚಿಕೊಳ್ಳುವ ಆದಾರ. ಕುಲದೈವ,

ಗ್ರಾಮದೈವ, ಆದಿದೈವ ಯಾವುದೇ ಇರಲಿ ಹನುಮನ ಕರುಣೆ ಸದಾ ಇರಲೇಬೇಕೆಂಬುದು ಇಲ್ಲಿಗೆ ಬರುವ ಭಕ್ತಾದಿಗಳ ಅಭಿಪ್ರಾಯವಾಗಿದೆ. ಆನೆಗೊಂದಿ ಗ್ರಾಮದೊಳಗೂ ಸಹ ಪೂಜೆಗೊಳ್ಳುವ ಆಂಜನೇಯ ದೈವಗಳಿವೆ. ನೂರಾರು ಪೂಜಾರಹಿತ ಆಂಜನೇಯ ದೈವಗಳು ಆನೆಗೊಂದಿ ಪರಿಸರದಲ್ಲಿವೆ ಎಂದು ಹೇಳಲಾಗುತ್ತದೆ. ಹನುಮಂತನಿದ್ದ ಕಡೆ ಊರಿಗೆ ರೋಗ ರುಜಿನಗಳಿಲ್ಲ, ಕಷ್ಟಕಾರ್ಪಣ್ಯಗಳಿಲ್ಲವೆಂಬ ಅಭಿಪ್ರಾಯ. ಭಕ್ತರಲ್ಲಿದೆ. ಹನುಮನಿಗೆ ಭಕ್ತರು ಎಲಿಚಟ್ಟಿ ಪೂಜೆ ಮಾಡಿಸುವುದುಂಟು. ಹೂಕಟ್ಟಿ ಭವಿಷ್ಯ ಕೇಳುವುದುಂಟು. ಹನುಮನು ಬಲ ಭಾಗದಿಂದ ಹೂ ಕೊಟ್ಟರೆ ಕೆಲಸ ಆಗುತ್ತದೆಂದು, ಎಡಭಾಗದಿಂದ ಹೂ ಕೊಟ್ಟರೆ ಕೆಲಸ ಆಗುವುದಿಲ್ಲವೆಂಬ ನಂಬಿಕೆ ಭಕ್ತರಲ್ಲಿದೆ. ಕಾಟ ಇದ್ದವರು ಎಳ್ಳು ಸಕ್ಕರೆ ತಂದು ಪೂಜಿಸುತ್ತಾರೆ. ಒಟ್ಟಾರೆ ನೂರೆಂಟು ದೈವಗಳಲ್ಲಿ ಇಲ್ಲಿನ ಹನುಮನು ಜನರ ಮನಸ್ಸನ್ನು ಸೂರೆಗೊಂಡಿರುವ ಅತ್ಯಂತ ಜನಪ್ರಿಯ ದೈವ ಎಂಬುದರಲ್ಲಿ ಅನುಮಾನವಿಲ್ಲ.

**ನವವೃಂದಾವನ :** ಆನೆಗೊಂದಿಯಿಂದ ಒಂದು ಕಿ.ಮೀ. ದೂರದಲ್ಲಿ ಇರುವ ತುಂಗಭದ್ರಾ ನಡುಗಡ್ಡೆಯ ಪ್ರದೇಶವೇ ನವ ವೃಂದಾವನ. ಇಲ್ಲಿಗೆ ಬ್ರಾಹ್ಮಣ ಭಕ್ತಾದಿಗಳು ಹೆಚ್ಚಾಗಿ ಬರುತ್ತಾರೆ. ಒಂಬತ್ತು ಯತಿವರ್ಯರು ವೃಂದಾವನಸ್ಥರಾಗಿರುವುದರಿಂದ ಇದು ನವವೃಂದಾವನವೆಂದು ಕರೆಯಲ್ಪಟ್ಟಿದೆ. ಒಂಬತ್ತು ಯತಿಗಳ ಆರಾಧನೆಯನ್ನು ಆಯಾ ಯತಿಗಳು ವೃಂದಾವನಸ್ಥರಾದ ದಿನಗಳಂದು ಬಹು ವಿಜೃಂಭಣೆಯಿಂದ ಜರುಗುತ್ತದೆ. ಆರಾಧನೆಯ ದಿನದಂದು ಆನೆಗೊಂದಿಯಿಂದ ಗಿಂಡಿಯಲ್ಲಿ ನೈವೇದ್ಯವನ್ನು ತೆಗೆದುಕೊಂಡು ಹೋಗಿ ಯತಿಗಳಿಗೆ ನೈವೇದ್ಯ ಮಾಡಲಾಗುತ್ತದೆ. ದರ್ಶನಕ್ಕೆ ಬಂದವರಿಗೆ ಊಟದ ವ್ಯವಸ್ಥೆ ಮಾಡಿರುತ್ತಾರೆ ನವವೃಂದಾವನಗಳಿಗೆ ಪ್ರತಿನಿತ್ಯ ಪೂಜೆ ಸಲ್ಲಿಸುತ್ತದೆ. ಗ್ರಾಮದೊಳಗಿನ ವ್ಯಾಸರಾಯರ ಮಠ, ಉತ್ತರಾದಿಮಠ, ರಾಯರ ಮಠದಲ್ಲಿ ಆರಾಧನೆಯ ಸಂದರ್ಭಗಳಲ್ಲಿ ಹೋಮ, ಹವನ, ಪ್ರವಚನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ತಮ್ಮ ಕಷ್ಟಕಾರ್ಪಣ್ಯಗಳನ್ನು ಪರಿಹರಿಸಿಕೊಳ್ಳಲೆಂದು ಭಕ್ತಾದಿಗಳು ದೀಪಾರಾಧನೆ ಮಾಡಿ ಯತಿಗಳಿಗೆ ಭಕ್ತಿಯ ಸೇವೆ ಮಾಡುತ್ತಾರೆ. ನವವೃಂದಾವನವು ಐತಿಹಾಸಿಕ ಪರಂಪರೆಯನ್ನು ಹೊಂದಿದ ಹಾಗೂ ಧಾರ್ಮಿಕವಾಗಿ ಪಾವಿತ್ರ್ಯತೆಯನ್ನು ಹೊಂದಿದ ಸ್ಥಳವೆಂದು ಭಾವಿಸಿ ಆನೆಗೊಂದಿ ಭಕ್ತರು ಮಾತ್ರವಲ್ಲದೆ ಕರ್ನಾಟಕದ ಅನೇಕ ಭಾಗಗಳಿಂದ, ಹೊರರಾಜ್ಯಗಳಿಂದಲೂ ಭಕ್ತಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಾರೆ ಎನ್ನಲಾಗಿದೆ.

## ೭.೩. ನಂಬಿಕೆ ಮತ್ತು ವಿಧಿ-ನಿಷೇಧಗಳು

**ಜನಪದ ನಂಬಿಕೆ :** ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ನಂಬಿಕೆಯೊಂದು ಅಂಗೀಕೃತವಾದಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧವಿದೆ. ಅದು ಸೂಚನೆ, ನಿಯಮ, ವಿಧಿ ನಿಷೇಧ, ನಿರ್ದೇಶನ, ಆಗ್ರಹ, ಆದೇಶ

ಹಾಗೂ ಆಚ್ಚೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನ ಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು ನಂಬಿಕೆಯೊಂದು ಸಾಂಪ್ರದಾಯ, ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದದ್ದು ಆ ಮೂಲಕ ಕ್ರಿಯಾ ರೂಪವನ್ನು ತಾಳುತ್ತದೆ. ಈ ಮೂಲಕ ಹುಟ್ಟಬಹುದಾದಂತಹ ನಂಬಿಕೆಗಳು ಅನೇಗೊಂದಿ ಜನಪದರಲ್ಲಿ ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದಾಗಿದೆ. ಬೆಕ್ಕು ಅಡ್ಡ ಬಂದರೆ ಹೆಣ ಹೂಳಿಟ್ಟು ವಾಪಸ್ ಬಂದವರು ಎದುರಾದರೆ, ವಿಧವೆ ಎದುರಾದರೆ, ಖಾಲಿ ಕೊಡ ಎದುರಾದರೆ ಹಾವು ಅಡ್ಡಬಂದರೆ ಅಪಶಕುನ ಇವುಗಳಿಂದ ಬದುಕಿನಲ್ಲಿ ಆಕಸ್ಮಿಕವಾದ ಒಂದು ಘಟನೆ ಅಥವಾ ವಸ್ತುಸಂಗತಿ ಪುನರಾವರ್ತನೆಗೊಂಡಾಗ ಅದು ನಂಬಿಕೆಯಾಗಿ ಘನೀಭವಿಸುತ್ತದೆ. ಕಾಗೆ ಮನೆ ಮುಂದಿನ ಮರದಲ್ಲಿ ಕೂತು ಕಾಕಾ ಎಂದು ಕೂಗಿದರೆ ನೆಂಟರು ಬರುತ್ತಾರೆ. ಕಾಗೆ ಮನೆಯೊಳಗಡೆ ಬಂದರೆ ಅಪಶಕುನ, ನರಿಯ ದರ್ಶನವಾದರೆ ಶುಭ ಶಕುನ, ಯುಗಾದಿಯ ದಿನ ರತ್ನ ಪಕ್ಷಿ ದರ್ಶನವಾದರೆ ಒಳ್ಳೆಯದು, ಹಂದಿಯು ಮನೆಯೊಳಗೆ ಬರಬಾರದು, ಬಂದರೆ ಲಕ್ಷ್ಮಿ ಬಂದಂತೆ. ಲಕ್ಷ್ಮಿಯನ್ನು ಹೊರಗೆ ಬಿಡದೆ ಮನೆಯಲ್ಲೇ ಹೂತುಬಿಡಬೇಕು ಇಂತಹ ಅನೇಕ ನಂಬಿಕೆಗಳು ಇಲ್ಲಿವೆ. ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ನೆನೆಯಬೇಕು, ಇಲ್ಲದಿದ್ದರೆ ಶನಿ ಹಿಡಿಯುತ್ತದೆ ಸಂಜೆ ಹೊತ್ತಲ್ಲಿ ಕಸ ಗೂಡಿಸಿ ಹೊರ ಹಾಕಬಾರದು, ಲಕ್ಷ್ಮಿ ಹೊರಟು ಹೋಗುತ್ತಾಳೆ, ಅಕ್ಕಿ ಹಸನು ಮಾಡುವಾಗ ಅಕ್ಕಿ ತಿಂದರೆ ಮದುವೆಯಲ್ಲಿ ಮಳೆ ಬರುತ್ತದೆ. ಆರತಿಯ ದೀಪ ಆಂದರೆ ಅಪಶಕುನ ಮೊದಲ ಆಷಾಢದಲ್ಲಿ ಅತ್ತೆ ಸೊಸೆ ಒಂದೇ ಬಾಗಿಲಲ್ಲಿ ಓಡಾಡಬಾರದು ಅಥವಾ ಒಂದೇ ಮನೆಯಲ್ಲಿ ಇರಬಾರದು. ಯಾವುದೇ ಶುಭ ಕಾರ್ಯಕ್ಕೆ ಹೋಗುವಾಗ ಮೂವರು ಹೋಗಬಾರದು. ಸತ್ತವರ ಮನೆಗೆ ಮಾತನಾಡಿಸಲು ಹೋದರೆ, ಆಸ್ಪತ್ರೆಯಲ್ಲಿನ ರೋಗಿಯನ್ನು ಮಾತನಾಡಿಸಿ ವಾಪಸ್ ಬರುವಾಗ 'ಹೋಗಿಬರುತ್ತೇನೆ' ಎಂದು ಹೇಳಬಾರದು ಹೀಗೆ ಮಾನವ ಬದುಕಿನ ಎಲ್ಲಾ ಮಗ್ಗಲುಗಳನ್ನು ಆವರಿಸಿಕೊಂಡಿರುವ ನಂಬಿಕೆಗಳು ಜನಪದ ಪ್ರಕಾರಗಳೊಂದಿಗೆ ನಿಕಟ ಸಂಬಂಧವನ್ನು ಪಡೆದುಕೊಂಡಿವೆ. ನಂಬಿಕೆಗಳ ಹಿಂದಿರುವ ಗಾದೆ, ಕತೆ, ಐತಿಹ್ಯ, ಪುರಾಣಗಳನ್ನು ಈ ನೆಲೆಯಿಂದ ಅಧ್ಯಯನ ಮಾಡಬೇಕಾಗಿದೆ.

'ರಾತ್ರಿ ಕಸಗೂಡಿಸಿದರೆ ಕಸವನ್ನು ಹೊರ ಚಲ್ಲಬಾರದು, ಲಕ್ಷ್ಮಿಯನ್ನು ಹೊರ ಹಾಕಿದಂತೆ' ಎಂಬ ನಂಬಿಕೆ ಬಹು ಹಿಂದಿನಿಂದ ಬಂದ ನಂಬಿಕೆಯಾಗಿದೆ. ವಿದ್ಯುತ್ ವ್ಯವಸ್ಥೆ ಇಲ್ಲದ ಅಂದಿನ ಸಂದರ್ಭದಲ್ಲಿ ರಾತ್ರಿ ಕಸಗೂಡಿಸಿದಾಗ ಏನಾದರೂ ಬೆಲೆ ಬಾಳುವ ವಸ್ತುಗಳು ಕಸದಲ್ಲಿ ಸೇರಿದರೂ ಸೇರಿರಬಹುದು. ಅದು ರಾತ್ರಿ ಕಣ್ಣಿಗೆ ಕಾಣುವುದಿಲ್ಲ. ಹಗಲಾದರೆ ಕಣ್ಣಿಗೆ ಸೂಕ್ಷ್ಮವಸ್ತು ಏನಾದರೂ ಇದ್ದರೆ ಕಾಣುತ್ತದೆ ಎಂಬ ಭಾವನೆಯಿಂದ ಈ ನಂಬಿಕೆಗೆ ಹುಟ್ಟುಹಾಕಿ ಅದಕ್ಕೆ ಧಾರ್ಮಿಕ ಕಾರಣ ನೀಡಿರಬೇಕು. ಧಾರ್ಮಿಕ ಕಾರಣವಿದ್ದರೆ

ನಂಬಿಕೆಯ ಉಲ್ಲಂಘನೆ ಕಷ್ಟವೆಂದು ಸಹ ಅಂದಿನವರ ಅಭಿಪ್ರಾಯವಿರಬೇಕು. ಇಂತಹ ಅನೇಕ ನಂಬಿಕೆಗಳು ಕಾಲಿಕ ಮಹತ್ವವನ್ನು ಪಡೆದವುಗಳಾಗಿರುತ್ತವೆ. ಇಂತಹ ನಂಬಿಕೆಗಳ ಕುರಿತ ಅಧ್ಯಯನ ನಡೆಯಬೇಕಿದೆ.

**ಇತರೆ ನಂಬಿಕೆಗಳು**

* ಯಾರಾದರೂ ಮಾತನಾಡಿಕೊಳ್ಳುತ್ತಿದ್ದಾಗ ಹಲ್ಲಿ ಲೊಚಗುಟ್ಟಿದರೆ, ತಾವು ಮಾತನಾಡಿದ್ದು ನಿಜ ಎಂದು ಇನ್ನೊಬ್ಬರಿಗೆ ಹೇಳುತ್ತಾರೆ. ಇದು ಹಲ್ಲಿ ಶಕುನ ಎನ್ನುತ್ತಾರೆ.
* ಯಾವುದೇ ಶುಭಕಾರ್ಯಕ್ಕೆ ಪುರೋಹಿತರ ಪಂಚಾಂಗ ಕೇಳಿಯೇ ಮಾಡುವದು.
* ಬುಧವಾರ, ಭಾನುವಾರ ಶುಭದಿನಗಳಲ್ಲ.
* ಶುಕ್ರವಾರ, ಮಂಗಳವಾರ, ಅಮವಾಸ್ಯೆಯ ದಿನ ಲಕ್ಷ್ಮೀ (ಹಣ) ಹೊರಗೆ ಕೊಡುವುದಿಲ್ಲ ಎಂಬ ನಂಬಿಕೆ.
* ಗಂಡಸರಿಗೆ ಬಲಗಣ್ಣಾಗಲಿ, ಬಲಹುಬ್ಬಾಗಲಿ ಹಾರಿದರೆ ಶುಭ ಶಕುನ, ಹೆಂಗಸರಿಗೆ ಎಡ ಹುಬ್ಬು ಅಥವಾ ಕಣ್ಣು ಹಾರಿದರೆ ಶುಭ ಶಕುನ.
* ಮೈಮೇಲೆ ಹಲ್ಲಿ ಬಿದ್ದರೆ, ತಿರುಪತಿಯಲ್ಲಿ ಬಂಗಾರದ ಹಲ್ಲಿ ಮುಟ್ಟಿಬಂದವರಿದ್ದರೆ ಮುಟ್ಟಬೇಕು. ಇಲ್ಲವೆ ಕೈಕಾಲು ತೊಳೆದುಕೊಂಡು ದೇವರಿಗೆ ದೀಪ ಬೆಳಗಿಸಬೇಕು.
* ಬಲಮಗ್ಗಲಲ್ಲಿ ಏಳಬೇಕು ಒಳ್ಳೆಯದು.
* ಕಾಲು ಯಾರಿಗಾದರೂ ತಾಗಿದರೆ ಅವರಿಗೆ ನಮಸ್ಕರಿಸಬೇಕು.
* ಬರಿ ತೊಟ್ಟಿಲು ತೂಗಿದರೆ ಮಗುವಿಗೆ ಹೊಟ್ಟೆನೋವು ಬರುತ್ತದೆ.
* ಮೊರ, ಒಳಕಲ್ಲು, ಬೀಸುವ ಕಲ್ಲು ಒದೆಯಬಾರದು.

ಇದಲ್ಲದೆ ಮಂತ್ರ, ಯಂತ್ರ, ತಂತ್ರ, ಪವಾಡ, ದೆವ್ವ, ಜೋತಿಷ್ಯ, ನಾಡಿಗ್ರಂಥ, ಗಿಣಿಶಾಸ್ತ್ರ, ಪ್ರೇತಾತ್ಮ, ಗ್ರಹಗಳ ಪ್ರಭಾವ, ಪರಕಾಯ ಪ್ರವೇಶ, ಮೈಮೇಲೆ ದೇವರು ಬರುವುದು- ಹೀಗೆ ಇನ್ನೂ ಅನೇಕ ವಿಚಾರಗಳಲ್ಲಿ ಇವರದೇ ಆದ ನಂಬಿಕೆಗಳು ಇವೆ. ಯಾವುದರಿಂದಾದರೂ ಒಳ್ಳೆಯದಾಗುತ್ತದೆ ಎಂದರೆ ನಂಬುತ್ತಾರೆ. ಯಾರ ಮೇಲಾದರೂ ದೇವರು ಬಂದರೆ ಭವಿಷ್ಯ ಕೇಳುತ್ತಾರೆ. ಯಾರ ಮೇಲಾದರೂ ದೆವ್ವ ಬಂದರೆ ತಾಯತ ಹಾಕಿಸುತ್ತಾರೆ. ಮೈಯಿಂದ ದೆವ್ವ ಬಿಡುಗಡೆ ಮಾಡಿಸುವರು. ದೇವರು ಬಲಗಡೆಯಿಂದ ಹೂವು ಕೊಟ್ಟರೆ ಶುಭವಾಗುವುದು. ಎಡಗಡೆಯಿಂದ ಹೂವು ಕೊಟ್ಟರೆ ಶುಭ ಕೆಲಸ ಆಗುವುದಿಲ್ಲವೆಂಬ ನಂಬಿಕೆಯಿದೆ. "ನಂಬಿಕೆ ಮಾನಸಿಕ ಸ್ಥಿತಿಯ ಒಂದು ಪದರವಾದರೆ, ಸಂಪ್ರದಾಯ ಜನಾಂಗದ ಜೀವನ ಕ್ರಮ. ನಂಬಿಕೆ ಕಾಲಕ್ರಮೇಣ ಸಾಂಸ್ಕೃತಿಕ ಆವರಣಕ್ಕೆ ಬಿದ್ದು ಸಾಮಾಜಿಕ ಚೌಕಟ್ಟು ಪಡೆದು ಕ್ರಿಯಾಶೀಲವಾಗಿ ಆಚರಣೆಗಳಿಗೆ ಹಿಗ್ಗುತ್ತವೆ" ಎನ್ನುತ್ತಾರೆ ಶ್ರೀರಾಮ ಇಟ್ಟಣ್ಣವರ.

**ವಿಧಿ ನಿಷೇಧಗಳು**

ಭಯ ಮತ್ತು ಭಾವನಾ ಮೂಲವಾದ ಒಂದು ನಂಬಿಕೆಯನ್ನು ಕಟ್ಟು ನಿಟ್ಟಾಗಿ ಜಾರಿಗೆಗೊಳಿಸುವ ಅಥವಾ ಬಲಗೊಳಿಸುವಂಥಹುದು ನಿಷೇಧ. ಇದನ್ನು ಮಾಡಬಾರದು, ಇದು ಕೆಡುಕು ಎನ್ನುವ ಸಾಮಾಜಿಕ,

ಧಾರ್ಮಿಕ ಪ್ರತಿಬಂಧಕವೇ ನಿಷಿದ್ಧ ಎನ್ನಲಾಗುತ್ತದೆ. ಹೀಗಾಗಿ ಲಿಖಿತ ಕಾನೂನನ್ನು ಮೀರಿಸುವಂತಹ ಸಶಕ್ತ ನಿಬಂಧನೆಯಾಗಿ ನಿಷೇಧ ಕಾರ್ಯನಿರ್ವಹಿಸುತ್ತದೆ. ಆನೆಗೊಂದಿಯ ಪರಿಸರದಲ್ಲಿಯ ವಿಧಿ ನಿಷೇಧಗಳನ್ನು ವಿಭಿನ್ನವಾಗಿ, ವಿಶಿಷ್ಟವಾಗಿ ಕಂಡುಬರುತ್ತವೆ. ನಿಷೇಧದ ಮೂಲ ಮಾತಿನಲ್ಲಿದೆ ಸಕಾರಾತ್ಮಕ ಆಚರಣೆ ಗಳಿರುವಂತೆ ನಕಾರಾತ್ಮಕವಾದವೂ ಉಂಟು, ಸಕಾರಾತ್ಮಕವಾದವನ್ನು ಮಂತ್ರ ವಿಧಿಗಳೆಂದು, ನಕಾರಾತ್ಮಕ ವಾದುದನ್ನು ನಿಷೇಧಗಳೆಂದು ಕರೆಯಬಹುದು. ಇಲ್ಲಿನ ಕೆಲವು ಸಮುದಾಯಗಳಲ್ಲಿ ನಿಷೇಧಗಳನ್ನು ಪಾಲಿಸದೇ ಇರುವಂತಹ ವ್ಯಕ್ತಿಯನ್ನು 'ಅಪವಿತ್ರ' ಎಂದು ಕರೆಯುತ್ತಾರೆ.

**ನಿಷೇಧಗಳ ಸಕಾರಾತ್ಮಕ ಕ್ರಮಗಳು:** ನಿಷೇಧಗಳನ್ನು ಸ್ವಾರ್ಥಕ್ಕಾಗಿ ಮಾಡಿಕೊಂಡರೂ ಹೆಚ್ಚಿನ ನಿಷೇಧಗಳು ಸಾಮಾಜಿಕ ಸಂರಕ್ಷಣೆಗಳಾಗಿ ಮಾಡಿಕೊಂಡ ನಿಷೇಧಗಳಾಗಿವೆ. ಈ ನಿಷೇಧಗಳು ಹಲವಾರು ಸಕಾರಾತ್ಮಕ ಕ್ರಮಗಳನ್ನು ನಿರ್ವಹಿಸುತ್ತವೆ.

* ಊಟದ ತಟ್ಟೆಯನ್ನು ದಾಟಬಾರದು.
* ರಾತ್ರಿ ವೇಳೆ ಊಟ ಮಾಡದೆ ಮಲಗಬಾರದು.
* ಕುಕ್ಕರಗಾಲಲ್ಲಿ ಕೂತು ಉಣ್ಣಬಾರದು.
* ರಾತ್ರಿ ಹೊತ್ತು ಕಸಗೂಡಿಸಿ ಹೊರಗೆ ಚೆಲ್ಲಬಾರದು.
* ರಾತ್ರಿ ದೀಪ ಶಾಂತವಾದಾಗ ಊಟ ಮಾಡಬಾರದು.
* ಬೇವಿನ ಕಟ್ಟಿಗೆಯಿಂದ ಅಡಿಗೆ ಮಾಡಬಾರದು.
* ಮನೆಯ ಎದುರಿಗೆ ಕಟಿಂಗ್ ಷಾಪ್ ಇರಬಾರದು.

'ಕತ್ತಲಲ್ಲಿ ತೆಂಗಿನ ಮರ ಹತ್ತಬಾರದು' ಕತ್ತಲಲ್ಲಿ ಹುಳು ಹುಪ್ಪಟಗಳ ಕಾಟದಿಂದ ರಕ್ಷಿಸಲು ಈ ನಿಷೇಧವಿರಬೇಕು. 'ಊಟದ ತಟ್ಟೆಯನ್ನು ದಾಟಬಾರದು' ಊಟದ ತಟ್ಟೆಯನ್ನು ದಾಟಿದರೆ ಕಾಲಿನಲ್ಲಿ ಮಣ್ಣು, ಕೊಳೆ, ಅಳ್ಳು, ಊಟಕ್ಕೆ ಬಿದ್ದು ಅದನ್ನು ತಿಂದಾಗ ಹೊಟ್ಟೆ ನೋವು ಬರುತ್ತದೆ ಎಂಬುದು ವೈಜ್ಞಾನಿಕ ಕಾರಣವಾದರೆ, ಊಟ ದೇವರ ಸಮಾನ ಅದನ್ನು ದಾಟಿದರೆ ದೇವರು ಶಾಪ ಕೊಡುತ್ತಾನೆ ಎಂದು ನಂಬಿಕೆ ಈ ನಿಷೇಧಕ್ಕೆ ಕಾರಣವಾಗಿದೆ.

**ಧರ್ಮಕ್ಕೆ ಪೂರಕವಾದ ನಿಷೇಧಗಳು**

* ತೆಂಗಿನ ಕಾಯಿಯನ್ನು ಕಾಲಿನಿಂದ ಒದೆಯಬಾರದು.
* ಒಲೆ, ಒರಳು, ಬೀಸುವಕಲ್ಲು, ಹೊಸ್ತಿಲು- ಇವುಗಳನ್ನು ಕಾಲಿನಿಂದ ಒದೆಯಬಾರದು.
* ದೇವರ ಹೂವನ್ನು ಮೂಸಿ ನೋಡಬಾರದು.
* ಸೂತಕ, ಮುಟ್ಟು ಈ ಸಂದರ್ಭ ಸಮಯದಲ್ಲಿ ದೇವರನ್ನು ಮುಟ್ಟಬಾರದು.
* ದೇವರು ಇರುವ ದಿಕ್ಕಿಗೆ ಕಾಲು ಮಾಡಿ ಮಲಗಬಾರದು.

# ಅಧ್ಯಾಯ : ಎಂಟು

# ಆನೆಗೊಂದಿ ಪರಿಸರದ ತುಂಗಭದ್ರಾನದಿ ಹಾಗೂ ಜನಪದರ ಸಂಬಂಧಗಳು

# ಅಧ್ಯಾಯ ೮

# ಆನೆಗೊಂದಿ ಪರಿಸರದ ತುಂಗಭದ್ರಾನದಿ ಹಾಗೂ ಜನಪದರ ಸಂಬಂಧಗಳು

## ೮.೧. ತುಂಗಭದ್ರ ನದಿಯೊಂದಿಗಿನ ಜನಪದರ ಸಂಬಂಧಗಳು

ಆನೆಗೊಂದಿಯ ಪೂರ್ವ ಭಾಗದ ಮುಖಾಂತರ, ಬೆಟ್ಟ ಗುಡ್ಡಗಳ ಮಧ್ಯದಿಂದ ಅಂಕು ಡೊಂಕಾಗಿ ಹರಿಯುವ ನದಿಯೇ ತುಂಗಭದ್ರಾ ನದಿ. ಸಮುದ್ರ ಮಟ್ಟದಿಂದ ಸುಮಾರು ೧೭೧೦ ಫೂಟ್ ಎತ್ತರದಲ್ಲಿ ಈ ನದಿ ಇದೆ. ಶಿವಮೊಗ್ಗ ಜಿಲ್ಲೆಯಿಂದ ಹರಿದು ಬರುತ್ತ ಹೊಳೆ ಹೊನ್ನೂರಿನ ಹತ್ತಿರ ತುಂಗ ಮತ್ತು ಭದ್ರ ನದಿಗಳು ಸೇರುತ್ತವೆ. ಅಲ್ಲಿಂದ ಇದು ತುಂಗಭದ್ರ ನದಿಯಾಗಿ ಹರಿದು ಬರುತ್ತದೆ. ಕೃಷ್ಣಾ ನದಿಯ ಉಪನದಿಯಾದ ತುಂಗಭದ್ರೆಯು ಈ ನದಿಯ ದಕ್ಷಿಣ ಭಾಗದಲ್ಲಿ ಜಗತ್ಪ್ರಸಿದ್ಧ ಹಂಪೆ ಇದೆ. ಈ ನದಿಯು ಈ ಭಾಗದ ಏಕೈಕ ಪ್ರಧಾನ ನದಿಯಾಗಿದೆ. 'ಗಂಗಾ ಸ್ನಾನ ತುಂಗಾಪಾನ' ಎಂಬ ಮಾತು ಈ ಭಾಗದಲ್ಲಿ ಪ್ರಚಲಿತದಲ್ಲಿರುವುದನ್ನು ನೋಡಿದರೆ ತುಂಗಾನದಿ ನೀರಿನ ಸ್ವಾದದ ಮಹತ್ವ ಎಷ್ಟಿದೆ ಎಂಬುದು ಗೊತ್ತಾಗುತ್ತದೆ. ತುಂಗಾ ನದಿಯು ಈ ಭಾಗದ ಜನರಿಗೆ ಜೀವ ಜಲವಾಗಿದೆ. ಕುಡಿಯುವ ನೀರಿಗೆ, ಕೃಷಿಗೆ, ಕೈಗಾರಿಕೆಗಳಿಗೆ, ಅಂಬಿಗರಿಗೆ, ಮೀನುಗಾರರಿಗೆ, ಚಾಪೆ ಎಣೆಯುವವರಿಗೆ ಹೆಚ್ಚು ಉಪಯೋಗವಾಗಿದೆ. ಅಷ್ಟೇ ಅಲ್ಲದೆ ಜನರ ಧಾರ್ಮಿಕ ಭಾವನೆಯೊಂದಿಗೆ ಜೀವನಾವರ್ತನ ಆಚರಣೆಯೊಂದಿಗೆ ನದಿಯು ನಿಕಟ ಸಂಬಂಧವನ್ನು ಹೊಂದಿದೆ.

ಜನಪದರು ಸಾಕ್ಷಾತ್ ದೈವವನ್ನು ಕಂಡವರು, ಜನಪದರಿಗೆ ತಮ್ಮ ಸುತ್ತಮುತ್ತಲಿನ ಪರಿಸರವೇ ದೈವವಾಗಿ ಕಂಡು ಬಂದಿದೆ. ಉದಾ: ಸೂರ್ಯ, ಚಂದ್ರ, ವಾಯು, ಅಗ್ನಿ, ಜಲ ಮತ್ತು ಮರಗಿಡಗಳು ಜನಪದರಿಗೆ ಕಂಡುಬರುವ ಸಾಕ್ಷಾತ್ ದೈವಗಳು. ದಿನಬೆಳಗಾದರೆ ಸೂರ್ಯನಿಗೆ ನಮಸ್ಕರಿಸುವುದು, ತುಂಗಭದ್ರಾ ನದಿಗೆ ಕೈ ಮುಗಿಯುವುದು. ಅಡುಗೆ ಮಾಡಿದ ಅನ್ನವನ್ನು ಊಟ ಮಾಡುವ ಮೊದಲು ಒಂದು ಮುಟಿಗೆ ಮನೆ ಮೇಲೆ ಹಾಕುವುದು ಆನೆಗೊಂದಿ ಜನಪದರಲ್ಲಿ ಕಂಡುಬರುವ ದೈವಾರಾಧನೆಗಳಾಗಿವೆ. ಧಾರ್ಮಿಕ ಪರಂಪರೆಯಲ್ಲಿ ನಂಬಿಕೆಯನ್ನು ಹೊಂದಿರುವ ಆನೆಗೊಂದಿ ಜನಪದರು ಹೆಣ್ಣು ದೇವತೆಗಳಿಗೆ ಪ್ರಮುಖವಾದ ಸ್ಥಾನವನ್ನು ಕೊಟ್ಟಿದ್ದಾರೆ. ವಿಶಿಷ್ಟ ರೀತಿಯ ಆಚರಣೆಗಳನ್ನು ಆಚರಿಸುವ ಮೂಲಕ ತಮ್ಮ ಕಣ್ಣೆದುರಿಗೇ ಕಾಣುವ ಪ್ರಕೃತಿಯ ದೇವತೆಗಳಿಗೆ ಕೃತಜ್ಞತಾ ರೂಪದಲ್ಲಿ ಪೂಜೆಯನ್ನು ಮಾಡುವುದುಂಟು. ತುಂಗಭದ್ರೆ ಈ

ಭಾಗದ ಉಸಿರು, ಈ ಭಾಗದ ಸಾಕ್ಷಾತ್ ದೇವತೆ. ಹಾಗಾಗಿ ಜನಪದರು ತುಂಗಭದ್ರೆಯೊಂದಿಗೆ ಭಕ್ತಿಪೂರ್ವಕವಾದ, ಭಾವನಾತ್ಮಕವಾದ ಸಂಬಂಧಗಳನ್ನು ಹೊಂದಿದ್ದಾರೆ.

**ನದಿಗೆ ಬಾಸಿಂಗ ಬಿಡುವ ಪದ್ಧತಿ :** ಹೊಸದಾಗಿ ಮದುವೆಯಾದ ಆನೆಗೊಂದಿ ಪರಿಸರದ ಮದುಮಕ್ಕಳು ಸಾಮಾನ್ಯವಾಗಿ ತುಂಗಭದ್ರ ನದಿಗೆ ನೈವೇದ್ಯ ಅರ್ಪಿಸಿ, ಉಡಿತುಂಬಿ ಪೂಜೆ ಮಾಡಿ ತಾವು ಧರಿಸಿದ ಬಾಸಿಂಗವನ್ನು ನದಿಯಲ್ಲಿ ಬಿಡುವ ವಿಶಿಷ್ಟ ಆಚರಣೆ ಇಂದಿಗೂ ಕೂಡಾ ಕಂಡುಬರುತ್ತದೆ.

**ಹುಚ್ಚು ಹೊಳೆ :** ತುಂಗಭದ್ರಾ ನದಿ ತುಂಬಿ ಪ್ರವಾಹವಾಗಿ ಹುಚ್ಚುಹೊಳೆಯಾಗಿ ಹರಿಯುವ ಸಂದರ್ಭದಲ್ಲಿ ಹಿಂದೆ ರಾಣಿಕುಪ್ಪಮ್ಮನವರು ಸಂಸ್ಥಾನದ ರಾಜರುಗಳು, ಪ್ರಜೆಗಳು ತುಂಗಭದ್ರೆಗೆ ಕಂಕಣದಲ್ಲಿ ಜ್ಯೋತಿ ಇಟ್ಟು ಬೆಳಗಿ, ಎಡಿಕೊಟ್ಟು ಕಾಯಿಕರ್ಪೂರಗಳೊಂದಿಗೆ ವಿಶೇಷ ಪೂಜೆ ಸಲ್ಲಿಸಿ ಹುಚ್ಚುಹೊಳೆ ಹಿಂದಕ್ಕೆ ಸರಿಯುವಂತೆ ಪ್ರಾರ್ಥಿಸುತ್ತಿದ್ದರಂತೆ. ಆಶ್ಚರ್ಯವೆಂಬಂತೆ ಮರುದಿನದೊಳಗಾಗಿ ಹುಚ್ಚು ಹೊಳೆ ಪ್ರವಾಹ ಹಿಂದೆ ಸರಿದು ಶಾಂತವಾಗುತ್ತಿತ್ತಂತೆ. ಈ ವಿಶಿಷ್ಟ ಆಚರಣೆಯನ್ನು ಆನೆಗೊಂದಿ ಗ್ರಾಮಸ್ಥರು ಇಂದಿಗೂ ಚಾಚು ತಪ್ಪದೇ ಆಚರಿಸುತ್ತಿದ್ದಾರೆ.

**ಪುಣ್ಯಸ್ನಾನ :** ತುಂಗಭದ್ರಾ ನದಿಗೆ ಭಾಗೀರಥಿ ಬಂದಾಗ ಕೇವಲ ಆನೆಗೊಂದಿಯ ಜನಪದರು ಮಾತ್ರವಲ್ಲದೆ ಸುತ್ತಮುತ್ತಲಿನ ಬಹುತೇಕ ಜನಪದರು ಇಲ್ಲಿಗೆ ಬಂದು ಸ್ನಾನ ಮಾಡಿ, ಪೂಜೆ ಸಲ್ಲಿಸುವುದು, ಎಡೆ ಅರ್ಪಿಸುವುದು ಮುಂತಾದ ಆಚರಣೆಗಳನ್ನು ವಿಶಿಷ್ಟವಾಗಿ ಮಾಡುತ್ತಾರೆ. ಇದೇ ರೀತಿ ಸಂಕ್ರಾಂತಿ, ಭಾರತ ಹುಣ್ಣಿಮೆಯಲ್ಲೂ ಸಹ ಆನೆಗೊಂದಿಯ ಜನಪದರು ಪುಣ್ಯ ಸ್ನಾನ ಮಾಡುತ್ತಾರೆ. ಈ ಸಂದರ್ಭಗಳಲ್ಲಿ ಸ್ನಾನ ಮಾಡಿದರೆ ಪುಣ್ಯ ಪ್ರಾಪ್ತಿಯಾಗುತ್ತದೆ. ಬಂದ ಕಷ್ಟಗಳು ಕರಗಿ ನೀರಾಗುತ್ತವೆ, ಪಾಪ ಪರಿಹಾರವಾಗುತ್ತದೆ, ಮೈಗೆ ಅಂಟಿದ ರೋಗ ರುಜಿನಗಳು, ಬಂಜೆತನ, ವಾಸಿಯಾಗುತ್ತವೆ ಎಂಬಿತ್ಯಾದಿಯಾದ ಪವಿತ್ರವಾದ ನಂಬಿಕೆಯನ್ನು ಆನೆಗೊಂದಿ ಗ್ರಾಮಸ್ಥರು ಹೊಂದಿದ್ದಾರೆ.

**ಗಂಗಮ್ಮ ಆಚರಣೆ :** ಮೈನೆರೆದಾಗ, ಮಹಿಳೆಯ ಹೆರಿಗೆಯಾದಾಗ ಆನೆಗೊಂದಿಯ ಜನಪದರು ತುಂಗಭದ್ರಾ ನದಿ ದಡದ ಮೇಲೆ ಕುಳಿತು ಗಂಗಮ್ಮ ಆಚರಣೆಯನ್ನು ಮಾಡುತ್ತಾರೆ. ಉಸಿಕಿನಿಂದ (ಮರಳು) ಮೂರು ಕುಂಪಿ ಮಾಡಿ, ಹರಿಷಿಣ, ಕುಂಕುಮ ಹಚ್ಚಿ ಹೂ ಮುಡಿಸಿ, ಮಂಗಳಾರತಿ, ಕಾಯಿ ಕರ್ಪೂರ, ಎಡೆಕೊಡುವುದು ಮುಂತಾದ ಈ ಸಂದರ್ಭದ ಆಚರಣೆಗಳು ವಿಶಿಷ್ಟವಾದವುಗಳಾಗಿವೆ.

**ಮೈಲಿಗೆ ಆಚರಣೆ :** ತುಂಗಭದ್ರಾ ನದಿಯನ್ನು ಪುಟ್ಟಿಯಲ್ಲಿ ದಾಟಬೇಕೆಂದರೆ ಮೈಲಿಗೆಯಾದವರು ಇರಬಾರದು. ಒಂದು ವೇಳೆ ಸತ್ತ ಕಾರಣದಿಂದ ಮೈಲಿಗೆ ಹೊಂದಿದವರು ಮುಟ್ಟಾದವರು ಬಂದಿದ್ದರೆ. ಪುಟ್ಟಿಯಲ್ಲಿ ಕಾಲಿಡುವ ಮೊದಲು ನದಿ ನೀರನ್ನು ಚಿಮುಕಿಸಿ ಶುದ್ಧ ಮಾಡುತ್ತಾರೆ. ನದಿಯ ಬಗ್ಗೆ ದೈವಿಕ ಭಾವನೆ ಹೊಂದಿದ ಜನ ದೇವರನ್ನು ಅಪವಿತ್ರಗೊಳಿಸಬಾರದೆಂಬುದು ಈ ಆಚರಣೆಯ ಹಿಂದಿರುವ ಉದ್ದೇಶವಾಗಿದೆ.

**ನದಿ ನೀರಿನಿಂದ ಸೂತಕ ಕಳೆಯುವುದು :** ಆನೆಗೊಂದಿ ಪರಿಸರದಲ್ಲಿ ಸಾಮಾನ್ಯವಾಗಿ ಯಾರಾದರೂ ಸತ್ತಾಗ ತೀರಿಕೊಂಡ ದಿನದಿಂದ ಹದಿನಾರನೆಯ ದಿನದ ವರೆಗೆ ಮನೆಯನ್ನು ತೊಳೆಯುವ ಅಥವಾ ಮನೆಯನ್ನು ಶುದ್ಧಗೊಳಿಸುವ ಕಾರ್ಯಕ್ಕಾಗಿ ನದಿಯ ನೀರನ್ನು ಪೂಜೆ ಪುನಸ್ಕಾರದೊಂದಿಗೆ ತುಂಬಿದ ಕೊಡದಲ್ಲಿ ತರುವ ನೀರನ್ನು ಪೂಜೆ ಪುನಸ್ಕಾರದೊದಿಗ ತುಂಬಿದ ಕೊಡದಲ್ಲಿ ತರುವ ಸಂಪ್ರದಾಯವಿದೆ. ಆನೆಗೊಂದಿ ಪರಿಸರದಲ್ಲಿ ಹೆಣ್ಣುಮಕ್ಕಳು ಋತುಮತಿಯಾದರೆ ಆ ಮನೆಗೆ ಅಂಟಿರುವ ಸೂತಕ ಕಳೆಯುವುದಕ್ಕಾಗಿ ತುಂಗಭದ್ರಾ ನದಿಗೆ ಆ ಹುಡುಗಿಯನ್ನು ಕರೆತಂದು ತುಂಬಿದ ತಾಮ್ರದ ಕೊಡದ ಮೇಲೆ ಒಂದು ತೆಂಗಿನ ಕಾಯಿಯನ್ನು ಇಟ್ಟು ಕಳಸ ಮಾಡಿ, ಕೊಡಕ್ಕೆ ಹೊಸ ಸೀರೆ ಕಣ ತೊಡಿಸಿ, ಹರಿಷಿಣ, ಕುಂಕುಮ ಹಚ್ಚಿ ಹೂವಿನಿಂದ ಅಲಂಕರಿಸಿ ಕೊಡವನ್ನು ಹೊಸ ಸೀರೆ ಉಟ್ಟು ಋತುಮತಿಯಾದ ತರುಣಿಯು ಹೊತ್ತುಕೊಡುಬಂದು ಆ ಕೊಡವನ್ನು ದೇವರ ಜಗುಲಿಯ ಮೇಲೆ ಇರಿಸಿದಾಗ ಅಲ್ಲಿಗೆ ಆ ಮನೆಗೆ ಸೂತಕ ಕಳೆದಂತೆ ಎಂಬ ಭಾವನೆ ಆನೆಗೊಂದಿಯ ಜನಪದರಲ್ಲಿದೆ. ಕೃಷಿಕರು ತಾವು ಬೆಳೆದ ಬೆಳೆಯು ರಾಶಿಯಾದ ಮೇಲೆ ನೆಲ್ಲಾಗಿದ್ದರೆ ೫ ಬೊಗಸೆ ನೆಲ್ಲನ್ನು ತುಂಗಭದ್ರಾ ನದಿಗೆ ಹಾಕುವುದು, ಕಬ್ಬು, ಬಾಳೆ ಬೆಳೆದರೆ ಹೊಳೆ ದಡದಲ್ಲಿಟ್ಟು ಪೂಜಿಸುವುದು ರೂಢಿಯಲ್ಲಿದೆ. ತಾವು ಬೆಳೆದ ಬೆಳೆಯು ತಾಯಿ ತುಂಗೆಯಿಂದಲೇ ಎಂಬ ಕೃತಜ್ಞತಾ ಭಾವ ಈ ವಿಶಿಷ್ಟ ಆಚರಣೆಯಲ್ಲಿದೆಯೆಂಬುದು ಜನಪದರ ನಂಬಿಕೆಯಾಗಿದೆ.

ಮಗುವಿನ ಜವಳ ತೆಗೆದರೆ ಅದರ ತಲೆಕೂದಲನ್ನು ತಾಯಿ ಮಗುವಿನ ಜೊತೆಗೆ ಹೊಳೆಗೆ ಬಂದು ಕೂದಲನ್ನು ಬಿಡುತ್ತಾರೆ. ಯಾರಾದರೂ ಸತ್ತಾಗ ಚಿತೆಯ ಮುಖಾಂತರ ಸಂಸ್ಕಾರ ಮಾಡಿದವರು ಸತ್ತವರ ಅಸ್ತಿಯನ್ನು, ಬೂದಿಯನ್ನು ನದಿಯಲ್ಲಿ ಬಿಡುವರು. ಇದರಿಂದ ಸತ್ತವರು ಶುದ್ಧಿಯಾದರು. ಮುಂದೆ ಅವರು ಭೂತ, ಪ್ರೇತ, ದೆವ್ವಗಳಾಗಿ ಕಾಡುವುದಿಲ್ಲವೆಂಬುದು ಇಲ್ಲಿನ ಜನಪದರ ಭಾವನೆಯಾಗಿದೆ. ಹಂಪೆಯ ತುಂಗಾದಡದಲ್ಲಿ ಬಹುತೇಕ ಜನ ಸತ್ತವರಿಗಾಗಿ ಪಿಂಡಪ್ರಧಾನ, ಶ್ರಾದ್ಧಾ, ವೈಧಿಕ, ತಿಥಿ ಮೊದಲಾದ ಆಚರಣೆ ಮಾಡುತ್ತಾರೆ. ಈ ನದಿಯಲ್ಲಿ ಶ್ರಾದ್ಧಾ ಆಚರಣೆ ಮಾಡಿ ಅಸ್ಥಿಯನ್ನು ಬಿಟ್ಟರೆ ಸತ್ತವರ ಆತ್ಮಕ್ಕೆ ಶಾಂತಿ, ಮುಕ್ತಿ ಸಿಗುತ್ತದೆ. ಇಂತಹ ಆಚರಣೆಗೆ ತುಂಗಭದ್ರಾ ಹೊಳೆಯು ಶ್ರೇಷ್ಟವೆಂಬ ಭಾವನೆ ಇಲ್ಲಿಯ ಜನಪದರದ್ದು. ಭೂತ, ದೆವ್ವ ಬಡಿದುಕೊಂಡಾಗ ಅವರನ್ನು ನೇರವಾಗಿ ತುಂಗಭದ್ರಾ ನದಿಗೆ ಕರೆತಂದು ಅವರು ತೊಟ್ಟಿರುವ ಬಟ್ಟೆಯನ್ನು ಬಿಚ್ಚಿ ಬಿಸಾಕಿ, ನದಿಯ ನೀರಿನಲ್ಲಿ ಸ್ನಾನ ಮಾಡಿಸಿ, ಪುನಃ ಮನೆಗೆ ಸೇರಿಸಿಕೊಳ್ಳುವ ರೂಢಿ ಇದೆ. ಜ್ಞಾನ, ತಂತ್ರಜ್ಞಾನ ಮುಂದುವರೆದಂತೆ ಆಧುನಿಕ ಯುಗದಲ್ಲೂ ಈ ಭೂತ ಪ್ರೇತದ ಪರಿಕಲ್ಪನೆ ಕರ್ನಾಟಕದ ಬಹುಪಾಲು ಎಲ್ಲಾ ಗ್ರಾಮಗಳಲ್ಲಿ ಬೇರೂರಿರುವುದು ಇಂದಿಗೂ ಕೂಡಾ ಕಂಡು ಬರುವ ಖೇದಕರ ಸಂಗತಿಯಾಗಿದೆ. ಜನಪದ ದೈವಗಳನ್ನೇ ಪ್ರಧಾನವಾಗಿ ಆರಾಧಿಸುವ ಆನೆಗೊಂದಿಯ ಜನಪದರು ಹಂಪೆಯ ವಿರೂಪಾಕ್ಷನ ಜಾತ್ರೆಯ ಸಂದರ್ಭದಲ್ಲಿ ಅಂದು ವಿಶೇಷವಾಗಿ ಹಂಪಿ ನದಿಯಲ್ಲಿ ಸ್ನಾನ ಮಾಡಿ ತಮ್ಮದೇ ಹಬ್ಬ ಎಂಬಂತೆ ಸಂಭ್ರಮದಲ್ಲಿ ಹೊಸ ಬಟ್ಟೆ ಧರಿಸಿ ಕುಟುಂಬ ಸಮೇತರಾಗಿ ಹೊಳೆ ದಾಟಲು ಅಂಬಿಗನ ಪುಟ್ಟಿ ಹತ್ತುವಾಗ ಹೋಳಿಗೆಯ ಎಡೆಯನ್ನು ವಿಶೇಷವಾಗಿ ಹೊಳೆಗೆ (ಗಂಗಮ್ಮ) ಅರ್ಪಿಸುವುದುಂಟು.

ಆನೆಗೊಂದಿ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಹೆಣ್ಣು ದೇವತೆ(ಗ್ರಾಮದೇವತೆ)ಗಳನ್ನು ಪಲ್ಲಕ್ಕಿಗಳೊಂದಿಗೆ ಬಣ್ಣಕ್ಕೆ ಕಳಿಸಿದರೆ ಬಣ್ಣವಾದನಂತರ ಆ ದೇವರುಗಳನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಆನೆಗೊಂದಿ ಹೊಳೆಗೆ ಕರೆತಂದು ದೇವತೆಗಳನ್ನು, ಪಲ್ಲಕ್ಕಿಯನ್ನು ನೀರಿನಲ್ಲಿ ತೊಳೆದು ಶುದ್ಧ ಮಾಡುವ ಒಂದು ವಿಶಿಷ್ಟ ಆಚರಣೆ, ಈ ನದಿಯ ಬಗೆಗಿರುವ ಜನಪದರ ಪವಿತ್ರ ಭಾವನೆಯನ್ನು ವ್ಯಕ್ತಪಡಿಸುತ್ತದೆ. ತುಂಗಭದ್ರ ನದಿಯ ಸುತ್ತ ಏಳುಮಲೆ(ಬೆಟ್ಟ)ಗಳಿವೆ ಎಂಬ ನಂಬಿಕೆ ಇಲ್ಲಿನ ಜನಪದರಲ್ಲದೆ. ಅವುಗಳಲ್ಲಿ ದೋಣಿಮಲೆ, ಎರಮಲೆ, ಸಿಂಗಮಲೆ, ನೆಲ ಮಲೆಗಳು ಪ್ರಸಿದ್ಧವಾದವುಗಳು. ಆನೆಗೊಂದಿಯ ಮೂರು ದಿಕ್ಕಿಗೆ ಗುಡ್ಡ ಒಂದು ದಿಕ್ಕಿಗೆ ನದಿಯು ಹರಿದಿರುವುದರಿಂದ ನಿಸರ್ಗದತ್ತ ರಕ್ಷಣಾ ವ್ಯವಸ್ಥೆ ಆನೆಗೊಂದಿಗಿದೆ ಎಂಬುದು ಇಲ್ಲಿಯ ಸ್ಥಳೀಯರ ಅಭಿಪ್ರಾಯವಾಗಿದೆ.

ಆನೆಗೊಂದಿ ರಂಗನಾಥಸ್ವಾಮಿ ಜಾತ್ರೆಯ ಕೊನೆಯ ಕಾರ್ಯಕ್ರಮವಾಗಿ ಸಂಭ್ರಮದ ಓಕುಳಿಯಾಟವನ್ನು ಗ್ರಾಮದ ಸುತ್ತಲೂ ರಂಗನಾಥನನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡೇ ಆಡುತ್ತಾರೆ. ನಂತರ ಪಲ್ಲಕ್ಕಿ ಸಮೇತ ಬಂದು ಪಲ್ಲಕ್ಕಿಯನ್ನು ತೊಳೆದು ಜನರು ಸ್ನಾನ ಮಾಡಿ ಪೂಜೆ ಪುನಸ್ಕಾರ ಮಾಡಿ ಪ್ರಸಾದ ಸೇವಿಸಿ ವಾದ್ಯಗಳೊಂದಿಗೆ ಪುನಃ ರಂಗನಾಥಸ್ವಾಮಿ ದೇವಸ್ಥಾನಕ್ಕೆ ಮರಳುತ್ತಾರೆ. ನದಿಯೊಂದಿಗಿನ ಸಂಬಂಧದ ಒಂದು ವಿಶಿಷ್ಟ ಆಚರಣೆ ಇದಾಗಿದೆ. ಗರ್ಭಿಣಿ ಸ್ತ್ರೀ ಹೊಳೆ ದಾಟಬಾರದು. ದಾಟಿದರೆ ಆಕೆಗೆ ಹುಟ್ಟುವ ಮಗುವಿಗೆ ತೊಂದರೆ ಎಂಬ ನಂಬಿಕೆ ಇದೆ. ಹೊಳೆ ದಾಟುವಾಗ ನದಿಗೆ ಕೈಮುಗಿದು ನಾಣ್ಯ ಹಾಕುವ ರೂಢಿಯೂ ಇಲ್ಲಿನ ಜನಪದರಲ್ಲಿದೆ. ಈ ಕ್ಷೇತ್ರದಲ್ಲಿ ಮೂರು ಕೋಟಿ ತೀರ್ಥಗಳಿದ್ದು ಕಾಶಿಗಂಗೆಗೆ ಸಮಾನವೆನಿಸಿದ ನದಿ ಇದಾಗಿದೆ, ಹಾಗೂ ಈ ನದಿ ತೀರದಲ್ಲಿ ಋಷಿಗಳ ಪೂರ್ವಾಶ್ರಮಗಳು ವಿರಾಜಿಸುತ್ತವೆ. ಇಂದಿಗೂ ನಡುಗಡ್ಡೆ ನವವೃಂದಾವನದಿಂದ ತಾರಾಪರ್ವತ, ಕಡೆಗೆ ಅಮವಾಸ್ಯ, ಹುಣ್ಣಿಮೆಯ ದಿನಗಳಲ್ಲಿ ರಾತ್ರಿ ಜ್ಯೋತಿ ಹೋಗುವುದು ಕಾಣಿಸುತ್ತದೆಂದು ಜನಪದರು ಹೇಳುತ್ತಾರೆ. ಜ್ಯೋತಿಯು ಋಷಿಗಳ ಆತ್ಮ ಎಂಬುದು ಜನರ ನಂಬಿಕೆ. ಶಂಭುವಿನ ತಪೋಭೂಮಿಯೆಂತಲೂ ಕರೆಯುವರು. ೯ ಜನ ಯತಿಗಳು ವೃಂದಾವಸ್ಥರಾಗಿರುವ ನವ ವೃಂದಾವನ ನದಿಯ ನಡುಗಡ್ಡೆಯಲ್ಲಿದೆ. ನದಿಯ ಸುತ್ತ ಪವಿತ್ರ ಪಂಚ ಲಿಂಗಗಳಿದ್ದು ಹಂಪೆಯ ವಿರೂಪಾಕ್ಷನೆ. ಪಂಚಲಿಂಗಗಳಲ್ಲಿ ಮಧ್ಯದ ಲಿಂಗವಾಗಿದೆಯೆಂಬ ವಿಚಾರವು ನದಿಯ ಬಗ್ಗೆ ಪವಿತ್ರ ಭಾವನೆ ಮೂಡಲು ಕಾರಣವಾಗಿದೆ. ಪುಣ್ಯವಂತರ ಮನೆ ಮುಂದೆ ಮಳೆ ಬಂದರೆ ಪಾಪಿಯ ಮನೆ ಮುಂದೆ ನೀರು ಹರೀತು ಎಂಬುದು ಈ ಹೊಳೆಗೆ ಸಂಬಂಧಿಸಿದ ಪ್ರಚಲಿತ ಗಾದೆ ಮಾತಿದೆ. ತಾಯಿ ತುಂಗಭದ್ರೆಗೆ ಪೂಜೆ ಮಾಡಿದರೆ ಪುಣ್ಯ, ದ್ರೋಹ ಬಗೆದರೆ ಪಾಪ ಎಂಬ ಭಾವನೆ ಇದೆ. ಆಕೆಯಿಂದ ಒಂದೊತ್ತು ಊಟ ಕಾಣುತ್ತಿದ್ದೇವೆ. ಆನೆಗೊಂದಿಯ ಬಹುಪಾಲು ರೈತ ಕುಟುಂಬಗಳು ತುಂಗಭದ್ರ ನದಿಯೊಂದಿಗೆ ಬೆಸೆದುಕೊಂಡಿರುವ ಸಂಬಂಧಗಳು ಕೂಡಾ ಸಾಕಷ್ಟು ಉದಾಹಣೆಗಳಿಗೆ ಕಾರಣವಾಗಿವೆ. ಸೂರ್ಯನ ಹುಟ್ಟಿನೊಂದಿಗೆ ತುಂಗಭದ್ರೆಯ ನಂಟು ಎನ್ನುವ ಭಾವನೆ ಬಂಧುತ್ವ ಇಲ್ಲಿನ ಜನರದ್ದು. ಹುಟ್ಟು ಹಾಕುವ

ಅಂಬಿಗನಿಂದ ಹಿಡಿದು ಹೊಲಕ್ಕೆ ನೀರು ಹಾಯಿಸುವ ರೈತನವರೆಗೆ ಪ್ರತಿಯೊಬ್ಬರ ದುಡಿಮೆಗೆ ತುಂಗಭದ್ರ ಆಸರೆಯಾಗಿದ್ದಾಳೆ. ಆನೆಗೊಂದಿಯು ತುಂಗಭದ್ರ ದಡದ ಮೇಲಿರುವುದರಿಂದ ನದಿಯೊಂದಿಗಿನ ಅವರ ಸಂಬಂಧ ಅವಿನಾಭಾವದಿಂದ ಕೂಡಿದೆ. ತುಂಗಭದ್ರ ನದಿದಡದ ಮೇಲೆ ಹಂಪಿಕ್ಷೇತ್ರ, ಹುಲಿಗಿ ಕ್ಷೇತ್ರ, ಹೊಸೂರಮ್ಮ ಕ್ಷೇತ್ರ, ಮಂತ್ರಾಲಯ, ಪಂಚಮುಖಿ ಆಂಜನೇಯ (ಗಾಣದಾಳ ಹನುಮಪ್ಪ) ಮುಂತಾದ ಪವಿತ್ರ ಕ್ಷೇತ್ರಗಳು ಇರುವದರಿಂದ ಆನೆಗೊಂದಿ ಜನಪದರಿಗೆ ಈ ನದಿಯ ಬಗ್ಗೆ ವಿಶೇಷ ಭಯ, ಭಕ್ತಿ, ಪ್ರೀತಿ, ಅಭಿಮಾನ, ಈ ನದಿಯು ಒಂದು ಪುಣ್ಯನದಿ ಎಂಬ ಭಾವನೆ ಇದೆ.

**ಕೃಷಿ :** ತುಂಗಭದ್ರ ನದಿಯು ಆನೆಗೊಂದಿ ಪರಿಸರಕ್ಕಷ್ಟೆ ಅಲ್ಲದೆ ಕೊಪ್ಪಳ, ರಾಯಚೂರು ಜಿಲ್ಲೆಯ ರೈತರಿಗೆ ಜೀವನಾಡಿಯಾಗಿದೆ. ಕಾಲುವೆ ನೀರಾವರಿ, ನದಿ ನೀರಾವರಿ, ಪಂಪ್‌ಸೆಟ್ ನೀರಾವರಿ, ಏತ ನೀರಾವರಿ, ಕೆರೆ ನೀರಾವರಿ ಮುಂತಾದ ನೀರಾವರಿ ವಿಧಾನಗಳು ತುಂಗಭದ್ರಾ ನದಿಯ ಮೂಲದಿಂದಲೇ ಬಂದವುಗಳಾಗಿವೆ. ಇಲ್ಲಿ ಕೃಷಿಗೆ ತುಂಗಭದ್ರ ನದಿಗೆ ಮದಲಗಟ್ಟಿ ಹತ್ತಿರ ಕಟ್ಟಲಾದ ತಡೆ ಒಡ್ಡಿನಿಂದ ವಿಜಯನಗರ ಕಾಲುವೆಗಳಿಗೆ ನೀರು ಬರುತ್ತವೆ. ತುಂಗಭದ್ರ ಎಡದಂಡೆ ಕಾಲುವೆಯಿಂದಲೂ ನೀರು ಹರಿದು ಬರುತ್ತದೆ. ಈ ನೀರನ್ನು ಬಳಸಿಕೊಂಡು ಬಾಳೆ, ಕಬ್ಬು, ಶೇಂಗಾ, ನೆಲ್ಲು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಗಂಗಾವತಿ ತಾಲ್ಲೂಕು ಪ್ರದೇಶವು ಭತ್ತದ ಕಣಜ ಎಂದು ಕರೆಸಿಕೊಳ್ಳಲು ತುಂಗಭದ್ರ ನದಿ ನೀರು ಪ್ರಮುಖ ಕಾರಣವಾಗಿದೆ. ವರ್ಷಕ್ಕೆ ಎರಡು ಬೆಳೆ ಬೆಳೆಯುವ ರೈತ ವರ್ಷವಿಡೀ ಕೃಷಿ ಚಟುವಟಿಕೆಯಿಂದ ಕೂಡಿರುತ್ತಾನೆ. ಇಲ್ಲಿನ ರೈತರು ಭೂತಾಯಿಯನ್ನು ಭಯಭಕ್ತಿಯಿಂದ ಕಂಡಂತೆ ತಾಯಿ ತುಂಗೆಯನ್ನು ಯಾವತ್ತು ಮರೆಯುವುದಿಲ್ಲ. ಕೃಷಿಕ ಜೀವನದ ಆಚರಣೆಗಳನೇಕ ಇಂದಿಗೂ ಜಲ ಮೂಲದೊಂದಿಗೆ ಬೆರತುಕೊಂಡಿರುವುದು ಕೃತಜ್ಞತೆಯ ಸಂಕೇತವೆನ್ನಬಹುದಾಗಿದೆ.

**ಚಾಪೆ ಎಣೆಯುವುದು :** ತುಂಗಭದ್ರಾ ನದಿಯಲ್ಲಿ ದುಂಡು ಆಪು ಹೆಚ್ಚಾಗಿ ಸಿಗುವುದರಿಂದ ಆಪನ್ನು ಬಳಸಿ ಚಾಪೆ ಎಣೆಯುವ ಕಸುಬು ಈ ಭಾಗದಲ್ಲಿದೆ. ಆಪನ್ನು ಬಿಸಿಲಿಗೆ ಒಣಗಿಸಿ, ಸೀಳಿ, ಬಣ್ಣ ಹಚ್ಚಿ ಸುಂದರವಾಗಿ ಎಣೆಯುವ ಕಲೆ ಅದ್ಭುತವಾಗಿದೆ. ಇವುಗಳ ಬೆಲೆ ಬಡವರ ಕೈಗೆಟುಕವಷ್ಟು. ಆದರೆ ಜಾಗತೀಕರಣದ ದಾಳಿಯಿಂದಾಗಿ ಆಕರ್ಷಕ ಪ್ಲಾಸ್ಟಿಕ್ ಚಾಪೆಗಳು ಬಂದಮೇಲೆ ಆಪಿನಿಂದ ಮಾಡಿದ ಚಾಪೆಗಳ ಮಾರಾಟ ಕುಂದಿದೆ. ಹೇಗೂ ಪೈಪೋಟಿ ನಡೆಸಿ ಬದುಕುವ ಚಾಪೆ ಎಣೆಯುವ ಕರಕುಶಲ ಕರ್ಮಿಗಳು ತುಂಗಭದ್ರ ನದಿಯೊಂದಿಗೆ ಆರ್ಥಿಕ ಮೂಲ ಸಂಬಂಧವನ್ನು ಇಟ್ಟುಕೊಂಡಿದ್ದಾರೆ.

**ಅಂಬಿಗರು ಮತ್ತು ತುಂಗಭದ್ರಾ ನದಿ :** ಆನೆಗೊಂದಿಯಲ್ಲಿ ಅಂಬಿಗರು ಹರಿಗೋಲು (ಪುಟ್ಟಿ) ಹಾಕುವ ತುಂಗಭದ್ರಾ ನದಿಯ ಭಾಗಕ್ಕೆ 'ಅಂಬಿಗರ ಹೊಳೆ' ಎಂದು ಕರೆಯುತ್ತಾರೆ. ಇಲ್ಲಿ ಗಂಗಾಮತಸ್ಥರೇ ಹೆಚ್ಚಾಗಿ ಅಂಬಿಗ ವೃತ್ತಿಯನ್ನು ಮಾಡುತ್ತಿದ್ದಾರೆ. ಇತಿಹಾಸ ಕಾಲದಿಂದಲೂ ಇಲ್ಲಿ ಗಂಗಾಮತಸ್ಥರೇ ಹೆಚ್ಚಾಗಿ ಅಂಬಿಗ ವೃತ್ತಿಯನ್ನು ಮಾಡುತ್ತಿದ್ದಾರೆ. ಹೊಳೆಯ ಹತ್ತಿರದ್ದೆನ್ನಲಾದ ಒಂದು ಉಟ್ಟು ಹಿಡಿದ ಅಂಬಿಗರ ದಂಪತಿಗಳ

ಶಿಲ್ಪವನ್ನು ಈಗ ಹುಚ್ಚಪ್ಪಯ್ಯನ ಮಠದ ಹತ್ತಿರ ನೋಡಬಹುದಾಗಿದೆ. ಹೊಳೆಯ ಹತ್ತಿರದಲ್ಲಿ ಅಂಬಿಗರಿಗೆ ದಾನಕೊಟ್ಟ ಬಗ್ಗೆ ಹಾಗೂ ಇನ್ನಿತರ ಮಾಹಿತಿಯನ್ನೊಳಗೊಂಡ ಶಾಸನಗಳಿವೆ. ಇವುಗಳನ್ನು ನೋಡಿದಾಗ ತುಂಗಭದ್ರ ನದಿಯೊಂದಿಗೆ ಅಂಬಿಗರು ಶತ ಶತಮಾನಗಳ ಸಂಬಂಧವನ್ನು ಹೊಂದಿದ್ದಾರೆ ಎಂದು ಹೇಳಬಹುದಾಗಿದೆ. ಆನೆಗೊಂದಿ, ಗಂಗಾವತಿ, ಮಲ್ಲಾಪುರ, ಸಂಗಾಪುರ ಮುಂತಾದ ಭಾಗದ ಜನರು ಹಂಪಿ, ಹೊಸಪೇಟೆ, ಕಮಲಾಪುರ, ಹೊಲಗದ್ದೆ ಬಾಳೆತೋಟಗಳಿಗೆ ಹೋಗಬೇಕಾದರೆ ಅಂಬಿಗರ ಸಹಾಯದಿಂದ ಹೊಳೆಯನ್ನು ದಾಟಿ ಹೋಗಬೇಕಾಗುತ್ತದೆ. ಅದೆ ರೀತಿ ಹಂಪಿ, ಹೊಸಪೇಟೆ, ಕಮಲಾಪುರ ಪರಿಸರದ ಜನರು ಆನೆಗೊಂದಿ ಪರಿಸರಕ್ಕೆ ಬರಬೇಕಾದರೆ ಅಂಬಿಗರ ಪುಟ್ಟಿಯಲ್ಲಿ ಹೊಳೆಯನ್ನು ದಾಟಿ ಬರಬೇಕಾಗುತ್ತದೆ. ಗಂಗಾವತಿಯಿಂದ ಹೊಸಪೇಟೆಗೆ ಹೋಗುವವರಿಗೆ ಹೊಳೆಯನ್ನು ದಾಟಿ ಹೋದರೆ ಕೇವಲ ೩೦ ಕಿ.ಮೀ. ಆಗುತ್ತದೆ. ಕಂಪ್ಲಿ ಮುಖಾಂತರ ಹೋದರೆ ೪೫ ಕಿ.ಮೀ. ಆಗುತ್ತದೆ. ಆದ್ದರಿಂದ ಈ ಭಾಗದ ಜನರು ಹೊಳೆಯ ದಾರಿಯನ್ನೇ ಹೆಚ್ಚಾಗಿ ಅವಲಂಬಿಸಿಕೊಂಡಿದ್ದಾರೆ. ಈ ಕಾರಣದಿಂದ ಇಲ್ಲಿನ ಅಂಬಿಗರಿಗೆ ಹರಿಗೋಲು ಹಾಕುವುದು ನಿತ್ಯದ ಕಾಯಕವಾಗಿದೆ. ಅಂಬಿಗ ವೃತ್ತಿಯೇ ಅವರ ಬದುಕನ್ನು ಕೈಹಿಡಿದು ನಡೆಸುವ ಸಾಧನವಾಗಿದೆ. ಸುಮಾರು ಹತ್ತು ಹನ್ನೆರಡು ಅಡಿ ಅಗಲದ, ಬರಲಿನಿಂದ ಮಾಡಿದ, ತಾಡಪಾಲು ಹೊದಿಸಿ, ಡಾಂಬರು ಮೆತ್ತಿದ ದುಂಡನೆಯ ಪುಟ್ಟಿಯ (ಹರಿಗೋಲು) ಮುಖಾಂತರ ಜನರನ್ನು, ದ್ವಿಚಕ್ರವಾಹನಗಳನ್ನು, ಕಡಿಮೆ ಭಾರದ ಇನ್ನಿತರ ವಸ್ತುಗಳನ್ನು ಇವರು ನಿತ್ಯ ಹೊಳೆ ದಾಟಿಸುತ್ತಾರೆ. ಪುಟ್ಟಿಯು ಹೆಚ್ಚು ಭಾರವಿದ್ದಾಗ ಇಬ್ಬರು ಉಟ್ಟು ಹಾಕುವುದುಂಟು. ಹೊಳೆ ದಾಟಲು ಮನುಷ್ಯರಿಗೆ ಐದು ರೂಪಾಯಿ, ದ್ವಿಚಕ್ರವಾಹನಗಳಿಗೆ ಹತ್ತು ರೂಪಾಯಿ ತೆಗೆದುಕೊಳ್ಳುತ್ತಾರೆ. ಆನೆಗೊಂದಿ, ವೆಂಕಟಾಪುರದ ರೈತರು ಹೊಳೆ ದಾಟಿದಾಗಲೆಲ್ಲ ದುಡ್ಡು ಕೊಡುವುದಿಲ್ಲ. ಅದರ ಬದಲಾಗಿ ಬೆಳೆಗೊಮ್ಮೆ ಧವಸ ಧಾನ್ಯ ಕೊಡುವ ಪದ್ಧತಿಯೂ ಇದೆ. ತುಂಗಭದ್ರೆಯನ್ನು ಅಂಬಿಗರು ಅನ್ನಕೊಡುವ ಜಲದೇವತೆ ಎಂದು ಭಾವಿಸಿ ಭಯ ಭಕ್ತಿಯಿಂದ ಆಕೆಯನ್ನು ಪೂಜಿಸುತ್ತಾರೆ. ವರ್ಷಕ್ಕೊಮ್ಮೆ ಹೊಳೆ ಮಧ್ಯದಲ್ಲಿ ಗುಂಡಿನ ಮೇಲೆ ಇರುವ ಈಶ್ವರ, ಬಸವಣ್ಣ ದೇವರಿಗೆ ಸಿಹಿ ಅಡಿಗೆ ಮಾಡಿ ಎಡಿ ಕೊಟ್ಟು ಪೂಜೆ ಮಾಡಿ ಬರುತ್ತಾರೆ. ಇವರ ಬದುಕಿನ ಅನೇಕ ಆಚರಣೆಗಳು ತುಂಗಭದ್ರ ನದಿಯೊಂದಿಗೆ ನಿಕಟ ಸಂಬಂಧವನ್ನು ಪಡೆದಿವೆ.

ಆನೆಗೊಂದಿ ಪಂಚಾಯತಿಯ ಹರಾಜಿನಲ್ಲಿ ಯಾರು ಹೆಚ್ಚು ಬೆಲೆ ಕೊಡುತ್ತಾರೋ ಅವರಿಗೆ ಹರಿಗೋಲು ಹಾಕಲು ಅನುಮತಿ ಇದೆ. ಇದರಿಂದ ಅಂಬಿಗರಿಗೂ ಮತ್ತು ಆನೆಗೊಂದಿಯ ಪಂಚಾಯ್ತಿಗೂ ಹೆಚ್ಚಿನ ಆದಾಯ ಬರುತ್ತದೆಂದು ಇಲ್ಲಿನ ಜನರು ಹೇಳುತ್ತಾರೆ.

**ಮೀನುಗಾರರು :** ಅಂಬಿಗರು ಹೊಳೆಯ ಹತ್ತಿರದಲ್ಲಿ ಸಣ್ಣ ಪುಟ್ಟ ಪುಟ್ಟಿಯನ್ನು (ಹರಿಗೋಲು) ಬಳಸಿಕೊಂಡು ದುಂಡು ಬಲೆ, ಉದ್ದ ಬಲೆ ಬೀಸಿ ಮೀನು ಹಿಡಿಯುತ್ತಾರೆ. ಮೀನುಗಾರಿಕೆ ಇವರ ಜೀವನೋಪಾಯಕ್ಕೆ ಆಧಾರವಾಗಿದೆ. ಹೀಗಾಗಿ ಇವರೂ ಸಹ ತುಂಗಭದ್ರೆಯನ್ನು ಅನ್ನ ಕೊಡುವ ಜಲದೇವತೆ ಎಂದು ಭಾವಿಸಿ

ಭಯ ಭಕ್ತಿಯಿಂದ ಪೂಜಿಸುತ್ತಾರೆ. ಇಲ್ಲಿ ಸಿಕ್ಕ ವಿವಿಧ ಬಗೆಯ ಮೀನುಗಳನ್ನು ಆನೆಗೊಂದಿ, ಗಂಗಾವತಿ, ಕಮಲಾಪುರ, ಹೊಸಪೇಟೆ ಮುಂತಾದ ಸ್ಥಳಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಒಟ್ಟಾರೆಯಾಗಿ ತುಂಗಭದ್ರ ನದಿಯು ಹತ್ತು ಹಲವಾರು ಅವಶ್ಯಕತೆಗಳನ್ನು ಪೂರೈಸುವುದರೊಂದಿಗೆ ಆನೆಗೊಂದಿ ಪರಿಸರವಷ್ಟೆ ಅಲ್ಲದೆ ಗಂಗಾವತಿ ತಾಲೂಕಿನ ಜನಪದರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನೊಂದಿಗೆ ಅವಿನಾಭಾವ ಸಂಬಂಧ ಹೊಂದಿದ ಒಂದು ಪವಿತ್ರ ನದಿಯಾಗಿದೆ.

## ೮.೨. ನದಿಯ ಬಗೆಗಿನ ಜನಪದ ಸಾಹಿತ್ಯ ಮತ್ತು ಐತಿಹ್ಯಗಳು

ತುಂಗಭದ್ರಾ ನದಿಯು ಜನಪದರಲ್ಲಿ ಹಂಪಿ ಹೊಳೆಯಾಗಿ ಆನೆಗೊಂದಿ ಹೊಳೆಯಾಗಿ ಕಂಡುಬರುತ್ತದೆ. ತುಂಗಭದ್ರ ನದಿ ಎಂಬ ಪದದ ಬಳಕೆ ಕಡಿಮೆ. ಈ ನದಿಯು ಜಾನಪದ ತ್ರಿಪದಿಗಳಲ್ಲಿ ಜಾನಪದ ಗೀತೆಗಳಲ್ಲಿ, ಕೋಲಾಟದ ಪದಗಳಲ್ಲಿ ಐತಿಹ್ಯಗಳಲ್ಲಿ ಹಾಸು ಹೊಕ್ಕಾಗಿದೆ.

**ಕೋಲಾಟದ ಪದಗಳಲ್ಲಿ ತುಂಗಭದ್ರ ನದಿ**

**ಹೊನ್ನು ಆನೆಗೊಂದಿ**

ರೊಚ್ಚೆದ್ದು ಗಂಗಮ್ಮ ರಾಜ್ಯವನ್ನೊಕ್ಕಾಳೆ
ರೊಚ್ಚೆದ್ದು ಗಂಗಮ್ಮ ರಾಜ್ಯವನೊಕ್ಕಾಳೆ
ಮುತ್ತು ಆನೆಗೊಂದಿ ಮೊದಲಗಟ್ಟಿ ಕೋಲುಕೋಲೆನ್ನಕೋಲೇ
ಮುತ್ತು ಆನೆಗುಂದಿ ಮೊದಲಗಟ್ಟಿ ಕೋಲುಕೋಲೆನ್ನಕೋಲೇ
ಮುತ್ತು ಆನೆಗುಂದಿ ಮೊದಲಗಟ್ಟಿ
ಮುತ್ತು ಆನೆಗುಂದಿ ಮೊದಲಗಟ್ಯಾಳ
ಮುತ್ತು ಆನೆಗುಂದಿ ಮೊದಲಗಟ್ಯಾಳ
ಮುಟ್ಟ ನೀಳ ಕಲ್ಲ ಕೆಡವ್ಯಾಳಯ್ಯ ಕೋಲು....
ಮಟ್ಟ ನೀಳ ಕಲ್ಲ ಕೆಡವ್ಯಾಳಯ್ಯ ಕೋಲು
ಹೊನ್ನು ಆನೆಗುಂದಿ ಮೊದಲಗಟ್ಟಿ ಕೋಲು
ಹೊನ್ನು ಆನೆಗುಂದಿ ಮೊದಲಗಟ್ಟಿ ಕೋಲು
ಹೊನ್ನು ಆನೆಗುಂದಿ ಮೊದಲಗಟ್ಟೆಳ ಕೋಲು....
ಹೊನ್ನು ಆನೆಗುಂದಿ ಮೊದಲಗಟ್ಟೆಳ
ಮಟ್ಟನೈದ ಕಲ್ಲ ಕೆಡೆವಳಯ್ಯ ಕೋಲು....
ಮಟ್ಟನೈದ ಕಲ್ಲು ಕೆಡೆವಳಯ್ಯ ಕೋಲು
ನಿಂಬಿ ಹಣ್ಣಿನಂಗ ತುಂಬಿ ಬಂದಳ ಗಂಗ

ನಿಂಬಿ ಹಣ್ಣಿನಂಗ ತುಂಬಿ ಬಂದಳ ಗಂಗ

ಇಂಬು ಇಲ್ಲವೆಂದು ಮಲತಾಳೆ ಕೋಲು.......

ಇಂಬು ಇಲ್ಲವೆಂದು ಮಲತಾಳೆ ಕೋಲು

ಇಂಬು ಇಲ್ಲವೆಂದು ಮಲತಾಳೆ ಕೋಲು

ಅಂಗು ಆಳ ಸೋಸಿ ಹಾರುತ್ತಾಳೆ ಶ್ರೀರಾಮ ಕೋಲು

ಬಾಳೆ ಹಣ್ಣಿನಂಗ ಬಾಗಿಬಂದವಳ ಗಂಗ

ಬಾಳೆ ಹಣ್ಣಿನಂಗ ಬಾಗಿ ಬಂದವಳ ಗಂಗ ಕೋಲು

ಜಾಗ ಇಲ್ಲವೆಂದು ಮssssಲತಾಳೆ ಕೋಲು

ಜಾಗ ಇಲ್ಲವೆಂದು ಮssssಲತಾಳೆ ಶ್ರೀರಾಮ ಕೋಲು

ಜಾಗ ಇಲ್ಲವೆಂದು ಮssssಲತಾಳೆ ಶ್ರೀರಾಮ

ಬಾಗುವರಿ ಸೊಸಿ ಹಾರುತಾಳ ಕೋಲು......

ಒಣಕೀಯ ಸಂದ್ಯಾಗ ತಳ ಬಿದ್ದಳ ಗಂಗ

ಒಣಕೀಯ ಸಂದ್ಯಾಗ ತಳ ಬಿದ್ದಳ ಗಂಗ

ಅಣಕೀಯ ನೋಡ್ಯಾನ ವಿರುಪಯ್ಯ ಕೋಲು.....

ಅಣಕೀಯ ನೋಡ್ಯಾನ ವಿರುಪಯ್ಯ ಗಂಗಮ್ಮ

ಅಣಕೀಯ ನೋಡ್ಯಾನ ವಿರುಪಯ್ಯ ಗಂಗಮ್ಮ

ನಾಚಿಗೆಂಡು ಗಂಗಾ ಸರದಾಳೆ

ಹುಚ್ಚು ವಾಯದ ಗಾಲಿ ಹುಚ್ಚು ಹೋಗಲಿವಾಗ

ಹುಚ್ಚು ವಾಯದ ಗಾಲಿ ಹುಚ್ಚು ಹೋಗಲಿವಾಗ

ಅಕ್ಕನೆ ಹಂಪಮ್ಮ ಸೆರೆಗೊಡ್ಡಿ ಕೋಲು....

ಅಕ್ಕನೆ ಜಕ್ಕುವಾನ ಗಂಗ ಜಾರುತ್ಥಾಳೆ ಕೋಲು

ಅಕ್ಕನೆ ಜಕ್ಕುವಾನ ಗಂಗ ಜಾರುತಾಳೆ ಕೋಲು

ತೇರಿನ ಗಾಲಿ ತೇಲಿ ಹೋಗಲಿವಾಗ

ತೇರಿನ ಗಾಲಿ ತೇಲಿ ಹೋಗಲಿವಾಗ

ತಾಯೀನೆ ಹಂಪಮ್ಮ ಸೆರಗೊಡ್ಡಿ ಕೋಲು....

ತಾಯೀನೆ ಹಂಪಮ್ಮ ಸೆರಗೊಡ್ಡಿ ಕೋಲು

ತಾಯೀನೆ ಹಂಪಮ್ಮ ಬೇಡ್ಯಾಳೆ ಕೋಲು

ಜಲ್ಲುವಾನಾ ಗಂಗ ಜರದಾಳೆ ಕೋಲು....

ಜಲುವಾನಾ ಗಂಗ ಜರದಾಳೆ

ವಿಜಯನಗರ ಕಾಲದಲ್ಲಿ ಮದಲಗಟ್ಟಿ (ಆನೆಗೊಂದಿ ಹತ್ತಿರ) ಎಂಬ ಸ್ಥಳದಲ್ಲಿ ನೀರು ಸಂಗ್ರಹಕ್ಕಾಗಿ ಒಡ್ಡು ಕಟ್ಟಿ ಅಲ್ಲಿಂದ ಕಾಲುವೆಗಳ ಮುಖಾಂತರ ನೀರನ್ನು ಒಯ್ಯಲಾಗುತ್ತಿತ್ತು. ಈ ಸ್ಥಳದಲ್ಲಿ ಹೊಳೆ ತುಂಬಿ ಬಂದ ಸಂದರ್ಭವನ್ನು ಇಲ್ಲಿನ ಕೋಲಾಟದ ಹಾಡುಗಳಲ್ಲಿ ಕಾಣಬಹುದಾಗಿದೆ.

**ಐತಿಹ್ಯಗಳು**

**ಹನುಮನ ಸೆಳವು :** ಆನಗೂಂದಿಯನ್ನು ಪುರಾತನ ಕಿಷ್ಕಿಂದಯೆಂದು ಭಾವಿಸಲಾಗಿದೆ. ಆನೆಗೂಂದಿ ಪರಿಸರದಲ್ಲಿ ಬರುವ ತುಂಗಭದ್ರಾ ನದಿಯಲ್ಲಿ ಹನುಮನ ಸೆಳವು ಎಂದು ಕರೆಯುವ ಒಂದು ಮುಖ್ಯವಾದ ಸ್ಥಳಕ್ಕೆ ಆನೆಗೊಂದಿ ಜನಪದರು ಬಹಳ ಮಹತ್ವ ಕೊಡುತ್ತಾ ಬಂದಿದ್ದಾರೆ. ಅದುವೇ ಹನುಮನ ಸೆಳವು.

ಹನುಮಂತನ ತಾಯಿ ಅಂಜನಾದೇವಿ ಹನುಮಂತನಿಗೆ ಜನ್ಮ ನೀಡಿದಾಗ ಜನ್ಮ ನೀಡಿದ ವೇಳೆಯಲ್ಲಿ ದೇಹವನ್ನು ತೊಳೆಯಲು ಆಕೆಗೆ ನೀರು ಬೇಕಾಗಿತ್ತು. ಆದರೆ ಆಕೆಯ ಮನೆ ಬೆಟ್ಟದ ಮೇಲಿರುವುದರಿಂದ ಅಂಜನಾದೇವಿ ಚಿಂತಾಕ್ರಾಂತಳಾದಳು. ಆಗ ಬಾಲ ಹನುಮಂತನು ಬೆಟ್ಟವನ್ನು ಇಳಿದು ಹರಿಯುವ ಹೊಳೆಗೆ ಕೈಯನ್ನು ಅಡ್ಡಮಾಡಿ ಅಂಜನಾದ್ರಿ ಬೆಟ್ಟದಕಡೆಗೆ ನೀರು ಹರಿಯುವಂತೆ ಮಾಡಿದನು. ಅಂದಿನಿಂದ ಹಂಪಿ ಹೊಳೆಯು ಋಷ್ಯಮೂಕ ಪರ್ವತವನ್ನು ಬಳಸಿ ಎರಡು ಭಾಗವಾಗಿ ಹರಿಯಲು ಆರಂಭಿಸಿತು.ಮೊದಲು ವಿರೂಪಾಕ್ಷ ದೇವಸ್ಥಾನದ ಹಿಂಭಾಗದಲ್ಲಿ ಮಾತ್ರ ಹರಿಯುತ್ತಿದ್ದ ಹೊಳೆ ಈ ಘಟನೆಯ ನಂತರ ಋಷ್ಯಮೂಕ ಪರ್ವತಗಳ ಎಡಬಲದಲ್ಲಿ ಹರಿಯ ತೊಡಗಿತು. ಹೀಗೆ ಹಂಪಿ ಹೊಳೆಯು ಎರಡು ಭಾಗವಾಗಿ ಹರಿಯುವ ಸ್ಥಳಕ್ಕೆ "ಹನುಮನ ಸೆಳವು" ಎಂಬ ಹೆಸರು ಬಂದಿತು. ಇಂದಿಗೂ ಇಲ್ಲಿನ ಜನಪದರಲ್ಲಿ ಈ ಕೆಳಗಿನ ಹಾಡು ಪ್ರಚಲಿತದಲ್ಲಿದೆ.

**ಅಡವ್ಯಾಗಂಜನದೇವಿ ಹನುಮನ ಹಡೆದಾಳೆ**
**ತೊಡೆಯ ತೊಳೆಯಾಕೆ ನೀರಿಲ್ಲ : ಹನುಮಣ್ಣ**
**ಸುತ್ತಲ ಹೊಳೆಯ ತಿರಿವ್ಯಾನೆ**

ಈ ಹಾಡನ್ನು ಇಂದಿಗೂ ಆನೆಗೊಂದಿ ಪರಿಸರದ ಜನಪದರು ಆಗಾಗ ಸ್ಮರಿಸುವುದಂಟು.

**ವಾಲಿ ದಿಬ್ಬ :** ಆನೆಗೊಂದಿಯ ಉತ್ತರಕ್ಕಿರುವ ಚಿಂತಾಮಣಿಯು ತುಂಗಭದ್ರಾ ನದಿಯ ದಡದ ಮೇಲಿದೆ. ಚಿಂತಾಮಣಿಯ ದಡದ ಮೇಲೆ ನಿಂತ ಶ್ರೀರಾಮ ಆಚೆಯ ದಡದಲ್ಲಿ (ವೆಂಕಟಾಪುರದ ಹತ್ತಿರದ ದಡ) ನಿಂತಿರುವ ವಾಲಿಯೊಂದಿಗೆ ಯುದ್ಧವಾಡಿ, ಯುದ್ಧದಲ್ಲಿ ವಾಲಿಯನ್ನು ಕೊಂದನು. ಅವನ ಶವ ಸಂಸ್ಕಾರ ಅಲ್ಲಿಯೇ ಮಾಡಲಾಯಿತು. ಅದಕ್ಕೆ ವಾಲಿದಿಬ್ಬ ಎಂಬ ಹೆಸರು ಬಂತು. ಈಗಲೂ ಈ ಸ್ಥಳದಲ್ಲಿ ವಾಲಿಯನ್ನು ಸುಟ್ಟ ಕುರುಹಾಗಿ ಬೂದಿ, ಎಲುಬುಗಳು ಇಲ್ಲಿ ಸಿಗುತ್ತವೆ ಎಂಬ ನಂಬಿಕೆ ಇಲ್ಲಿಯ ಸ್ಥಳೀಯರಲ್ಲಿದೆ.

ತುಂಗಾನದಿಯ ನೀರು ಸಿಹಿಯಾಗಿದ್ದು ಇದಕ್ಕೆ ಇರುವೆ ಹತ್ತುತ್ತವೆ, ಭದ್ರಾನದಿ ನೀರು ಸಪ್ಪಗಿದ್ದು ಇದಕ್ಕೆ ಇರುವೆ ಹತ್ತುವುದಿಲ್ಲವೆಂಬ ನಂಬಿಕೆ ಜನಪದರದ್ದು. ಇನ್ನು ಕೆಲವರು ತುಂಗಾನೀರು ತುಂಬಾ

ತಿಳಿಯಾಗಿದ್ದು. ಇದರಲ್ಲಿ ನಾಣ್ಯ ಹಾಕಿದರೆ ಚೆನ್ನಾಗಿ ಕಾಣಿಸುತ್ತದೆ. ಭದ್ರ ನೀರು ದಪ್ಪಗೆ ಇದ್ದು ಇದರಲ್ಲಿ ನಾಣ್ಯ ಸ್ಪಷ್ಟವಾಗಿ ಕಾಣಿಸುವುದಿಲ್ಲವೆಂದು ಹೇಳುತ್ತಾರೆ. ಇವರ ಅಭಿಪ್ರಾಯದಲ್ಲಿ ತುಂಗಾ ನೀರಿಗೆ ಹೆಚ್ಚು ಮಹತ್ವ ಕಂಡುಬಂದಿದೆ. "ಗಂಗಾ ಸ್ನಾನ ತುಂಗಾಪಾನ" ಎಂಬ ಈ ಭಾಗದ ಪ್ರಚಲಿತದ ಮಾತು ಕೂಡಾ ತುಂಗಾನದಿಯ ಮಹತ್ವವನ್ನು ಪಾವಿತ್ರ್ಯವನ್ನು ಪ್ರತಿಬಿಂಬಿಸುತ್ತಿದೆ.

# ಅಧ್ಯಾಯ ೯

# ಉಪಸಂಹಾರ

ಸಮಾಜವು ನಿತ್ಯ ಪರಿವರ್ತನಾಶೀಲವಾದದ್ದು. ಅದು ದಿನದಿಂದ ದಿನಕ್ಕೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತದೆ. ಮುಂದೆ, ಅನೇಕ ಭಾಗ ವಿಭಾಗಗಳಾಗಿ ಅಧ್ಯಯನಕ್ಕೆ ಒಳಪಡುತ್ತದೆ. ಪ್ರಸ್ತುತ ಆನೆಗೊಂದಿ ಜಾನಪದ ಅಧ್ಯಯನವು ಆನೆಗೊಂದಿಯ ಒಡಲಿನಲ್ಲಿ ತುಂಬಿಕೊಂಡಿರುವ ಗ್ರಾಮ ಜೀವನ, ಗ್ರಾಮಸ್ಥರ ಬದುಕು ಬವಣೆ, ಆನೆಗೊಂದಿಯ ಪ್ರಾಚೀನ ಇತಿಹಾಸ, ಅನೇಕ ಪಳೆಯುಳಿಕೆಗಳು, ಅಲ್ಲಿಯ ಮೌಲ್ಯಯುತವಾದ ಸಂಸ್ಕೃತಿ, ಸಾಮ್ಯಗ್ರಾಮದ ಪರಿಕಲ್ಪನೆ, ಒಂದು ಗ್ರಾಮವು ಹೊರನೋಟಕ್ಕೆ ಸಹಜವಾಗಿ ಕಂಡರೂ ಅದು ತನ್ನ ಒಡಲೊಳಗೆ ಅಖಂಡವಾದ ಸಂಸ್ಕೃತಿಯ ಪರಿಮಿತಿಯನ್ನು ಒಳಗೊಂಡಿರುತ್ತದೆ. ಅಧ್ಯಯನದ ಮೂಲಕ ಕೈಗೊಂಡಾಗ ಮಾತ್ರ ಅದು ಹೊರ ಜಗತ್ತಿಗೆ ಕಾಣಲ್ಪಡುತ್ತದೆ. ತುಂಗಭದ್ರಾ ನದಿ ದಡದಲ್ಲಿ ನಿರ್ಮಾಣವಾದ ಆನೆಗೊಂದಿ ಗ್ರಾಮವು ಜಾನಪದ ಸಿರಿ ಸೊಗಡನ್ನು ಹೊಂದಿದ ಗ್ರಾಮವಾಗಿದೆ. ಈ ಗ್ರಾಮವು ಇತ್ತ ಮೂಲ ಸಂಸ್ಕೃತಿಯನ್ನು ಬಿಟ್ಟುಕೊಡದೆ, ಅತ್ತ ಆಧುನಿಕ ಸಂಸ್ಕೃತಿಯನ್ನು ತಿರಸ್ಕರಿಸದೆ ವಿವಿಧ ದೃಷ್ಟಿಕೋನಗಳಿಂದ ಅಭಿವೃದ್ಧಿ ಹೊಂದುತ್ತಿರುವ ಗ್ರಾಮವಾಗಿದೆ.

**ಫಲಿತಗಳು**

- ಈ ಅಧ್ಯಯನದಿಂದ ಕೆಳಕಂಡ ಅಂಶಗಳನ್ನು ತಿಳಿದುಕೊಳ್ಳಲು ಸಾಧ್ಯವಿರುತ್ತದೆ.
- ಜನಸಾಮಾನ್ಯರ ಚಾರಿತ್ರಿಕ, ಪೌರಾಣಿಕ ಪ್ರಜ್ಞೆಯನ್ನು ಅರ್ಥಮಾಡಿಕೊಳ್ಳಲು ಮಹತ್ವದ್ದಾಗಿದೆ.
- ಮೌಖಿಕ ಇತಿಹಾಸದ ರೀತಿ-ನೀತಿ, ಸ್ವಭಾವಗಳನ್ನು ತಿಳಿಯಲು ಸಾಧ್ಯವಾಗುತ್ತದೆ.
- ಲಿಖಿತ ಇತಿಹಾಸವನ್ನು ವಿಸ್ತರಿಸಲು ಪೂರಕವಾಗುತ್ತದೆ
- ಇತಿಹಾಸವನ್ನು ಕಥನ ಮಾಡುವ, ಪುರಾಣವಾಗಿಸುವ, ಐತಿಹ್ಯವಾಗಿಸುವ ಮನಸ್ಥಿತಿಯು ಗೊತ್ತಾಗುತ್ತದೆ.
- ಆನೆಗೊಂದಿ ಇತಿಹಾಸಕ್ಕೂ ಹಂಪೆಯ ಇತಿಹಾಸಕ್ಕೂ ಇರುವ ಗಾಢ ಸಂಬಂಧ ಕಂಡುಕೊಳ್ಳಬಹುದು.
- ಆನೆಗೊಂದಿಯಲ್ಲಿ ಇಡೀ ಗ್ರಾಮಸ್ಥರು ಆರಾಧಿಸುವ ದೈವಗಳಿರುವಂತೆ, ಸಮುದಾಯಕ್ಕೆ ಸಂಬಂಧಿಸಿದ ಪ್ರತ್ಯೇಕವಾದ ದೈವಗಳೂ ಇವೆ.
- ಅವಿಭಕ್ತ ಕುಟುಂಬ ಪದ್ಧತಿಯು ಇತ್ತೀಚೆಗೆ ವಿಭಕ್ತ ಕುಟುಂಬಗಳಾಗುತ್ತಿವೆ.
- ಆನೆಗೊಂದಿಯಲ್ಲಿ ತಮ್ಮದೇ ಆದ ನ್ಯಾಯ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ.

- ಇವರು ತಮ್ಮದೇ ಆದ ಜನಪದ ವೈದ್ಯ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ.
- ಇತ್ತೀಚೆಗೆ ಮಹಿಳೆಯರು ತಮ್ಮ ಸ್ಥಾನಮಾನವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.
- ಇತಿಹಾಸ ಕಾಲದಲ್ಲಿ ಇದ್ದ ದೇವದಾಸಿ ಪದ್ಧತಿ ಈಗ ಇಲ್ಲವಾಗಿದೆ.
- ಆನೆಗೊಂದಿಯ ಜಾತ್ರೆ, ಆನೆಗೊಂದಿ ಉತ್ಸವ, ದಸರಾ ಇವುಗಳು ಸಾಂಸ್ಕೃತಿಕ ಅನನ್ಯತೆಯಿಂದ ಕೂಡಿವೆ.
- ಅರಸೊತ್ತಿಗೆಯ ವ್ಯವಸ್ಥೆಯಲ್ಲಿ ಬಾಳಿದ ಆನೆಗೊಂದಿಯಲ್ಲಿ ಇಂದು ಅಧಿಕಾರ ವಿಕೇಂದ್ರೀಕರಣ ನೀತಿಯಿಂದಾಗಿ ಜನ ಸಾಮಾನ್ಯರ ಕೈಗೆ ಅಧಿಕಾರ ದೊರೆತಿದೆ.
- ಇಲ್ಲಿ ಕ್ರಿಯಾಶೀಲವಾದ ಸಂಘ-ಸಂಸ್ಥೆಗಳಿವೆ.
- ಆನೆಗೊಂದಿಯ ಜನಪದರು ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಆಧುನಿಕತೆಯ ಸ್ಥಿತ್ಯಂತರಗಳನ್ನು ಪಡೆದುಕೊಂಡಿದ್ದಾರೆ.
- ಇಲ್ಲಿ ಕಾವ್ಯಗಳು, ಕೋಲಾಟ, ಸೋಬಾನ, ಚೋಗಳ, ಸವಾಲ್ ಪದಗಳು, ತ್ರಿದಿಗಳನ್ನು ಹಾಡುವ ವಕ್ತೃಗಳು ಸಾಕಷ್ಟು ಜನರಿದ್ದಾರೆ.
- ಆನೆಗೊಂದಿ ಗ್ರಾಮದ ಮತ್ತು ಚರಿತ್ರೆಯ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ.
- ಆನೆಗೊಂದಿ ಗ್ರಾಮದ ಸಾಂಸ್ಕೃತಿಕ ಜೀವನದ ಬಹುಪಾಲು ಅಂಶಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಆನೆಗೊಂದಿ ಜಾನಪದ ಅಧ್ಯಯನವನ್ನು ಕುರಿತು ಅಧ್ಯಯನ ಮಾಡುವಾಗ ಕ್ಷೇತ್ರ ಕಾರ್ಯದಲ್ಲಿ ಕಂಡುಕೊಂಡ ಅಲ್ಲಿಯ ಕೂಡುಕೊಳ್ಳುವಿಕೆ, ಅಲ್ಲಿಯ ವಿಭಿನ್ನ ಸಂಸ್ಕೃತಿಯನ್ನು ಅಧ್ಯಯನದ ಪರಿಧಿಯಲ್ಲಿ ಅಧ್ಯಯನ ಕೈಗೊಳ್ಳಲು ಉತ್ಸುಕತೆಯಿಂದ ಅಲ್ಲಿ ಕಂಡುಕೊಂಡು ಪ್ರಮುಖ ಅಂಶಗಳನ್ನು ದಾಖಲೀಕರಿಸುವ ಕೆಲಸವನ್ನು ಮಾಡಲಾಗಿದೆ. ಯಾವುದೇ ಒಂದು ಅಧ್ಯಯನಕ್ಕೆ ನಿಖರತೆ ಬರಬೇಕಾದರೆ ಅದಕ್ಕೆ ನಿಗಧಿಪಡಿಸಲಾದ ಸೀಮಿತವಾದ ಪ್ರದೇಶ ಮುಖ್ಯವಾಗಿರುತ್ತದೆ. ಹೀಗಾಗಿ ಈ ಅಧ್ಯಯನವು ಆನೆಗೊಂದಿ ಜಾನಪದ ಎಂಬ ಶೀರ್ಷಿಕೆಯಲ್ಲಿ ಗುರುತಿಸಿಕೊಂಡು ಸಾಕಷ್ಟು ಮುಂಜಾಗ್ರತೆಯನ್ನು ವಹಿಸಿಕೊಂಡು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಒಂಬತ್ತು ಅಧ್ಯಾಯಗಳು ಒಳಗೊಂಡಿರುವ ಈ ನಿಬಂಧವು ಒಂದೊಂದು ಅಧ್ಯಾಯದಲ್ಲಿ ಅದರ ವ್ಯಾಪ್ತಿಗೆ ಸಂಬಂಧಿಸಿದ ವಿಷಯದ ಪದರುಗಳನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಮೊದಲಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವಗಳನ್ನು ಖಚಿತವಾಗಿ ಹೇಳುವುದರೊಂದಿಗೆ ೨ನೇ ಅಧ್ಯಾಯದಲ್ಲಿ ಮುನ್ನಡೆಯುವ ಅಧ್ಯಯನವು ಆನೆಗೊಂದಿಯ ಭೌಗೋಳಿಕ ವಿಸ್ತೀರ್ಣ, ಅಲ್ಲಿಯ ಜನಸಂಖ್ಯೆ, ಅಲ್ಲಿಯ ಶೈಕ್ಷಣಿಕ ಮಟ್ಟ, ಹವಾಮಾನ. ಗ್ರಾಮ ಜೀವನದ ಕೃಷಿ ಚಟುವಟಿಕೆ ಇತ್ಯಾದಿ ವಿಧಾನಗಳ ಬಗ್ಗೆ ನಿಖರತೆಯನ್ನು ಕಂಡುಕೊಳ್ಳುವುದರೊಂದಿಗೆ. ೩ನೇ ಅಧ್ಯಾಯದಲ್ಲಿ ಐತಿಹಾಸಿಕವಾಗಿ ಆನೆಗೊಂದಿಯನ್ನು ಗುರುತಿಸಿರುವ, ಪರಿಚಯವನ್ನು ಸವಿವರವಾಗಿ ನೀಡಲಾಗಿದೆ. ಅಲ್ಲಿಯ ಕೋಟೆ ಕೊತ್ತಲಗಳು, ಆನೆಗೊಂದಿ ಸಂಸ್ಥಾನದ ಐತಿಹ್ಯಗಳನ್ನೊಳಗೊಂಡ ಅಧ್ಯಯನವನ್ನು ಈ ಮೂಲಕ ಕಂಡುಕೊಳ್ಳಲಾಗಿದೆ. ಜನಪದ ಸಾಹಿತ್ಯವು ಮೂಲ

ಮತ್ತು ವಿಶಿಷ್ಟತೆಯನ್ನು ತೋರಿಸುವಲ್ಲಿ ಬಹಳ ಮಹತ್ವಪೂರ್ಣವಾಗಿದೆ. ೪ನೇ ಅಧ್ಯಾಯದಲ್ಲಿ ಇಲ್ಲಿಯ ಗ್ರಾಮಸ್ಥರು ಹಾಡುವ ಹಾಡುಗಳು, ಹನುಮಂತ ದೇವರ ಬಗ್ಗೆ, ವಿವಿಧ ದೇವರುಗಳ ಸ್ತುತಿಗಳ ಬಗ್ಗೆ, ಗ್ರಾಮ ಸಮುದಾಯದ ಕಷ್ಟ-ಸುಖಗಳ ಬಗ್ಗೆ, ತುಂಗಭದ್ರ ನದಿ ಇತ್ಯಾದಿಗಳ ಬೆಳಕನ್ನು ಚೆಲ್ಲುತ್ತಿವೆ. ಈ ಹಾಡುಗಳು ಜನಪದ ಸಾಹಿತ್ಯಕ್ಕೆ ನೀಡುವ ಅದ್ಭುತ ಕೊಡುಗೆಗಳಾಗಿವೆ. ಅಲ್ಲದೆ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಕೆಲವು ಹಾಡುಗಳನ್ನು, ಅವುಗಳ ಭಾವಾರ್ಥವನ್ನು ವಿವರಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಜನಪದರ ಜೀವನ ಪದ್ಧತಿ ಅಲ್ಲಿಯ ಜನರ ಬದುಕಿನ ರೀತಿ ನೀತಿಗಳು, ಆಚಾರ-ವಿಚಾರಗಳು, ರೂಢಿ ಸಂಪ್ರದಾಯಗಳು, ಅಲ್ಲಿರುವ ಮಹಿಳೆಯರ ಸ್ಥಾನಮಾನಗಳು, ಕುಟುಂಬದ ವ್ಯವಸ್ಥೆ, ನೈತಿಕ ನಿಯಮಗಳನ್ನೊಳಗೊಂಡ ಒಟ್ಟು ಆನೆಗೊಂದಿ ಗ್ರಾಮೀಣ ಪ್ರದೇಶದ ಬದುಕು ವಿಕಾಸಗೊಳ್ಳುವಿಕೆಯನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಆರನೆಯ ಅಧ್ಯಾಯದಲ್ಲಿ ಆನೆಗೊಂದಿ ಗ್ರಾಮದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಜೀವನಾವರ್ತನದ ಆಚರಣೆಗಳಾದ ಹುಟ್ಟು, ನಾಮಕರಣ, ಸೀಮಂತ, ಮದುವೆ ಮಾನವನ ಕೊನೆಯ ಸ್ಥಿತಿಯಾದ ಸಾವು, ಅಲ್ಲದೆ ಆನೆಗೊಂದಿ ಗ್ರಾಮದ ವಾರ್ಷಿಕಾವರ್ತನದ ಆಚರಣೆಗಳಾದ ಹಬ್ಬ-ಹರಿದಿನಗಳನ್ನು, ಜಾತ್ರೆ-ಉತ್ಸವಗಳನ್ನು ಗ್ರಾಮ ಮಟ್ಟದಲ್ಲಿ ಆಚರಿಸುವ ಇಂತಹ ವಿಶಿಷ್ಟ ಬಗೆಯ ಹಬ್ಬಗಳನ್ನು ಮತ್ತು ಕ್ಷೇತ್ರಕಾರ್ಯದಲ್ಲಿ ಕೈಗೊಂಡ ವಿವಿಧ ರೀತಿಯ ದಾಖಲೆಗಳನ್ನು, ಮಾಹಿತಿಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಸೇರಿಸಿಕೊಳ್ಳುವುದರ ಮೂಲಕ ಜನರಲ್ಲಿ ಬೇರೂರಿರುವ ಭಕ್ತಿಯನ್ನು, ಆಚರಣೆಗಳನ್ನು, ಅವರ ಕಟ್ಟುಪಾಡುಗಳನ್ನು ಈ ಅಧ್ಯಯನದ ಮೂಲಕ ಚರ್ಚಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ದೈವಗಳ ಮಹತ್ವ, ದೈವಗಳ ಬಗೆಗಿರುವ ಐತಿಹ್ಯ, ದೈವಗಳ ಹುಟ್ಟು ಬೆಳವಣಿಗೆ ಆನೆಗೊಂದಿ ಗ್ರಾಮಸ್ಥರು ಹಚ್ಚಿಕೊಂಡ ದೈವಗಳು ಅಥವಾ ನಂಬಿರುವ ದೈವಗಳ ಮೇಲೆ ಅಪಾರ ಭಯ ಭಕ್ತಿಯಿಂದ ನಡೆದುಕೊಳ್ಳುವ, ಅದರ ಮೂಲಕ ಮಾನಸಿಕ ಶಾಂತಿ, ನೆಮ್ಮದಿಯ, ತೃಪ್ತಿಯ ಜೀವನ ಅನುಭವಿಸಿರುವ ವಿವಿಧ ಮಜಲುಗಳನ್ನು ಈ ಅಧ್ಯಯನದ ಮೂಲಕ ಗುರ್ತಿಸಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಆನೆಗೊಂದಿ ಗ್ರಾಮಸ್ಥರು ತುಂಗಭದ್ರ ನದಿಯೊಂದಿಗಿರುವ ಅವರ ಭಾವನಾತ್ಮಕ ನಂಟನ್ನು, ತುಂಗಭದ್ರ ನದಿಯೊಂದಿಗಿರುವ ಅವರ ನಂಬಿಕೆಗಳನ್ನು, ನದಿಯ ಜೊತೆಗಿರುವ ಅವರ ಆಚರಣೆಗಳನ್ನು, ನದಿ ನೀರಾವರಿಯಿಂದ ಕಂಡುಕೊಂಡ ಭೂಮಿಯ ಫಲವತ್ತತೆಯನ್ನು, ಆನೆಗೊಂದಿಯ ಪ್ರಮುಖ ಬೆಳೆಗಳಾದ ಭತ್ತ, ಬಾಳೆ, ಶೇಂಗಾ, ಕಬ್ಬು ಇತ್ಯಾದಿ ಪ್ರಮುಖ ಬೆಳೆಗಳನ್ನು ಹೊಂದಿರುವ ಆನೆಗೊಂದಿ ಗ್ರಾಮಸ್ಥರು, ಹೆಚ್ಚಾಗಿ ರೈತ ಕುಟುಂಬವನ್ನು ಹೊಂದಿರುವ ಕೃಷಿ ಪ್ರಧಾನವಾದ ಗ್ರಾಮವಾಗಿರುವುದನ್ನು, ಪುಟ್ಟಿ(ಹರಿಗೋಲು)ಯೊಂದಿಗೆ ಅಂಬಿಗನು ಕಂಡುಕೊಂಡ ಜೀವನವನ್ನು, ಮೀನುಗಾರಿಕೆ, ಚಾಪೆ ತಯಾರಿಕೆ ಇತ್ಯಾದಿ ಕುಲಕಸುಬುಗಳನ್ನು ದಿನದಿಂದ ದಿನಕ್ಕೆ ಕೈಗಾರಿಕೀಕರಣ ಹೆಚ್ಚುತ್ತಿದ್ದರೂ ಕೂಡಾ ಮೂಲ ವೃತ್ತಿಯನ್ನು ಬಿಡದೆ ಅದರಲ್ಲೇ ಅಭಿವೃದ್ಧಿ ಕಂಡುಕೊಂಡ ಆನೆಗೊಂದಿ ಗ್ರಾಮಸ್ಥರ ಜೀವನ ವಿಧಾನವನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಕೊನೆಯದಾಗಿ ಪ್ರಸ್ತುತ ಅಧ್ಯಯನವು ಆಸಕ್ತ ಅಧ್ಯಯನಕಾರರಿಗೆ, ಇತಿಹಾಸಕಾರರಿಗೆ, ಗ್ರಾಮಗಳ ಅಧ್ಯಯನಕಾರರಿಗೆ, ಸರ್ಕಾರ ಮತ್ತು ಸಮಾಜ ಯೋಜಕರಿಗೆ ಸಹಾಯವಾಗುವುದರಲ್ಲಿ ಅನುಮಾನವಿಲ್ಲ. ನನ್ನ ಗಮನಕ್ಕೆ ಬಂದ ಈ ಅಧ್ಯಯನ ಶೀರ್ಷಿಕೆಯಲ್ಲಿ ಎಲ್ಲ ಮಾಹಿತಿಗಳನ್ನೂ, ಅಂಶಗಳನ್ನು ಅಧ್ಯಯನದ ಮೂಲಕ ಅಮೂಲಾಗ್ರವಾಗಿ ಚರ್ಚಿಸಲಾಗಿದೆ.

# ಅನುಬಂಧ

೧. ಸಾಂಸ್ಕೃತಿಕ ಪದಕೋಶ

೨. ಗ್ರಂಥಋಣ

೩. ವಕ್ತೃ ವಿವರ

೪. ಆನೆಗೊಂದಿಗೆ ಸಂಬಂಧಿಸಿದ ಮಾಹಿತಿಗಳು

೫. ಆನೆಗೊಂದಿ ಸಂಸ್ಥಾನದ ರಾಜರುಗಳ ವಂಶಾವಳಿ ನಕಾಶೆ

೬. ಛಾಯಾಚಿತ್ರಗಳು

## ೧. ಸಾಂಸ್ಕೃತಿಕ ಪದಕೋಶ

| | | |
|---|---|---|
| ಅಗಸಿ | - | ಕೋಟೆಯ ಪ್ರವೇಶದ್ವಾರಗಳು |
| ಬಲ್ಲೀಸು | - | ಬಿದಿರು |
| ತಪೇಲಿ | - | ದೊಡ್ಡ ಪಾತ್ರೆ |
| ಮೂಟೆ | - | ಗಂಟು, ಗೋಣಿಚೀಲದಲ್ಲಿ ಕಟ್ಟಿದ ವಸ್ತು |
| ಮೋಜಿನಾಟ | - | ಸಂತೋಷದ ಆಟ |
| ಹೂತಿಡು | - | ತಗ್ಗು ತೋಡಿ ಮಣ್ಣಲ್ಲಿ ಮುಚ್ಚು |
| ಎಡೆ | - | ನೈವೇದ್ಯ |
| ನುಣ್ಣಗೆ | - | ಸಣ್ಣಗೆ, ಜಾರು |
| ಉಂಡೆ | - | ದುಂಡಗೆ |
| ಎರಚು | - | ಬಿಸಾಡು, ಮೈಮೇಲೆ ಸುರಿ |
| ಸಮೇತ | - | ಸಹಿತ |
| ಬಾಸಿಂಗ | - | ಮದುಮಗನ/ಳ ಹಣೆಗೆ ಕಟ್ಟುವ ಮುತ್ತಿನಸರ |
| ಚರಿಗಿ | - | ತಂಬಿಗೆ |
| ಗಂಗಾಳ | - | ತಟ್ಟೆ, ತಾಟು |
| ಲ್ಯಾಟ | - | ಲೋಟ |
| ನೆಲುವು | - | ಆಹಾರ ಪದಾರ್ಥ ಕಾಪಾಡಲು ಇರುವ ಸಾಧನ |
| ರಿದ್ದಿ | - | ಸೂತಕ |
| ಬೆಳಗಿನ ಜಾವ | - | ಮುಂಜಾವಿನ ವೇಳೆ |
| ಹೂಣು | - | ತಗ್ಗಿನಲ್ಲಿ ಮುಚ್ಚಿ ಮಣ್ಣು ಹಾಕುವುದು |
| ಮುಡುದಾಸ | - | ಮುಟ್ಟಿನ ದೋಷ |
| ಕೊಡ್ಲಿ | - | ಕಬ್ಬಿಣದ ಕೊಡಲಿ |
| ಒಸಗೆ | - | ಮೈನೆರದಾಗ ಹುಡುಗಿಗೆ ಕೊಡುವ ವಸ್ತ್ರ, ಫಳಾರ |
| ಫಳಾರ | - | ತಿಂಡಿ ತಿನಿಸು |
| ಬಿದಿರಡಬೆ | - | ಬಿದಿರಿನ ಕಟ್ಟು |
| ವಲಿಮಾರಿ | - | ಸೀಮೆ, ಮೇರೆ |
| ಇಳೇವು | - | ನಿಶ್ಚಿತಾರ್ಥ |
| ಬೆಡಗು | - | ಗೋತ್ರ |

| | | |
|---|---|---|
| ಪೇಟ | - | ಮದುಮಕ್ಕಳಿಗೆ ತೊಡಿಸುವ ಟೋಪಿ |
| ಉಡದಿ | - | ಕಬಡ್ಡಿ ಆಟ |
| ಪೈರು | - | ಬೆಳೆ |
| ಅಂಬಲಿ | - | ಜೋಳದ ನುಚ್ಚಿನ ಅನ್ನ |
| ಬೆಳಸು | - | ಎಳೆಯ ಕಾಳಿನ ತೆನೆ |
| ಸ್ಯಾಸೆ | - | ಅಕ್ಷತೆ |
| ಅಂಗಾತ | - | ಮುಖ ಮೇಲೆ ಮಾಡಿ ಮಲಗಿದ ಸ್ಥಿತಿ |
| ಹೊಳ್ಳೆ | - | ಮೂಗಿನ ರಂದ್ರ |
| ಕುಳ್ಳು | - | ಕರುಳು, ಒಣಗಿದ ಅಗಲ ಆಕಾರದ ಸೆಗಣಿ |
| ಗುಟಿಗಿ | - | ಸತ್ತವರನ್ನು ಕೂಡಿಸಿ ಎದುರು ಬದುರು ಬಿದಿರಿನಿಂದ ಕಟ್ಟಿದ ಸ್ಥಿತಿ |
| ಸರಗ | - | ಊರ ಸೀಮೆ ಸುತ್ತಲೂ ಚೆಲ್ಲುವ ಅನ್ನ |
| ಪಟಿಂಗ | - | ಪೋಲಿ, ಉಡಾಳ |
| ಓಕುಳಿ | - | ಬಣ್ಣದಾಟ |
| ನೆತಿ | - | ತಲೆ ಮೇಲಿನ ಮಧ್ಯದ ಭಾಗ |
| ಗವಿ | - | ಗುಹೆ |
| ಪಾದಗಟ್ಟಿ | - | ಪಾದದ ಕೆತ್ತನೆ ಇರುವ ಕಟ್ಟೆ |
| ಉಟ್ಟು | - | ಹರಿಗೋಲು ಸಾಗಿಸಲು ಬಳಸುವ ಬಿದಿರಿನ ಸಾಧನ |
| ಪರಂಗಿ | - | ವಿದೇಶಿಗರು |
| ಇನಾಮು | - | ಬಹುಮಾನ, ಸಂಭಾವನೆಯ ರೂಪ |
| ಜೀರ್ | - | ಹೂಗಾರರು |
| ಬೆಂಡುಬತಾಸ್ | - | ಸಕ್ಕರೆಯಿಂದ ಮಾಡಿದ ಗಟ್ಟಿ ಸಿಹಿ ಜಾತ್ರೆಯಲ್ಲಿ ಸಿಗುವ ಸಿಹಿ ತಿಂಡಿ |
| ಡಾಣೆ | - | ಖಾರ |
| ಬೂಂದೇವು | - | ಸಿಹಿ ಬೂಂದಿ |
| ತುಪಾಕಿ | - | ಬಂದೂಕು |
| ಧ್ವಜಪಟ | - | ದೇವರ ಕೆಸರೀ ಧ್ವಜ |
| ಚರಗ | - | ಸರಗ |
| ಬಂಡಿಗಾಲಿ | - | ಚಕ್ಕಡಿ ಗಾಲಿ, ಚಕ್ರ |
| ಕಾಡಾಟ | - | ಕಷ್ಟಗಳ ಮೇಲೆ ಕಷ್ಟ ಬರುವುದು |
| ಸೆಳವು | - | ನೀರಿನ ಹರಿವು |
| ಕೋಡಗ | - | ಕೋತಿ |
| ಮಲೆತು | - | ಒಂದು ಕಡೆ ನಿಲ್ಲು |
| ದುಗ್ಗಾ | - | ದುರ್ಗೆ |
| ನೀವಾಳಿಸು | - | ಮುಖದ ಮೇಲೆ ದೃಷ್ಟಿ ತೆಗೆಯುವುದು |
| ಅಸ್ಥಿ | - | ಎಲುಬು |

## ೨. ಗ್ರಂಥಋಣ

೧. ಅಲ್ಲಮಪ್ರಭು ಬೆಟ್ಟದೂರು, ಕೊಪ್ಪಳ ಜಿಲ್ಲಾ ದರ್ಶನ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೨. ಇರ್ನಿರಾಯ ಕೆ.ವಿ., ತುಂಗಭದ್ರ ಪ್ರದೇಶ ಕಲೆಯ ಕಣಜ, ತುಂಗಾತರಂಗ, ಸಂ. ಜಯತೀರ್ಥ ರಾಜಪುರೋಹಿತ, ಕಲಬುರ್ಗಿ, ತುಂಗಾ ಯೋಜನೆಯ ಆಡಳಿತಾಧಿಕಾರಿಗಳು, ೧೯೬೮

೩. ಕೃಷ್ಣಕುಮಾರ ಸಿ.ಪಿ., ಜಾನಪದ ಸಾಹಿತ್ಯ ಪ್ರವೇಶಿಕೆ, ಪ್ರಕಾಶನ ಭಾರತಿ, ಸರಸ್ವತಿಪುರಂ, ಮೈಸೂರು, ೧೯೮೯

೪. ಕೃಷ್ಣಮೂರ್ತಿ ಚೇಕೂರು, ಹಂಪಿಯ ಇತಿಹಾಸದ ಕತೆಗಳು, ಬಳ್ಳಾರಿ ೨೪ನೆಯ ಅಖಿಲ ಕರ್ನಾಟಕ ಮಕ್ಕಳ ಸಮ್ಮೇಳನ, ೧೯೭೨

೫. ಕೊಟ್ರಯ್ಯ ಟಿ.ಎಂ., ಹಂಪಿ ಶಿಲಾಯುಗ ಸಂಸ್ಕೃತಿ, ಕ್ರಿಸ್ತ ಶತಾಬ್ದಿ ಆರಂಭ ಶಾಸನಗಳಲ್ಲಿ, ಪ್ರ. ಶರಣ ಸುವಾಸಿನಿ ಬಳಗ, ಹೊಸೇಟೆ, ೧೯೯೭

೬. ಗದ್ದಗಿಮಠ ಬಿ.ಎಸ್., ಗದ್ದಗಿಮಠದ ಬರಹಗಳು, ೧೯೯೮

೭. ಚನ್ನಣ್ಣ ವಾಲೀಕಾರ, ಒಂದು ಗ್ರಾಮದ ಜಾನಪದೀಯ ಅಧ್ಯಯನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೧

೮. ಚನ್ನಕ್ಕ ಎಲಿಗಾರ, ಪ್ರಾಚೀನ ಕರ್ನಾಟಕದ ರಾಣಿಯರು, ಧಾರವಾಡ, ಗೌರೀಶ್ ಮುದ್ರಣಾಲಯ

೯. ಚಲುವರಾಜು, ಹಂಪಿ ಮೌಖಿಕ ಚರಿತ್ರೆ, ಹಂಪಿ ಅಂದು-ಇಂದು

೧೦. ಚಿದಾನಂದಮೂರ್ತಿ ಎಂ., ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ, ಸಾಹಿತಿಗಳ ಕಲಾವಿದರ ಬಳಗ, ಬೆಂಗಳೂರು, ೧೯೮೭

೧೧. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೨. ದೇಸಾಯಿ ಪಿ.ಬಿ., ೧೯೩೬, ವಿಜಯನಗರ ಸಾಮ್ರಾಜ್ಯ, ಧಾರವಾಡ, ವಿಜಯನಗರ ಸಾಮ್ರಾಜ್ಯ ಸ್ನಾತಕೋತ್ತರ ಮಂಡಳಿ

೧೩. ನಾಗಲೋಟಿಮಠ ಸ.ಜ., ಉತ್ತರ ಕರ್ನಾಟಕದಲ್ಲಿ ಪ್ರಾಣಿಬಲಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೪. ನಂಜುಂಡಸ್ವಾಮಿ ವಿ.ಎಸ್., ೧೯೭೨, ವಿಜಯನಗರ ಇತಿಹಾಸ, ಧಾರವಾಡ, ಸಮಾಜ ಪುಸ್ತಕಾಲಯ, ೧೯೭೨

೧೫. ಪರಮೇಶ್ವರಪ್ಪ ಟಿ., **ಹಂಪಿ ಪರಂಪರೆ**, ವಿದ್ಯಾ ವಿಜಯನಗರ ಹೆರಿಟೇಜ್ ಟ್ರಸ್ಟ್, ಆನೆಗೊಂದಿ, ಹೊಸಪೇಟೆ, ೧೯೯೬

೧೬. ಪುರುಷೋತ್ತಮ ಬಿಳಿಮಲೆ, **ಹಂಪಿ ಜಾನಪದ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೧೯೯೬

೧೭. ಬೋರಲಿಂಗಯ್ಯ ಹಿ.ಚಿ., **ಕರ್ನಾಟಕ ಜನಪದ ಕಲೆಗಳ ಕೋಶ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೧೮. ಮಂಜುನಾಥ ಬೇವಿನಕಟ್ಟಿ, **ವಿಜಯನಗರ ಸಂಸ್ಕೃತಿ ಆಯಾಮಗಳು**, ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್, ಆನೆಗೊಂದಿ ಹೊಸಪೇಟೆ, ೧೯೯೭

೧೯. ಮಂಜುನಾಥ ಬೇವಿನಕಟ್ಟಿ, **ಜನಪದ ನಂಬಿಕೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೦. ಮಂಜುನಾಥ ಬೇವಿನಕಟ್ಟಿ, **ಜಾನಪದ ಕರ್ನಾಟಕ ಸಂಚಿಕೆ ೨**, ಸಂಪುಟ ೨, ಜೂನ್ ೨೦೦೩, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ರಹಮತ್ ತರೀಕೆರೆ, **ಧರ್ಮ**, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೩, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೨. ರಾಜಾ ಅಚ್ಯುತದೇವರಾಯ, ಜೆ.ಆರ್. ರಾಮಮೂರ್ತಿ, ಟಿ. ಪರಮೇಶ್ವರಪ್ಪ, **ಆನೆಗೊಂದಿ ಒಂದು ಕಿರು ಪರಿಚಯ**, ಹಂಪಿ ಉತ್ಸವ ಸಮಿತಿ, ಆನೆಗೊಂದಿ, ೧೯೯೮

೨೩. ರಾಮಚಂದ್ರ ಹಿ.ಶಿ., **ನಮ್ಮ ಜನಪದ ಕತೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೨೪. ಲಕ್ಷ್ಮಣ್ ತೆಲಗಾವಿ, **ಕೆ. ರಾಮಸ್ವಾಮಯ್ಯಂಗಾರ್‌ರವರ ಜೀರ್ಣ ವಿಜಯನಗರಾದರ್ಶಂ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬

೨೫. ಲಕ್ಕಪ್ಪಗೌಡ ಎಚ್.ಜೆ., **ಜಾನಪದ ಕೈಪಿಡಿ**, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೨೬. ವರದರಾಜರಾವ್ ಜಿ., **ಕುಮಾರರಾಮನ ಸಾಂಗತ್ಯಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬

೨೭. ವಸುಂಧರಾ ಫಿಲಿಯೋಜಾ, **ಅಳಿದುಳಿದ ಹಂಪೆ**, ಪ್ರೇಮಾಸಾಯಿ ಪ್ರಕಾಶನ, ವಿಜಯನಗರ, ಬೆಂಗಳೂರು, ೧೯೯೭

೨೮. ವಿವೇಕ ರೈ, **ಪ್ರವಾಸಿ ಕಂಡ ವಿಜಯನಗರ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೨೯. ವೀರೇಶ ಬಡಿಗೇರ, **ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು**, ಒಂದು ಸಾಂಸ್ಕೃತಿಕ ಅಧ್ಯಯನ, ವಿಮೋಚನಾ ಪ್ರಕಾಶನ, ೧೯೯೯

೩೦. ವೆಂಕಟರಮಣ ದಾಸ್, **ಹಂಪೆ ಕೈಪಿಡಿ**, ವೆಂಕಟೇಶ್ವರ ಟಾಯ್ಸ್ ಸೆಂಟರ್ ಮತ್ತು ಫ್ರೇಂ ವರ್ಕ್ಸ್, ಹಂಪಿ

೩೧. ಶರಣಬಸಪ್ಪ ಕೋಲ್ಕಾರ್, **ಅಕ್ಷಯ ಸವಿಸಂಚಿಕೆ**, ಗಂಗಾವತಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ೨೦೦೩

೩೨. ಶಿವಶಂಕರ ಎಂ.ಎಲ್., **ವಿಜಯನಗರ ಅಧ್ಯಯನ**, ಸಂಪುಟ ೨, ಹಂಪಿ ಉತ್ಸವ ೧೯೯೬ರಲ್ಲಿ ಮಂಡಿಸಿದ ಪ್ರಬಂಧಗಳು

೩೩. ಶ್ರೀನಿವಾಸರೆಡ್ಡಿ ಕೆ., **ಆನೆಗೊಂದಿ ಸ್ಥಳಮಹಿಮೆ ಹಾಗೂ ಇತಿಹಾಸ ದರ್ಶನ**, ೨೦೦೭

೩೪. ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಮೈಸೂರು, ಗೀತಾ ಬುಕ್‌ಹೌಸ್

೩೫. ಸದಾಶಿವಪ್ಪ ಕುಂಬಾ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಶ್ರೀ ಮಾಲತೇಶ ಪ್ರಕಾಶನ, ೧೯೯೦

೩೬. ಸಿದ್ಧಲಿಂಗೇಶ್ವರ ಸ್ವಾಮಿಗಳು, ಪಂಪಾ ಮಹಾತ್ಮೆ, ಹೊಳಗುಂದಿ, ಶ್ರೀಗುರು ವೃಷಭಾಶ್ರಮ

೩೭. ಸ್ವಾಮಿ ಬಿ.ಎಸ್., ಜಾನಪದ ಸೌರಭ, ಗೋರಕ್ಷಕನಾಥ ಪ್ರಕಾಶನ, ಬೆಂಗಳೂರು, ೧೯೯೩

೩೮. ಸ್ವಾಮಿ ನಮ್ಮಪ್ಪ, ಹಂಪಿ ಹೊಳೆ, ಧಾರವಾಡ, ಮನೋಹರ ಗ್ರಂಥಮಾಲೆ, ೧೯೮೧

೩೯. ಹನುಮಂತಪ್ಪ ತಾರಿಹಳ್ಳಿ, ಹೊಸಪೇಟೆ ನಾಯಕರು ಏಳುಕೇರಿಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೦. ಹೆಂಡಿ ಬಿ.ಬಿ., ಜಾನಪದ ಶಾಸ್ತ್ರ, ಅನುಭಾವ ಪ್ರಕಾಶನ, ಗುಲಬರ್ಗಾ, ೧೯೯೯

# ೩. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಉದ್ಯೋಗ | ಜಾತಿ | ಊರು |
|---|---|---|---|---|---|
| ೧. | ಅಚ್ಯುತದೇವರಾಯಲು | ೭೨ | ರಾಜ ವಂಶಸ್ಥರು | ಕ್ಷತ್ರಿಯ | ಹೊಸಪೇಟೆ |
| ೨. | ರಾಮದೇವರಾಯಲು | ೭೦ | ರಾಜ ವಂಶಸ್ಥರು | ಕ್ಷತ್ರಿಯ | ಆನೆಗೊಂದಿ |
| ೩. | ಶ್ರೀರಂಗದೇವರಾಯಲು | ೬೫ | ರಾಜ ವಂಶಸ್ಥರು | ಕ್ಷತ್ರಿಯ | ಗಂಗಾವತಿ |
| ೪. | ಲಲಿತಾರಾಣಿ | ೫೫ | ರಾಜ ವಂಶಸ್ಥರು | ಕ್ಷತ್ರಿಯ | ಆನೆಗೊಂದಿ |
| ೫. | ಪ್ರದೀಪ | ೪೦ | ದಳಪತಿ | ಕ್ಷತ್ರಿಯ | ಆನೆಗೊಂದಿ |
| ೬. | ಬಿ. ವೆಂಕಟೇಶ್ | ೪೨ | ಗ್ರಾ.ಪಂ. ಅಧ್ಯಕ್ಷರು | ನಾಯಕ | ಆನೆಗೊಂದಿ |
| ೭. | ಟಿ.ಜಿ. ಚಂದ್ರಕುಮಾರ | ೪೭ | ಮಾಜಿ ಗ್ರಾ.ಪಂ. ಅಧ್ಯಕ್ಷರು | ಬಲಿಜ | ಆನೆಗೊಂದಿ |
| ೮. | ಸಕ್ರಿಬಾಯಿ | ೪೫ | ತಾ. ಪಂ. ಅಧ್ಯಕ್ಷರು | ಲಂಬಾಣಿ | ಆನೆಗೊಂದಿ |
| ೯. | ಶ್ರೀನಿವಾಸ ಆಚಾರ್ಯ | ೪೮ | ಅರ್ಚಕರು | ಬ್ರಾಹ್ಮಣ | ಆನೆಗೊಂದಿ |
| ೧೦. | ಶ್ರೀನಿವಾಸರೆಡ್ಡಿ ಕೆ., | ೬೫ | ರೈತ | ರೆಡ್ಡಿ | ಆನೆಗೊಂದಿ |
| ೧೧. | ನಿಂಗಮ್ಮ ಮಡ್ಡೇರ್ | ೭೫ | ಗೃಹಿಣಿ | ಗಂಗಾ ಮತಸ್ಥರು | ಆನೆಗೊಂದಿ |
| ೧೨. | ಕೃಷ್ಣಮೂರ್ತಿಗೌಡ ಟಿ.ಜಿ. | ೮೬ | ಶಾನುಭೋಗ | ಚಟಬಣಜಿಗ | ಆನೆಗೊಂದಿ |
| ೧೩. | ವಡ್ರನಾಗಪ್ಪ | ೮೫ | ವಿಶ್ರಾಂತಿ | ವಡ್ಡರು | ಆನೆಗೊಂದಿ |
| ೧೪. | ಬೋವಿನಾಗಪ್ಪ | ೫೫ | ರೈತ | ಬೋವಿ | ಆನೆಗೊಂದಿ |
| ೧೫. | ನಾರಾಯಣಾಚಾರ್ಯ | ೩೦ | ಪುರೋಹಿತ | ಬ್ರಾಹ್ಮಣ | ಆನೆಗೊಂದಿ |
| ೧೬. | ಸುಬ್ಬಮ್ಮ ಆರ್.ಕೆ. | ೭೦ | ಗೃಹಿಣಿ | ಕಬ್ಬೇರ | ಮಲ್ಲಾಪುರ |
| ೧೭. | ಸುಬ್ಬಯ್ಯ ಇಲ್ಲೂರು | ೭೨ | ರೈತ | ವೈಶ್ಯ | ಮಲ್ಲಾಪುರ |
| ೧೮. | ಸೀತಾರಾಮ ಎಸ್. | ೬೦ | ಡ್ರೈವರ್ | ಚಟ್ಟಬಣಜಿಗ | ಆನೆಗೊಂದಿ |
| ೧೯. | ಕೊಮಾರೆಪ್ಪ ಬಿ., | ೫೫ | ರೈತ | ಚಟ್ಟಬಣಜಿಗ | ಆನೆಗೊಂದಿ |
| ೨೦. | ರಾಮರಾಜು ಎನ್. | ೭೫ | ಕೃಷಿ | ಕ್ಷತ್ರಿಯ | ಆನೆಗೊಂದಿ |
| ೨೧. | ಡಿ.ಪಿ. ಕುಪ್ಪರಾಜು | ೬೦ | ಕೃಷಿ | ಕ್ಷತ್ರಿಯ | ಆನೆಗೊಂದಿ |
| ೨೨. | ಇಲ್ಲೂರು ರಾಮಕೃಷ್ಣ | ೫೮ | ಕೃಷಿ | ವೈಶ್ಯ | ಆನೆಗೊಂದಿ |
| ೨೩. | ಗೌರಮ್ಮ | ೪೫ | ಗೃಹಿಣಿ | ನಾಯಕರು | ಆನೆಗೊಂದಿ |
| ೨೪. | ಬೋವಿ ಸಣ್ಣ ಭೀಮಪ್ಪ | ೫೫ | ರೈತ | ಗಂಗಾಮತಸ್ಥ | ಆನೆಗೊಂದಿ |
| ೨೫. | ಬಸಪ್ಪ | ೪೫ | ಉಪನ್ಯಾಸಕರು | ಲಿಂಗಾಯತ | ಆನೆಗೊಂದಿ |

| | | | | | |
|---|---|---|---|---|---|
| ೨೬. | ಲಿಂಗಪ್ಪ ಬಿ., | ೫೪ | ರೈತ | ಬಣಜಿಗ | ಆನೆಗೊಂದಿ |
| ೨೭. | ಫಕೀರಪ್ಪ ಎಂ., | ೫೦ | ರೈತ | ಗಂಗಾಮತಸ್ಥ | ಆನೆಗೊಂದಿ |
| ೨೮. | ಶೇಖರಪ್ಪ ಮಡ್ಡೇರ್ | ೪೫ | ರೈತ | ಗಂಗಾಮತಸ್ಥ | ಆನೆಗೊಂದಿ |
| ೨೯. | ಕಲ್ಯಾಣಿ ಆಂಜನೇಯ | ೩೮ | ನೌಕರ | ಗಂಗಾಮತಸ್ಥ | ಆನೆಗೊಂದಿ |
| ೩೦. | ಸಿ.ಎಂ. ಮೌಲಪ್ಪ | ೩೪ | ರೈತ | ಕುರುಬರು | ಆನೆಗೊಂದಿ |
| ೩೧. | ಅಂಬಿಗರ ಹೊಸೂರಮ್ಮ | ೬೦ | ಗೃಹಿಣಿ | ಗಂಗಾಮತಸ್ಥ | ಆನೆಗೊಂದಿ |
| ೩೨. | ಭೀಮಪ್ಪ ಪಾಟೀಲ್ | ೪೦ | ಪತ್ರಕರ್ತ | ಗಂಗಾಮತಸ್ಥ | ಆನೆಗೊಂದಿ |
| ೩೩. | ಜನಾದ್ರಿ ದೊಡ್ಡಯ್ಯ | ೫೮ | ರೈತ | ವೈಶ್ಯ | ಆನೆಗೊಂದಿ |
| ೩೪. | ಅಶೋಕ | ೩೫ | ಫೋಟೋಗ್ರಾಫರ್ | ಆನೆಗೊಂದಿ | |
| ೩೫. | ನರಸಾಪುರ ಯಂಕಣ್ಣ | ೬೦ | ಕೃಷಿ | ಗಂಗಾಮತಸ್ಥ | ಆನೆಗೊಂದಿ |
| ೩೬. | ಚಂದ್ರಪ್ಪ ಟಿ., | ೪೦ | ಕೃಷಿ | ಬಲಿಜ | ಆನೆಗೊಂದಿ |
| ೩೭. | ಇಲ್ಲೂರು ಈರಯ್ಯ | ೫೫ | ಕೃಷಿ | ವೈಶ್ಯ | ಆನೆಗೊಂದಿ |
| ೩೮. | ರಮೇಶ್ ಜೋಡೀದಾರ್ | ೫೦ | ಪುರೋಹಿತ | ಬ್ರಾಹ್ಮಣ | ಆನೆಗೊಂದಿ |

## ೪. ಆನೆಗೊಂದಿಗೆ ಸಂಬಂಧಿಸಿದ ಮಾಹಿತಿಗಳು

### ನವವೃಂದಾವನ

### ೧. ಶ್ರೀ ಪದ್ಮನಾಭ ತೀರ್ಥ

ನವವೃಂದಾವನದಲ್ಲಿ ವೃಂದಾನವಸ್ಥರಾದ ೯ ಜನ ಯತಿವರ್ಯರ ಬಗೆಗಿನ ವಿವರ ಇಂತಿದೆ. ಕ್ರಿ.ಶ.೧೩೨೪ರಲ್ಲಿ ಇಲ್ಲಿಯ ಪ್ರಾಣವಾಯವನ್ನು ಸವಿಯುತ್ತಾ ಆತ್ಮಶುದ್ಧಿಗಾಗಿ ಧ್ಯಾನದಲ್ಲಿರಲು ಇವರು ಮೂಲತಃ ಆಂದ್ರದ ರಾಜಮಂಡ್ರಿ ಕಾಕತೀಯ ಗಜಪತಿಯ ಆಸ್ಥಾನದಲ್ಲಿ ಪ್ರಧಾನಮಂತ್ರಿ ಹಾಗೂ ಆಸ್ಥಾನದ ವಿದ್ವಾಂಸರಾಗಿದ್ದರು. ಇವರ ಪೂರ್ಣನಾಮ ಶೋಭನಬಾಬು, ಉಡುಪಿಯಿಂದ ಶ್ರೀ ಮಧ್ವಾಚಾರ್ಯರು ರಾಜಮಂಡ್ರಿಗೆ ಬಂದಾಗ ಶ್ರೀ ಶೋಭನಬಾಬರಿಗೂ ಶ್ರೀ ಮದ್ವಾಚಾರ್ಯರಿಗೂ ದ್ವೈತ ಅದ್ವೈತದ ವಾದವಾಗುತ್ತದೆ. ಭಗವಂತನ ಸಂಕಲ್ಪದಂತೆ ಶೋಭನಬಾಬು ಪರಾಜಿತರಾಗುತ್ತಾರೆ. ನಂತರ ಶ್ರೀ ಮದ್ವಾಚಾರ್ಯ ಪ್ರಥಮ ಶಿಷ್ಯರಾಗಿ ಸನ್ಯಾಸ ದೀಕ್ಷೆ ಪಡೆದು ಶ್ರೀ ಪದ್ಮನಾಭತೀರ್ಥರೆಂದು ನಾಮಕರಣ ವಾಗುತ್ತದೆ. ಇವರು ಮೂರು ಗ್ರಂಥಗಳನ್ನು ರಚಿಸಿದ್ದಾಗಿ ೧. ಸನ್ಯಾಯ ರತ್ನಾವಳಿ, ೨. ಸದ್ಭಕ್ತ ರತ್ನಾವಳಿ, ೩. ಆನಂದ ಮೂಲ ಗ್ರಂಥ ರಚಿಸಿದ್ದಾಗಿ; ಈ ಗ್ರಂಥದ ವಿವರ ತಿಳಿದ ನಂತರ ಮಧ್ವ ಸಮಾಜದವರು ಶ್ರೀ ಪದ್ಮನಾಭ ತೀರ್ಥರಿಗೆ ಗೌರವ ಸಲ್ಲಿಸುತ್ತಾರೆ. ನಂತರ ಪದ್ಮನಾಭ ತೀರ್ಥರು, ಕೆಲವು ಯಾತ್ರಾ ಸ್ಥಳಗಳನ್ನು ಸಂದರ್ಶಿಸಿ ಹಂಪಿಯಿಂದ ಆನೆಗೊಂದಿ ರಾಜ್ಯಕ್ಕೆ ಬಂದು ಆಗಿನ ಆನೆಗೊಂದಿ ಮಹಾರಾಜರಾದ ಶ್ರೀ ಜಂಬೂ ಕೇಶವರಾಯನ, ಆಶ್ರಯ ಪಡೆದು ಆನೆಗೊಂದಿ ಪೂರ್ವಕ್ಕೆ ತುಂಗಭದ್ರಾ ನಡುಗಡ್ಡೆಯಲ್ಲಿ ಧ್ಯಾನಮಗ್ನರಾಗುತ್ತಾ ಕ್ರಿ.ಶ.೧೩೨೪ರಲ್ಲಿ ವೃಂದಾವನದಲ್ಲಿ ವೃಂದಾವನಸ್ಥರಾದರೆಂದು ತಿಳಿಯುತ್ತದೆ.

### ೨. ಶ್ರೀ ಕವೀಂದ್ರ ತೀರ್ಥರು

ಇವರು ಮದ್ವ ಸಂಪ್ರದಾಯದ ಯತಿಗಳು, ಮತಭೇದವಿಲ್ಲದವರು ಹಾಗೂ ಕರ್ನಾಟಕದವರಿದ್ದು ಇವರು ವಿದ್ಯಾತೀರ್ಥರ ಶಿಷ್ಯರೆಂದು ತಿಳಿಯುತ್ತದೆ. ಇವರು ಪದ್ಮನಾಭ ತೀರ್ಥರ ಪಕ್ಕದಲ್ಲಿ ಕ್ರಿ.ಶ.೧೪೯೯ರಲ್ಲಿ ವೃಂದಾವನಸ್ಥರಾದರೆಂದು ತಿಳಿಯುತ್ತದೆ.

### ೩. ಶ್ರೀ ವಾಗೀಶ ತೀರ್ಥರು

ಇವರು ಕವೀಂದ್ರ ತೀರ್ಥರ ಶಿಷ್ಯರು ಹಾಗೂ ಕರ್ನಾಟಕದವರಿದ್ದು ಕ್ರಿ.ಶ.೧೪೦೭ರಲ್ಲಿ ವಾಗೀಶ ತೀರ್ಥರು ತಮ್ಮ ಅಂತರ ಸುದ್ದಿಯನ್ನು ಪಡೆಯುತ್ತಾ ವೃಂದಾವನದಲ್ಲಿ ಲೀನವಾದರೆಂದು ಜನ ಹೇಳುತ್ತಾರೆ.

### ೪. ಶ್ರೀ ಗೋವಿಂದ ಒಡೆಯರು

ಇವರು ವ್ಯಾಸರಾಯರ ಶಿಷ್ಯರು, ಶ್ರೀ ವ್ಯಾಸರಾಯರ ಅನುಮತಿಯ ಮೇರೆಗೆ ಸದರಿ ವೃಂದಾವನ ಪಕ್ಕದಲ್ಲಿ ಅಂತರ್‌ಶುದ್ಧಿಯನ್ನು ಪಡೆಯುತ್ತಾ ಕ್ರಿ.ಶ.೧೫೨೫ ಲೀನರಾದರೆಂದು ತಿಳಿಯುತ್ತದೆ.

### ೫. ಶ್ರೀ ವ್ಯಾಸರಾಯರು

ಶ್ರೀ ವ್ಯಾಸರಾಯರು ವ್ಯಾಸರಾಜರೂ ಹೌದು. ಕೃಷ್ಣದೇವರಾಯನನ್ನೊಳಗೊಂಡು ಆರು ಜನ ರಾಜರುಗಳಿಗೆ ಗುರುಗಳಾಗಿದ್ದರು. ಶ್ರೀಕೃಷ್ಣದೇವರಾಯನಿಗೆ ಕುಹಯೋಗ (ಮರಣ ಭಯವಿದ್ದಾಗ) ಈ ವಿಪತ್ತನ್ನು ಮೂರು ಮುಕ್ಕಾಲುಗಳಿಗೆ ಸಿಂಹಾಸನಾಧೀಶರನ್ನಾಗಿ ಶ್ರೀಕೃಷ್ಣದೇವರಾಯನು ಶ್ರೀ ವ್ಯಾಸ ಗುರುಗಳನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜಾಧಿರಾಜ, ರಾಜ ಗಜಗೋಹರ, ಕರ್ನಾಟಕ ರತ್ನಸಿಂಹಾಸನಾಧೀಶರು ಸರ್ವ ವೈಷ್ಣವದೀಶರೆಂದು ವರ್ಣಿಸಿದ್ದಾರೆ. ಶ್ರೀ ವ್ಯಾಸರಾಯರು ಆನೆಗೊಂದಿಯ ಸುತ್ತ ೭೩೨ ಪ್ರಾಣವಾಯು (ಆಂಜನೇಯ ಮೂರ್ತಿಗಳನ್ನು) ಈ ಭಾಗದಲ್ಲಿ ಸ್ಥಾಪಿಸಿದ್ದಾಗಿ ತಿಳಿಯುತ್ತದೆ. ಇಲ್ಲಿ ಪ್ರಾಣವಾಯುವಿಗೆ ಅಷ್ಟು ಮಹತ್ವಕೊಟ್ಟು ಸದರಿ ನಡುಗಡ್ಡೆಯಲ್ಲಿ ಕೆಲಕಾಲ ಧ್ಯಾನದಲ್ಲಿ ಮಗ್ನರಾಗಿ ತಮ್ಮ ಅಂತರ್‌ಶುದ್ಧಿಯನ್ನು ಪಡೆಯುತ್ತಾ, ಶ್ರೀ ರಾಜ ಅಚ್ಯುತದೇವರಾಯರ ಸಮ್ಮುಖದಲ್ಲಿ ಕ್ರಿ.ಶ.೧೫೩೯ರಲ್ಲಿ ಲೀನವಾಗುತ್ತಾರೆ. ನಂತರ ಶ್ರೀ ರಾಜ ಅಚ್ಯುತದೇವರಾಯ ಈ ವೃಂದಾವನವನ್ನು ಕಟ್ಟಿಸಿ, ವಿಜಯನಗರ ರಾಜಗುರುಗಳೆಂದು ಕೊಂಡಾಡಿದನೆಂದು ಜನ ಹೇಳುತ್ತಾರೆ.

### ೬. ಶ್ರೀ ರಘುವರ್ಯತೀರ್ಥ

ಇವರನ್ನು ಉತ್ತರಾಧಿಮಠದವರೆಂದು ಹೇಳಿದರೆ, ರಾಘವೇಂದ್ರ ಮತ್ತು ವ್ಯಾಸರಾಯ ಮಠದವರು ಹಾಗೂ ಮುಳಬಾಗಿಲು ಮಠದವರು ಶ್ರೀ ಜಯತೀರ್ಥ ವೃಂದಾವನವೆಂದು ಹೇಳುವದುಂಟು. ಈ ವೃಂದಾವನ ಮಾತ್ರ ಇನ್ನೂ ನಿಗೂಢವಾಗಿ ಮುಂದುವರೆದಿದೆ. ಇವರು ಕರ್ನಾಟಕದವರಿದ್ದು, ಕ್ರಿ.ಶ.೧೫೫೮ರಲ್ಲಿ ಸದರಿ ಆನೆಗೊಂದಿ ನಡುಗಡ್ಡೆಯಲ್ಲಿ ಧ್ಯಾನದಲ್ಲಿ ಮಗ್ನರಾಗಿ ಲೀನರಾದರೆಂದು ತಿಳಿಯುತ್ತದೆ.

### ೭. ಶ್ರೀನಿವಾಸ ತೀರ್ಥರು

ಇವರು ವ್ಯಾಸರಾಯರ ಸೋದರಳಿಯನೆಂದು ಹಾಗೂ ಅವರ ಶಿಷ್ಯರೆಂದೂ, ಕ್ರಿ.ಶ.೧೫೬೪ರಲ್ಲಿ ಇಲ್ಲಿಯೇ ಲೀನರಾದರೆಂದು ತಿಳಿಯುತ್ತದೆ.

### ೮. ಶ್ರೀರಾಮತೀರ್ಥರು

ಇವರು ಮೂಲತಃ ಮೈಸೂರು ಪ್ರಾಂತದವರಿದ್ದು, ಶ್ರೀನಿವಾಸ ತೀರ್ಥರ ಶಿಷ್ಯರಾಗಿದ್ದರು. ಧರ್ಮ ಪ್ರಚಾರಕ್ಕಾಗಿ ಇಬ್ಬರು ಯತಿಗಳಿಗೆ ಆಶ್ರಯ ದೀಕ್ಷೆ ಕೊಟ್ಟಿದ್ದಾಗಿ ಇವರಲ್ಲಿ ಎರಡು ಮಠಗಳಿದ್ದು, ೧. ಕುಂದಾಪುರ ಬಾಲಾಶ್ರಮ ವ್ಯಾಸರಾಯರ ಘಠವೆಂದೂ, ೨. ಸೋಸಲಿ ವ್ಯಾಸರಾಯರ ಮಠವೆಂದೂ ಕರೆಯುವುದುಂಟು. ಕ್ರಿ.ಶ.೧೫೮೪ರಲ್ಲಿ ಸದರಿ ವೃಂದಾವನ ಪಕ್ಕದಲ್ಲಿಯೇ ಲೀನರಾದರೆಂದು ತಿಳಿಯುತ್ತದೆ.

### ೯. ಶ್ರೀ ಸುದೀಂದ್ರ ತೀರ್ಥರು

ಇವರು ಮೂಲತಃ ಕುಂಭಕೋಣದ ತಂಜಾವೂರನವರೆಂದು ಪೆನುಗೊಂಡ ಮಹಾರಾಜರು ಇವರಿಗೆ ರತ್ನಾಭಿಷೇಕ ಮಾಡಿದ್ದಾಗಿ ತಿಳಿಯುತ್ತದೆ. ಇವರು ರಾಘವೇಂದ್ರ ಸ್ವಾಮಿಗಳನ್ನು ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿ ದೀಕ್ಷೆ ಕೊಟ್ಟಿದ್ದಾಗಿ ಇವರ ಶಿಷ್ಯರಾದ ರಾಘವೇಂದ್ರ ಸ್ವಾಮಿಗಳ ಸಮ್ಮುಖದಲ್ಲಿ ಕ್ರಿ.ಶ.೧೬೨೪ರಲ್ಲಿ ಸುದೀಂಧ್ರ ತೀರ್ಥರು ತಮ್ಮ ಅಂತರ್ ಶುದ್ಧಿಯನ್ನು ಮಾಡಿಕೊಳ್ಳುತ್ತಾ ಈ ವೃಂದಾವನದಲ್ಲಿ ಲೀನರಾದರೆಂದು ತಿಳಿಯುತ್ತದೆ.

ಹೀಗೆ ಸ್ಥಳೀಯ ಜನರು ಹೇಳುವ ಪ್ರಕಾರ ನವವೃಂದಾವನ ಗಡ್ಡೆಗೆ ಒಂದು ಭವ್ಯ ಪರಂಪರೆಯೇ ಇದೆಯೆಂದು ಗೊತ್ತಾಗುತ್ತದೆ.

# ಗ್ರಾಮದ ಒಟ್ಟು ಜನಸಂಖ್ಯೆ ಮತ್ತು ಇತರೆ ವಿವರ

| ಜನ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೧೭೪೦ | ೧೭೫೭ | ೩೪೯೭ |
| ೦೬ ವಯೋವರ್ಗದ ಜನಸಂಖ್ಯೆ | ೨೩೬ | ೨೪೨ | ೪೭೮ |
| ಎಸ್‌ಸಿ ಜನಸಂಖ್ಯೆ | ೨೨೩ | ೨೫ | ೪೭೩ |
| ಎಸ್‌ಟಿ ಜನಸಂಖ್ಯೆ | ೩೨೦ | ೩೧೨ | ೬೩೨ |
| ಅಕ್ಷರಸ್ಥರು ೭ ವರ್ಷಗಳು | ೯೪೨ | ೬೩೬ | ೧೫೭೮ |
| ಅನಕ್ಷರಸ್ಥರು | ೭೯೮ | ೧೧೨೧ | ೧೯೧೯ |
| ಒಟ್ಟು ಕೆಲಸಗಾರರು | ೧೦೧೯ | ೫೬೮ | ೧೫೮೭ |
| ಪ್ರಧಾನ ಕೆಲಸಗಾರರು | ೮೭೫ | ೨೬೮ | ೧೧೪೩ |
| ಅಲ್ಪಾವಧಿ ಕೆಲಸಗಾರರು | ೧೪೪ | ೩೦೦ | ೪೪೪ |
| ಕೆಲಸಗಾರರಲ್ಲದವರು | ೭೨೧ | ೧೧೮೯ | ೧೯೧೦ |
| ಸಾಗುವಳಿದಾರರು | ೧೫೦ | ೧೪ | ೧೬೪ |
| ಸಾಗುವಳಿ ಕಾರ್ಮಿಕರ | ೬೩೮ | ೪೩೫ | ೧೦೭೩ |
| ಕುಟುಂಬ ಕೈಗಾರಿಕೆ ಕೆಲಸಗಾರರು | ೧೨ | ೧ | ೧೩ |
| ಇತರೆ ಕೆಲಸಗಾರರು | ೨೧೯ | ೧೧೮ | ೩೩೭ |

# ತುಂಗಭದ್ರಾ ನದಿಗೆ ಅಡ್ಡಲಾಗಿ ಗಂಗಾವತಿ ತಾಲೂಕಿನ ಆನೆಗುಂದಿಯ ನಿರ್ಮಾಣ ಹಂತದಲ್ಲಿರುವ ಕೇಬಲ್ ಸ್ಟೇಯ್ಡ್ ಸೇತುವೆಯ ಘಟನಾವಳಿಗಳ ವಿವರ.

| | |
|---|---|
| ಜನವರಿ 1992 | ಆನೇಗುಂದಿ ಗ್ರಾಮದ ಬಳಿ ಸೇತುವೆ ನಿರ್ಮಾಣ ಕೋರಿ ಸಾರ್ವಜನಿಕರಿಂದ ಮತ್ತು ಜನ ಪ್ರತಿನಿಧಿಗಳಿಂದ ಮನವಿಗಳು ಬಂದಿರುತ್ತವೆ. |
| ಏಪ್ರಿಲ್ - ಮೇ 1993 | ಪ್ರಸ್ತಾಪಿತ ಆನೇಗುಂದಿ ಸೇತುವೆಯ ನಿರ್ಮಾಣಕ್ಕಾಗಿ ಮೂರು ಅಲೈನ್‌ಮಂಟ್‌ಗಳಿಗಾಗಿ ಸರ್ವೆ ನಡೆಸಲಾಯಿತು. |
| 17 ನೇ ಜುಲೈ 1993 | ಆನೆಗುಂದಿಯ ಬಳಿ ಸೇತುವೆ ನಿರ್ಮಾಣ ಕಾಮಗಾರಿಯ ವಿವರವಾದ ಅಂದಾಜು ಪತ್ರಿಕೆಯನ್ನು ರೂ. 250.00 ಲಕ್ಷಗಳ ಮೊತ್ತಕ್ಕೆ ತಯಾರಿಸಿ ಸಲ್ಲಿಸಲಾಯಿತು. |
| 18 ನೇ ನವಂಬರ್ 1993 | ರೂ. 250.00 ಲಕ್ಷ ಮೊತ್ತದ ಅಂದಾಜು ಪತ್ರಿಕೆಗೆ ಸರ್ಕಾರದಿಂದ ಆದೇಶ ಸಂಖ್ಯೆ:ಪಿಡಬ್ಲ್ಯೂಡಿ:112:ಸಿಬಿಆರ್:93 ಬೆಂಗಳೂರಿನಲ್ಲಿ ಆಡಳಿತಾತ್ಮಕ ಅನಮೋದನೆ ಪಡೆಯಲಾಯಿತು. |
| 24 ನೇ ನವಂಬರ್ 1993 | ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ.ವೀರಪ್ಪ ಮೊಯಿಲಿಯವರಿಂದ ಸೇತುವೆ ನಿರ್ಮಾಣ ಕಾಮಗಾರಿಯ ಅಡಿಗಲ್ಲಿನ ಶಂಖುಸ್ಥಾಪನೆ ನೆರವೇರಿಸಲಾಯಿತು. ಅಲ್ಲದೆ ಈ ಸೇತುವೆ ನಿರ್ಮಾಣಕ್ಕೆ ಯಾರಿಂದಲೂ ಆಕ್ಷೇಪಣೆ ವ್ಯಕ್ತವಾಗಿರುವುದಿಲ್ಲ |
| 12 ನೇ ಜನವರಿ 1994 | ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯ ಕಾರ್ಯದರ್ಶಿಗಳು ಅನೆಗುಂದಿ ಸೇತುವೆಯ ಸ್ಥಳಕ್ಕೆ ಬೇಟಿ ನೀಡಿರುತ್ತಾರೆ. |
| 19 ನೇ ಫೆಬ್ರುವರಿ 1994 | ದಿನಾಂಕ 10 ನೇ ಜನವರಿ 1994ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಸೇತುವೆ ನಿರ್ಮಾಣಕ್ಕಾಗಿ ಪೂರ್ವಭಾವಿ ಟೆಂಡರ್‌ಗಾಗಿ ಪ್ರಕಟಣೆ. |
| ಆಗಸ್ಟ್ 94 | ಕೂಡು ರಸ್ತೆಯ ಭೂಸ್ವಾಧೀನದ ಪ್ರಕ್ರಿಯೆಯನ್ನು ಪ್ರಾರಂಬಿಸಲಾಯಿತು. |
| 28 ನೇ ಸೆಪ್ಟಂಬರ್ 1995 | ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರು ರೂ. 250.00 ಲಕ್ಷದ ಅಂದಾಜು ಪತ್ರಿಕೆಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. |
| ಅಕ್ಟೊಬರ್ 95 | ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರು ರೂ. 219.96 ಲಕ್ಷಗಳಿಗೆ ಟೆಂಡರ್ ಕರೆದಿರುತ್ತಾರೆ. |
| 20 ನೇ ಜೂನ್ 1996 | ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರು ಶ್ರೀ.ಬಿ.ವಿ.ಸುಬ್ಬಾರೆಡ್ಡಿ ಗುತ್ತೇದಾರರು, ಹೈದ್ರಾಬಾದ್ ಇವರ ಕನಿಷ್ಠ ಸವಾಲಿನ ಟೆಂಡರನ್ನು ಸ್ವೀಕಾರ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. |
| 5ನೇ ಆಗಸ್ಟ್ 1996 | ಸರ್ಕಾರವು ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರಿಗೆ ಪತ್ರ ಬರೆದು ಶ್ರೀ.ಬಿ.ವಿ.ಸುಬ್ಬಾರೆಡ್ಡಿ ಗುತ್ತೇದಾರರು, ಇವರ ಕನಿಷ್ಠ ಸವಾಲಿನ ಟೆಂಡರಗೆ ಕೆಲವು ಸ್ಪಷ್ಟೀಕರಣವನ್ನು ಒದಗಿಸಲು ಕೋರಲಾಗಿದೆ. |

| | |
|---|---|
| ಸೆಪ್ಟೆಂಬರ್ 1996 | ಟೆಂಡರ್ ಪೂರ್ವದ ಗುತ್ತಿಗೆದಾರರ ಅರ್ಹತೆಗೆ ಒಪ್ಪಿಗೆ ನೀಡಲಾಯಿತು. |
| 28 ನೇ ಸೆಪ್ಟೆಂಬರ್ 1996 | ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರು ಶ್ರೀ.ಬಿ.ವಿ.ಸುಬ್ಬಾರೆಡ್ಡಿ ಗುತ್ತೇದಾರರು, ಇವರ ಕನಿಷ್ಠ ಸವಾಲಿನ ಟೆಂಡರಗೆ ಸಂಬಂಧಿಸಿದ ಕೆಲವು ಸ್ಪಷ್ಟೀಕರಣವನ್ನು ಸರ್ಕಾರಕ್ಕೆ ಒದಗಿಸಿರುತ್ತಾರೆ. |
| ಡಿಸೆಂಬರ್ 1996 | ಸೇತುವೆ ನಿರ್ಮಾಣ ಕಾಮಗಾರಿಯ ( ಕೇಬಲ್ ಸ್ಟೇಯ್ಡ್ ಸೇತುವೆ ನಿರ್ಮಾಣಕ್ಕಾಗಿ (ಪರ್ಯಾಯ ಪ್ರಸ್ತಾವನೆ ಆಧಾರದ ಮೇಲೆ) ಗುತ್ತಿಗೆದಾರರ ನೇಮಕವಾಯಿತು. |
| ಜನೆವರಿ 1997 ಫೆಬ್ರುವರಿ 1997 | ಗುತ್ತಿಗೆದಾರರಿಂದ ಪರ್ಯಾಯ ವಿನ್ಯಾಸ ಪ್ರಸ್ತಾವನೆ ಸಲ್ಲಿಕೆಯಾಯಿತು. ನಬಾರ್ಡ್‌ನ ಆರ್.ಐ.ಡಿ.ಎಫ್2 ರ ಅನುದಾನದಡಿಯಲ್ಲಿ ರೂ. 412.00 ಲಕ್ಷಗಳಿಗೆ ಕಾಮಗಾರಿಯನ್ನು ಅನಮೋದಿಸಲಾಯಿತು. |
| 26 ನೇ ಫೆಬ್ರುವರಿ 1997 | ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರು ಶ್ರೀ.ಬಿ.ವಿ.ಸುಬ್ಬಾರೆಡ್ಡಿ ಗುತ್ತೇದಾರರು, ಇವರ ಒಟ್ಟು ಮೊತ್ತದ ಟೆಂಡರನ್ನು ರೂ. 320.00 ಲಕ್ಷಗಳಿಗೆ ಅಂಗೀಕರಿಸಿರುತ್ತಾರೆ. |
| 17 ನೇ ಮಾರ್ಚ 1997 | ಕರ್ನಾಟಕ ರಾಜ್ಯ ವಿಧಾನ ಪರಿಷತನ್ ಮಾನ್ಯ ಅಧ್ಯಕ್ಷರಾದ ಶ್ರೀ.ಡಿ.ಬಿ.ಕಲ್ಮಣ್‌ಕರರವರಿಂದ ಅಧೀಕ್ಷಕರು ಭಾರತ ಪ್ರಾಚೀನ ವಸ್ತು ಶಾಸ್ತ್ರ ಸಂಶೋಧನಾ ಇಲಾಖೆ ಸೇತುವೆಯ ಕೂಡು ರಸ್ತೆ ನಿರ್ಮಾಣ ಕಾಮಗಾರಿಗೆ ಅನುಮತಿಗಾಗಿ ಪತ್ರ ಬರೆಯಲಾಯಿತು. |
| 4 ನೇ ಎಪ್ರಿಲ್ 1997 | ಆನೆಗುಂದಿ ಸೇತುವೆ ನಿರ್ಮಾಣದ ಕಾಮಗಾರಿಗೆ ನಬಾರ್ಡ್ ಆರ್.ಐ.ಡಿ.ಎಫ್ 2 ಸಹಾಯ ಧನ ಯೋಜನೆ ಅಡಿಯಲ್ಲಿ ರೂ. 412.00 ಲಕ್ಷಗಳಿಗೆ ಅನುಮೋದನೆ ದೊರಕಿರುತ್ತದೆ. |
| 16 ನೇ ಎಪ್ರಿಲ್ 1997 | ಕಾಮಗಾರಿಯನ್ನು ಪ್ರಾರಂಭಿಸಲಾಯಿತು. |
| ಮೇ 1997 | ಬೆಂಗಳೂರಿನ ಮಃ ಟಾರ್‌ಸ್ಟೀಲ್ ರೀಸರ್ಚ್ ಫೌಂಡೇಶನ್‌ರವರಿಗೆ ಸೇತುವೆಯ ವಿನ್ಯಾಸವನ್ನು ಪರಿಶೀಲಿಸಲು ವಹಿಸಲಾಯಿತು. |
| 30 ನೇ ಜೂಲೈ 1997 | ಅಧೀಕ್ಷಕ ಪ್ರಾಚೀನ ವಸ್ತು ಶಾಸ್ತ್ರ ಸಂಶೋಧಕರು, ಭಾರತ ಪ್ರಾಚೀನ ಸಂಶೋಧನಾ ಇಲಾಖೆ, ಬೆಂಗಳೂರವರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,, ಲೋಕೋಪಯೋಗಿ ಇಲಾಖೆ ಉಪ-ವಿಭಾಗ ಗಂಗಾವತಿ ಮತ್ತು ಹೊಸಪೇಟೆಯವರಿಗೆ ಬರೆದ ತಮ್ಮ ಪತ್ರದಲ್ಲಿ ಸೇತುವೆ ನಿರ್ಮಾಣದ ಬಗ್ಗೆ ಯಾವುದೇ ಆಕ್ಷೇಪಣೆ ಒಡ್ಡಿರುವುದಿಲ್ಲ, ಆದರೆ ಬದಲಾಗಿ ತಳವಾರ ಘಟ್ಟ ದ್ವಾರವನ್ನು ತಪ್ಪಿಸಿ ಬಳಸು ರಸ್ತೆ ನಿರ್ಮಿಸಲು ಸೂಚಿಸಿರುತ್ತಾರೆ. |
| 28 ನೇ ಜೂಲೈ 1997 | ನಿರ್ದೇಶಕರು ಪ್ರಾಚೀನ ವಸ್ತು ತಾಸ್ತ್ರ ಸಂಶೋಧನ ಇಲಾಖೆ ಮತ್ತು ವಸ್ತು ಸಂಗ್ರಹಾಲಯ ಮೈಸೂರುರವರು ಆನೇಗುಂದಿ ಬಳಿಯ ಪುರಾತನ ಮಂಟಪವನ್ನು ಸ್ಥಳಾಂತರಿಸಲು ಹಣ ಭರಿಸಲು ಕೋರಿ ಪತ್ರ ಬರೆದಿರುತ್ತಾರೆ. |
| 30 ನೇ ಆಗಸ್ಟ್ 1997 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಲೋಕೋಪಯೋಗಿ ಇಲಾಖೆ ಉಪವಿಭಾಗ ಗಂಗಾವತಿ ಇವರು ಅಧೀಕ್ಷಕ ಪುರಾತತ್ವ ಶಾಸ್ತ್ರಜ್ಞ ಧಾರವಾಡ ಇವರಿಗೆ ಬರೆದ ಪತ್ರದಲ್ಲಿ ನಂದಿ ಮಂಟಪವನ್ನು ಸ್ಥಳಾಂತರಿಸಲು ಅನುಮತಿ ನೀಡಲು ಕೋರಿರುತ್ತಾರೆ. |
| 6ನೇ ಸೆಪ್ಟೆಂಬರ್ 1997 | ಪುರಾತತ್ವ ಶಾಸ್ತ್ರಜ್ಞ ಸಹಾಯಕ ಕಮಲಾಪುರ ಇವರು ರಾಜ್ಯ ಪುರಾತತ್ವ ಶಾಸ್ತ್ರ ಮತ್ತು ಸಂಗ್ರಹಾಲಯ ಮೈಸೂರು ಇವರಿಗೆ ಬರೆದ ಪತ್ರದಲ್ಲಿ ನಂದಿ ಮಂಟಪವನ್ನು ಸ್ಥಳಾಂತರಿಸುವ ಕೆಲಸವನ್ನು ಪುರಾತತ್ವ ಶಾಸ್ತ್ರ ಇಲಾಖೆಯೇ ವಹಿಸಿಕೊಳ್ಳುತ್ತದೆ. ಎಂದು ತಿಳಿಸಿರುತ್ತಾರೆ. |

| | |
|---|---|
| ನವ್ಹಂಬರ್ 1997 | ತಳವಾರ ಘಟ್ಟದ ಬದಿಯ ಅಡಿಪಾಯದ ಕೆಲಸವನ್ನು ಪ್ರಾರಂಭಿಸಲಾಯಿತು. |
| 3ನೇ ಅಕ್ಟೋಬರ್ 1997 | ರಾಜ್ಯ ಪುರಾತತ್ವ ಶಾಸ್ತ್ರದ ಇಲಾಖೆ ಮತ್ತು ಸಂಗ್ರಹಾಲಯ ಇವರು ನಂದಿ ಮಂಟಪವನ್ನು ಸ್ಥಳಾಂತರಿಸಲು ರೂ. 2.00 ಲಕ್ಷವನ್ನು ಠೇವಣಿ ಮಾಡಲು ಕೋರಿರುತ್ತಾರೆ. |
| ಮೇ 1998 | ಸೇತುವೆ ಪೈಲಾನ್‌ಗಳಿಗಾಗಿ ಅಡಿಪಾಯಗಳನ್ನು ನಿರ್ಮಿಸಲಾಯಿತು. |
| 12 ನೇ ಜೂನ್ 1999 | ಶ್ರೀ.ಎಂ.ವಿ.ಕೃಷ್ಣಪ್ಪ ನಿರ್ದೇಶಕರು, ಪ್ರಾಚೀನ ವಸ್ತು ಸಂಶೋಧನಾ ಇಲಾಖೆ ಮತ್ತು ವಸ್ತು ಸಂಗ್ರಹಾಲಯ, ಮೈಸೂರುರವರು ತಳವಾರ ಘಟ್ಟ ಬಾಗಿಲ ಸ್ಮಾರಕವನ್ನು ಮತ್ತು ಆನೆಗುಂದಿ ಸೇತುವೆಯ ಕಾಮಗಾರಿ ಸ್ಥಳವನ್ನು ವೀಕ್ಷಿಸಿದರು. |
| 10ನೇ ಆಗಸ್ಟ್ 1999 | ಕರ್ನಾಟಕ ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಹಂಪಿ ಪ್ರದೇಶದ ಸಂರಕ್ಷಿಸುವ ಹಾಗೂ ಒತ್ತುವರಿಯ ಬಗ್ಗೆ ಸಭೆಯನ್ನು ನಡೆಸಿದರು. |
| 21 ನೇ ಆಗಸ್ಟ್ 1999 | ಮುಖ್ಯ ಅಭಿಯಂತರರು, ಅಧೀಕ್ಷಕ ಅಭಿಯಂತರರು, ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ವಿಭಾಗ, ಬಳ್ಳಾರಿ ಮತ್ತು ಕೊಪ್ಪಳ ವಿಭಾಗಗಳು, ನಿರ್ದೇಶಕರು, ಪ್ರಾಚೀನ ವಸ್ತು ಶಾಸ್ತ್ರ ಸಂಶೋಧನಾ ಮತ್ತು ವಸ್ತು ಸಂಗ್ರಹಾಲಯ ಮೈಸೂರು ಅಧೀಕ್ಷಕ ಪ್ರಾಚೀನ ವಸ್ತು ಸಂಶೋದಕರು, ಭಾರತ ಪ್ರಾಚೀನ ವಸ್ತು ಶಾಸ್ತ್ರ ಸಂಶೋಧನಾ ಇಲಾಖೆ, ಉಪ ನಿರ್ದೇಶಕರು, ಪ್ರವಾಸೋಧ್ಯಮ ಇಲಾಖೆ, ಪ್ರಾಚೀನ ವಸ್ತು ಶಾಸ್ತ್ರ ಸಂರಕ್ಷಣೆ ಇಲಾಖೆಯ ಅಭಿಯಂತರರು, ಮತ್ತು ಇತರೆ ಪ್ರಮುಖ ಅಧಿಕಾರಿಗಳನ್ನೊಳಗೊಂಡ ತಂಡವು ಸೇತುವೆಯ ಕೂಡು ರಸ್ತೆಯ ಮತ್ತು ತಳವಾರ ಘಟ್ಟ ದ್ವಾರವನ್ನು ತಪ್ಪಿಸಿ ಬಳಸು ರಸ್ತೆಯ ನಿರ್ಮಾಣಕ್ಕಾಗಿ ಅಲೈನ್‌ಮೆಂಟ್ ನಿರ್ಧರಿಸಲು ಜಂಟಿ ತಪಾಸಣೆ ನಡೆಸಿತು. |
| 22 ನೇ ಸೆಪ್ಟೆಂಬರ್ 1999 | ಕರ್ನಾಟಕ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಯವರಿಂದ ಅಧೀಕ್ಷಕರು, ಪ್ರಾಚೀನ ವಸ್ತು ಶಾಸ್ತ್ರ ಸಂಶೋಧಕರು, ಬೆಂಗಳೂರುರವರಿಗೆ ತಳವಾರ ಘಟ್ಟ ದ್ವಾರವನ್ನು ತಪ್ಪಿಸಿ ಕೂಡು ರಸ್ತೆ ನಿರ್ಮಿಸಲು ನಿರ್ಧರಿಸಿದ ಹೊಸ ಅಲೈನ್‌ಮೆಂಟ್ ಬಗ್ಗೆ ನಿರಾಕ್ಷೇಪಣಾ ಪತ್ರ ನೀಡುವಂತೆ ಕೋರಿ ಮತ್ತು ಇದೇ ರೀತಿ ಮಹಾ ನಿರ್ದೇಶಕರು ಭಾರತ ಪ್ರಾಚೀನ ವಸ್ತು ಶಾಸ್ತ್ರ ಸಂಶೋಧನಾ ಇಲಾಖೆಯವರಿಂದ ನಿರಾಕ್ಷೇಪಣಾ ಪತ್ರ ಪಡೆಯಲು ಕೋರಿ ಪತ್ರ ಬರೆದಿರುತ್ತಾರೆ. |
| 7 ನೇ ಅಕ್ಟೋಬರ್ 1999 | ಶ್ರೀ. ಜುಂಕೊ ತನಿಗುಚಿ ಸಹಾಯಕ ಕಾರ್ಯಕ್ರಮ ನಿಪುಣರು, ಏಷಿಯ ವಿಭಾಗ, ವಿಶ್ವ ಪರಂಪರೆ ಕೇಂದ್ರ ಫ್ರಾನ್ಸ್ ಅಧೀಕ್ಷಕ ಅಭಿಯಂತರರು, ಕಾರ್ಯನಿರ್ವಾಹಕ ಅಭಿಯಂತರರು, ಬಳ್ಳಾರಿ ಮತ್ತು ಕೊಪ್ಪಳ ವಿಭಾಗ ಕೇಂದ್ರ ಮತ್ತು ರಾಜ್ಯ ಪ್ರಾಚೀನ ವಸ್ತು ಶಾಸ್ತ್ರ ಸಂಶೋಧನಾ ಇಲಾಖಾಧಿಕಾರಿಗಳು ಮತ್ತ ಉಪ ನಿರ್ದೇಶಕರು, ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಇಲಾಖೆಯರವರಿಂದ ಕಾಮಗಾರಿ ಸ್ಥಳದ ಜಂಟಿ ತಪಾಸಣೆ ನಡೆಸಲಾಯಿತು. |
| 13 ನೇ ಅಕ್ಟೋಬರ್ 1999 | ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಯವರಿಂದ ಸೇತುವೆ ನಿರ್ಮಾಣ ಕಾಮಗಾರಿಯನ್ನು ಮುಂದಿನ ಆದೇಶ ಸ್ಥಗಿತಗೊಳಿಸಲು ಪತ್ರ ಬರೆಯಲಾಗಿತು, |
| 23 ನೇ ಅಕ್ಟೋಬರ್ 1999 | ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡರವರಿಂದ ಶ್ರೀಮತಿ ಅಚಲ ಮೌಲಿಕ್ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರರವರಿಗೆ ಅರೆ ಸರ್ಕಾರಿ ಪತ್ರ ಬರೆದು ಸೇತುವೆ ನಿರ್ಮಾಣ ಕಾಮಗಾರಿಯನ್ನು ಮುಂದುವರೆಸಲು ತುರ್ತಾಗಿ ಅನುಮೋದನೆ ನೀಡಲು ಕೋರಲಾಯಿತು. |

| | |
|---|---|
| 24 ನೇ ನವಂಬರ್ 1999 | ಶ್ರೀಮತಿ ಅಟಲ ಮೌರಿಶ್ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರದವರಿಂದ ಸೇತುವೆ ನಿರ್ಮಾಣ ಕಾಮಗಾರಿಯ ಸ್ಥಳ ಪರಿವೀಕ್ಷಣೆ ನಡೆಸಲಾಯಿತು |
| 2ನೇ ಫೆಬ್ರುವರಿ 2000 | ರಾಜ್ಯ ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ಹಂಪಿ ಪ್ರದೇಶದ ಪ್ರಾಚೀನ ಸ್ಮಾರಕಗಳ ಸಂರಕ್ಷಣೆ ಹಾಗೂ ಕಾಪಾಡುವ ಸಲುವಾಗಿ ಕಾರ್ಯಪಡೆಯನ್ನು ರಚಿಸಲಾಯಿತು. |
| 3 ನೇ ಮಾರ್ಚ 2000 | ಕಾಮಗಾರಿಯನ್ನು ಮುಂದುವರೆಸಲು ಕರ್ನಾಟಕ ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಯವರಿಂದ ಬರೆದ ಪತ್ರ ಪಡೆಯಲಾಯಿತು. |
| 21 ನೇ ಮತ್ತು 22 ನೇ ಮಾರ್ಚ 2000 | ಹಂಪಿ ಪ್ರಾಚೀನ ಸ್ಮಾರಕ ಸಂರಕ್ಷಣಾ ಕಾರ್ಯಪಡೆಯಿಂದ ಹಂಪಿ ಪ್ರದೇಶ ಮತ್ತು ಸೇತುವೆ ಕಾಮಗಾರಿಯ ಸ್ಥಳವನ್ನು ಪರಿಶೀಲಿಸಲಾಯಿತು. ನಂತರ ಕಮಲಾಪುರದಲ್ಲಿ ಸಭೆಯನ್ನು ನಡೆಸಲಾಯಿತು. |
| 12 ನೇ ಮೇ 2000 | ಹಂಪಿ ಪ್ರಾಚೀನ ಸ್ಮಾರಕ ಸಂರಕ್ಷಣಾ ಕಾರ್ಯಪಡೆಯ ಶಿಫಾರಸ್ಸಿನ ಮೇರೆಗೆ ಕರ್ನಾಟಕ ರಾಜ್ಯ ಮಂತ್ರಿ ಮಂಡಲವು ಸೇತುವೆ ಕಾಮಗಾರಿಯ ಸ್ಥಳವನ್ನು ಬದಲಾಯಿಸಲು ತಿರ್ಮಾನಿಸಲಾಯಿತು. |
| 22 ನೇ ಮೇ 2000 | ಕರ್ನಾಟಕ ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕಾರ್ಯದರ್ಶಿಗಳಿಂದ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉ) ವಲಯ ಧಾರವಾಡರವರಿಗೆ ಬರೆದ ಪತ್ರದಲ್ಲಿ ಆನೆಗುಂದಿ ಹತಿರ ತುಂಗಬದ್ರ ನದಿಗೆ ಅಡ್ಡಲಾಗಿ ನಿರ್ಮಾಣ ಹಂತದಲ್ಲಿರುವ ಪ್ರಸ್ತುತ ಕೇಬಲ್ ಸ್ಟೇಯ್ಡ್ ಸೇತುವೆಯನ್ನು ಕೆಡವಿ ಬದಲಿ ಸ್ಥಳದಲ್ಲಿ ಸೇತುವೆ ನಿರ್ಮಿಸಲು ಸರ್ಕಾರ ತಿರ್ಮಾನಿಸಿರುವುದಾಗಿ ತಿಳಿಸಿರುತ್ತಾರೆ. |
| 14 ನೇ ಜೂನ್ 2000 | ಕರ್ನಾಟಕ ಸರ್ಕಾರ ಮುಖ್ಯ ಕಾರ್ಯದರ್ಶಿಗಳು ಸೇತುವೆ ಕಾಮಗಾರಿಯ ಸ್ಥಳಕ್ಕೆ ಭೇಟಿ ಇತ್ತು ಕಾಮಗಾರಿಯ ನಿರ್ಮಾಣ ಕಾರ್ಯವನ್ನು ತಡೆ ಹಿಡಿಯುವಂತೆಯು ಅಲ್ಲದೇ ಸಾಮಾಗ್ರಿ ಮತ್ತು ಯಂತ್ರೋಪಕರಣಗಳನ್ನು ಕಾಮಗಾರಿಯ ಸ್ಥಳದಿಂದ ದೂರದ ಸ್ಥಳಕ್ಕೆ ಸಾಗಿಸಲು ನಿರ್ದೇಶಿಸಿದರು. ಅದರಂತೆ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ವಿಭಾಗ ಕೊಪ್ಪಳರವರು ಗುತ್ತಿಗೆದಾರರಿಗೆ ಕಾಮಗಾರಿಯ ನಿರ್ವಹಣೆಯನ್ನು ಸ್ಥಗಿತಗೊಳಿಸಲು ಆದೇಶ ನೀಡಿರುತ್ತಾರೆ. |
| 6ನೇ ಜುಲೈ 2000 | ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಸೇತುವೆ ಕಾಮಗಾರಿಯ ಸ್ಥಳಕ್ಕೆ ಬೇಟಿ ನೀಡಿರುತ್ತಾರೆ. |
| 10 ನೇ ಸೆಪ್ಟಂಬರ್ 2001 | ಸಾರ್ವಜನಿಕರಿಂದ ಮತ್ತು ಕನ್ನಡ ಇತಿಹಾಸ ಅಕಾಡಮಿಯವರಿಂದ ಸಲ್ಲಿಸಲಾಗಿದ್ದ ರಿಟ್ ಅರ್ಜಿ ಸಂಖ್ಯೆ 23760:2000 ಮತ್ತು 34312:2000 ನ್ನು ಆಧರಿಸಿ ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯವು ರಿಟ್ ಅರ್ಜಿಯನ್ನು ಪೈಸಲು ಮಾಡುತ್ತಾ ಕರ್ನಾಟಕ ಸರ್ಕಾರವು ಸೇತುವೆಯನ್ನು ಕೆಡವುದು ಅಥವಾ ಮಾತ್ತಾವುದೇ ಕ್ರಮ ಕೈಗೊಳ್ಳುವ ಮುನ್ನ ಹಂಪಿ ವಿಶ್ವಪರಂಪರೆ ಆಡಳಿತ ಪ್ರಾಧಿಕಾರದ ಸಹಯೋಗದೊಂದಿಗೆ ಸಮಂಜಸವಾದ ಯೋಜನೆಯನ್ನು ತಯಾರಿಸಿಕೊಂಡು ಕೂಲಂಕುಷವಾಗಿ ಪರಿಶೀಲಿಸಲು ಆದೇಶಿಸಲಾಯಿತು. |
| 22ನೇ ಅಕ್ಟೊಬರ್ 2000 | ಶ್ರೀಮತಿ ಥರೆಸಾ ಭಟ್ಟಾಚಾರ್ಯ ಕರ್ನಾಟಕ ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು, ಇವರು ಸೇತುವೆಯ ಕಾಮಗಾರಿಯ ಸ್ಥಳಕ್ಕೆ ಭೇಟಿ ನೀಡಿರುತ್ತಾರೆ. |
| ಡಿಸೆಂಬರ್ 2001 | ಪ್ರೋ:ಹೆಚ್‌ಡಿ. ಕಮ್ಮಿರ್ ಯುನೆಸ್ಕೊ ಸಲಹೆಗಾರರು ಡಿಸೆಂಬರ್ 2001 ರಲ್ಲಿ ಹಂಪಿಗೆ ಬೇಟಿ ಇತ್ತರು. ಅವರು ತಮ್ಮ ವರದಿಯಲ್ಲಿ ಸೇತುವೆಯ ಕೂಡು ರಸ್ತೆ ನಿರ್ಮಾಣಕ್ಕಾಗಿ ಮೂರು ಆಯ್ಕೆಗಳನ್ನು ಮಂಡಿಸಿದರು. |

| | |
|---|---|
| 7 ನೇ ಆಗಸ್ಟ್ 2002 | ಕರ್ನಾಟಕ ಸರ್ಕಾರ ಆದೇಶ ನೀಡಿ ಅ) ಹಾಲಿ ತಳವಾರ ಘಟ್ಟದ ದ್ವಾರ ಮತ್ತು ಕೋಟೆ ಗೋಡೆಗಳನ್ನು ಉಳಿಸಿ ಬದಲಿ ರಸ್ತೆ ನಿರ್ಮಾಣ ಮಾಡುವುದು. ಆ) ಈ ಬಳಸು ರಸ್ತೆ ನಿರ್ಮಾಣ ಮಾಡಿದ ನಂತರವೇ ಸೇತುವೆಯ ನಿರ್ಮಾಣ ಕಾಮಗಾರಿಯನ್ನು ಪೂರೈಸುವಂತೆ ಸೂಚಿಸಿತು. |
| 1 ರಿಂದ 11 ನೇ ಮೇ 2003 | ಮಿಸ್ ಮಿಂಜಿಯುಂಗ್ ಉಪನಿರ್ದೇಶಕರು, ಹಂಪಿ ವಿಶ್ವಪರಂಪರೆ ಕೇಂದ್ರ ಮತ್ತು ಮಿ. ಪಾಲ್ ಬೋಲಿಂಡ್ ಯುನೆಸ್ಕೋದ ಪರಿಣಿತರನ್ನೊಳಗೊಂಡ ಯುನೆಸ್ಕೊ ತಂಡವು ಕಾಮಗಾರಿಯ ಸ್ಥಳಕ್ಕೆ ಬೇಟಿ ಕೊಟ್ಟಿದ್ದರು. ಈ ತಂಡವು ಕೆಳಕಂಡ ಕೆಲವು ಶಿಫಾರಸ್ಸುಗಳನ್ನು ಮಾಡಿತು. ಅ) ಬಳಸು ರಸ್ತೆಯ ಎತ್ತರವನ್ನು ತಗ್ಗಿಸುವುದು ಮತ್ತು ರಸ್ತೆಯ ಉದ್ದವನ್ನು ಕಡಿತಗೊಳಿಸುವುದು. ಆ) ಪ್ರೊ: ಹೆಚ್.ಡಿ. ಕಮ್ಮಿರ್ ರವರು ಸೂಚಿಸಿರುವಂತೆ ಬಳಸು ರಸ್ತೆ ನಿರ್ಮಿಸಿದ ನಂತರವೇ ಮುಖ್ಯ ಸೇತುವೆಯನ್ನು ಪೂರೈಸಿ ವಾಹನ ಸಂಚಾರಕ್ಕೆ ಮಾಡಿಕೊಡಬೇಕು. ಇ) ಹಂಪಿ ಆಡಳಿತ ಯೋಜನೆಯಲ್ಲಿ ಕಾಯಂ ಪರಿಹಾರವಾಗಿ ಪರ್ಯಾಯ ಸ್ಥಳವನ್ನು ಗುರುತಿಸಬೇಕು. ಕೂಡಿದ ಸೇತುವೆಯನ್ನು ಕೈಬಿಡಲು ಬದಲಿ ಸೇತುವೆಗಾಗಿ ಮರು ವಿನ್ಯಾಸಗೊಳಿಸುವುದು. ಅದರಿಂದ ನಿರ್ಮಾಣ ವೆಚ್ಚವು ಹೆಚ್ಚಿದರೂ ತಾಂತ್ರಿಕವಾಗಿ ಸಂಭವನೀಯವಾದ ಬದಲಿ ಪ್ರಸ್ತಾವನೆ ಇರಬೇಕು. |
| 24 ನೇ ಜನವರಿ 2004 | ಕರ್ನಾಟಕ ಸರ್ಕಾರದ ನಿರ್ದೇಶನದಂತೆ ಸೇತುವೆಯ ನಿರ್ಮಾಣದ ಸಲಹೆಗಾರರಾದ ಮೆ: ಟಾಟ್ ಸ್ಟೀಲ್ ರಿಸರ್ಚ್ ಫೌಂಡೇಷನ್ ಆಫ್ ಇಂಡಿಯಾ (ಟಿಆರ್‌ಎಫ್‌ಐ) ರವರ ಅಭಿಪ್ರಾಯ ಪಡೆಯಲಾಯಿತು. ಅವರು ತಮ್ಮ ಅಭಿಪ್ರಾಯದಲ್ಲಿ ಪೈಲಾನ್ ಮತ್ತು ಕೇಬಲ್‌ಗಳನ್ನು ನಿರ್ಮೂಲನ ಮಾಡುವುದು. ಕಷ್ಟಸಾಧ್ಯವೆಂದು ಮತ್ತು ಈ ವಿಶೇಷ ಸೇತುವೆಯಲ್ಲಿ ಪೈಲಾನ್ ಮತ್ತು ಡೆಕ್ ಭಾಗವು ಅನ್ಯೋನ್ಯ ಅವಲಂಬಿಸಿ ಭಾಗಗಳಾಗಿರುತ್ತವೆ ಎಂದು ತಿಳಿಸಿರುತ್ತಾರೆ. |
| 3 ನೇ ಮಾರ್ಚ್ 2004 | ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಲಾಯಿತು. ಆ ಸಭೆಯಲ್ಲಿ ಹಂಪಿ ವಿಶ್ವ ಪರಂಪರೆಯ ಆಡಳಿತ ಮತ್ತು ಸೇತುವೆ ನಿರ್ಮಾಣದ ಬಗ್ಗೆ ಇರುವ ಕೋರ್ಟ್ ಕೇಸ್‌ಗಳ ಬಗ್ಗೆ ಚರ್ಚಿಸಲಾಯಿತು. ಮುಖ್ಯ ಕಾರ್ಯದರ್ಶಿಯವರು ನಿರ್ದೇಶನ ನೀಡಿ ಅ) ಬಳಸು ರಸ್ತೆಯ ನಿರ್ಮಾಣದ ನಂತರವೇ ಮುಖ್ಯ ಸೇತುವೆಯ ನಿರ್ಮಾಣವನ್ನು ಕೈಗೊಳ್ಳಬೇಕು (ಪ್ಯಾರ -12) ಮತ್ತು ಆ) ಯುನೆಸ್ಕೊ ತಂಡದವರ ಸಲಹೆಯಂತೆ (ಪ್ಯಾರ 2.6.3 (13)) ಕೇಬಲ್ ಸ್ಟೇಯ್ಡ್ ಸೇತುವೆ ಬದಲಿಗೆ ಸಾಂಪ್ರದಾಯಿಕ ರೀತಿಯ ಸೇತುವೆಯ ನಿರ್ಮಾಣದ ಬಗ್ಗೆ ಪರಿಶೀಲಿಸಲು ಸಲಹೆ ನೀಡಲಾಗಿದೆ. (ಡೆಕ್ ಸ್ಲಾಬ್ ಸೇತುವೆ) |

ಈ ಮೇಲಿನ ಎಲ್ಲಾ ನಿಜ ಸ್ಥಿತಿಗಳಿಂದ ಕಂಡು ಬರುವುದೇನೆಂದರೆ ಯಾವುದೇ ಹಂತದಲ್ಲಿ ಸೇತುವೆಯ ನಿರ್ಮಾಣ ಕಾಮಗಾರಿಗೆ ಆಕ್ಷೇಪ ಒಡ್ಡಿರುವುದಿಲ್ಲ, ಆದರೆ ತರುವಾಯ ಯುನೆಸ್ಕೊ ತಂಡದವರು ಕೇಬಲ್ ಸ್ಟೇಯ್ಡ್ ಸೇತುವೆಯ ಬದಲಿಗೆ ವಿಶೇಷ ರೀತಿಯ ಸೇತುವೆ ನಿರ್ಮಾಣಕ್ಕೆ ಸಲಹೆ ನೀಡಿರುತ್ತಾರೆ. ಲೋಕೋಪಯೋಗಿ ಇಲಾಖೆಯ ಕಾಮಗಾರಿಯ ಸ್ಥಳಕ್ಕನುಗುಣವಾಗಿ (ವರ್ಷ ಪೂರ ಸ್ಥಳದಲ್ಲಿ 12 ಮಿ ಆಳಕ್ಕೆ ನೀರು ನಿಲ್ಲುತ್ತಿದ್ದು 80 ಮಿ ಅಗಲಕ್ಕೆ ಸೇತುವೆ ನಿರ್ಮಾಣ ಮಾಡಬೇಕಿರುವುದರಿಂದ) ಮತ್ತು ಆರ್ಥಿಕವಾಗಿ ಮಿತವ್ಯಯವಾಗಿರುವ ಕೇಬಲ್ ಸ್ಟೇಯ್ಡ್ ಸೇತುವೆ ನಿರ್ಮಾಣಕ್ಕಾಗಿ ಕೈಗೆತ್ತಿಕೊಳ್ಳಬೇಕಾಯಿತು. ಈಗಲೂ ಯುನೆಸ್ಕೊ ತಂಡವು ನಿರ್ಮಾಣದ ಹಂತದಲ್ಲಿರುವ ಕೇಬಲ್ ಸ್ಟೇಯ್ಡ್ ಸೇತುವೆಯ ನಿರ್ಮಾಣದ ಬಗ್ಗೆ ಆಕ್ಷೇಪಣೆ ಎತ್ತಿರುದಿಲ್ಲ, ಆದರೆ ಬದಲಿ ವಿಶೇಷ ರೂಪದ ಸೇತುವೆಗೆ ಸಲಹೆ ನೀಡಿರುತ್ತಾರೆ.

## FAMILY TREE OF THE RAJAS OF THE ANEGONDI SAMASTANAM & VIJAYANAGARA EMPERORS



Timma married Devaki

Iswara married Bakkamma

Narasimha had 3 wives

Tirumala Raj Dalwai

Veera Narasimha *by Tippaji*

Krishna Rayalu *by Nagala*

Ranga *by Oblamma*

Achyuta *by Oblamma*

Tirumalamma *married* **Rama Rayalu - I** *(died in battle of Talikot - 1565)*

Vengalamma *married* **Tirumala - I**

Sadashiva

Venkata

Ranga - IV

Raghunath

Ranga - II

Rama - III

Venkata

Pedda Venkatapathi Rayalu

Chinna Venkatapathi Rayalu - III

Tirumala - II

Ranga - III

Rama - IV

Veera Venkata

Ranga - VI

Tirumala

Rama or Ranga Rayalu

Ranga or Venkata Rayalu

Rama Rayalu

Tirumala Rayalu

Vengamma

Chinna Raja

Rama

Rama

Gopala

Veera Venkata

Pedda Dasa

Chinna Dasa Rayalu

Rama

Veera Venkatapathi Rayalu

TIRUMALA DEVA RAJU *(First Pensioner - granted in 1824)*

Chellamma *married* *Kumara Raghavaraju Dalwai*

Kumara Raghavaraju Dalwai

Narasimha Raju

2) VEERA VENKATAPATHI RAJU *succeeded in 1824 died unmarried in 1831*

Pedda Pampapathi Raju

Chinna Pampapathi Raju

Kesamma

Rangapathi Raju

Kumara Raghavaraju

3) TIRUMALA DEVA RAYALU *succeeded in 1831 died in 1866*

Lakshmi Devamma

Sadasiva Raju

Kodanda Rama Raju

Kuppamma *married* *Krishna Deva Raya*

Pampapathi Raju *adopted in 1888 by* *Rani Kuppamma*

6) PEDDA NARASIMHA RAJU *succeeded in 1872 died in 1883*

4) VENKATA RAMA RAYALU *succeeded in 1866 died in 1871*

5) KRISHNA DEVA RAYALU *succeeded in 1871 died in 1872*

wives

9) RANI KUPPAMMA *(died on 7.7.1946)* *(Pension granted in 19.8.1919)*

Ijjamma

Venkamma

7) NARASINGAMMA *W/o Pedda Narasimha Raju* *succeeded in 1883 died in April 1889*

8) SRI RANGA DEVA RAYALU *(Pampapathi Raju)* *died on 10.12.1918 (Pension granted by G.O. 413 of 1902)* *wife* Rani Narasingamma *(died in 1902)*

Santha Kristamma

Tirumala Kondamma

10) DURBAR RAJA KRISHNA DEVA RAYA *born : 30.11.1911 / died : 17.6.1966*

11) *wife* RANI LAL KUMARI *Pension granted in 1970 (died 4.11.1984)*

Tirumala Deva Raya *died 17.12.1996* *wife* *Rani Rajendra Kumari* *died 17.1.1989*

Venkata Deva Raya *born 27.4.1918 died 27.11.1979* *wife* *Rani Lakshmidevamma*

Rama Deva Raya *wife* Vijaya Kumari

Vijaya Kumari

Shankar Kumari

Harihara Deva Raya *died 20.8.1987*

RAJA ACHYUTA DEVA RAYA *born : 4.8.1936 (Adopted by Rani Lal Kumari)* *wife* *Rani Chandrakanta Devi* *(born : 11.10.1946)*

Achuta Deva Raya *wife* Chandrakanta Devi *(adopted by Rani Lal Kumari)*

Sriranga Deva Raya *wife* Lalita Rani

Narasimha Deva Raya *wife* Mohini

Raghu Deva Raya *died 24.12.1969*

Krishna Kumari *born : 3.10.1966*

SHRI KRISHNA DEVA RAYA *born : 6.10.1970* *wife* *Rathnashree Raya* *born : 11.7.1975*

TIRUMALA VENKATA DEVA RAYA *born : 4.12.2000*

*With Best Compliments From*

**RAJA ACHYUTA DEVA RAYA & FAMILY**

'Anegondi House', Nehru Colony,

HOSPET - 583 203.

☎ : (08394) 28449.

9448051349

# ಆನೆಗೊಂದಿಯ ಛಾಯಚಿತ್ರಗಳು



ಶ್ರೀರಂಗನಾಥಸ್ವಾಮಿ ದೇವಸ್ಥಾನ



ಗಗನ್ ಮಹಲ್



ನವ ವೃಂದಾವನ



ಘಟ್ಟಿಕೋಟೆ



ಕಲ್ಲಿನ ಸೇತುವೆ



64 ಕಾಲಿನ ಮಂಟಪ

# ಆನೆಗೊಂದಿ ಉತ್ಸವ




ಗಾಯನ



ಅಂಬಾರಿ ಮೆರವಣಿಗೆ



ಕುಸ್ತಿ



ಸಚಿವರಾದ ಇಕ್ಬಾಲ್ ಅನ್ಸಾರಿಯವರಿಂದ ಮೆರವಣಿಗೆಯ ಉಧ್ಘಾಟನೆ



ಮೆರವಣಿಗೆಯಲ್ಲಿ ಮಾಜಿಶಾಸಕರಾದ
ಶ್ರೀರಂಗದೇವರಾಯಲುರವರು
ಸಂಸದ ವೀರುಪಾಕ್ಷಪ್ಪನವರು
ಶಾಸಕ ವೀರಪ್ಪನವರು



ಅಪೂರ್ಣಗೊಂಡ ಸ್ಥಿರತಂತಿ ಸೇತುವೆ

# ಆನೆಗೊಂದಿಯ ಛಾಯಚಿತ್ರಗಳು



ಚಿಂತಾಮಣಿ ಮಠ



ಅಂಜನಾದ್ರಿ ಬೆಟ್ಟ



ಜಾತ್ರೆ



ಜಾತ್ರೆಯಲ್ಲಿ
ಶ್ರೀ ಅಚ್ಯುತದೇವರಾಯಲುರವರು



ಜಾತ್ರೆ: ಧ್ವಜಪಟ ಹರಾಜು



ಹುಚ್ಚಪ್ಪಯ್ಯನ ಮಠ:
ಯುದ್ಧ,ಬೇಟೆ, ಕೋಲಾಟದ ಕೆತ್ತನೆಗಳು



ದುರ್ಗಾದೇವಿ



ಜಾತ್ರೆಯಲ್ಲಿ ಸಾಮೂಹಿಕವಿವಾಹ:
ಶ್ರೀಮತಿ ಲಲಿತಾರಾಣಿಯವರಿಂದ
ಮಾಂಗಲ್ಯವಿತರಣೆ



ಮದುವೆ: ಒಳ್ಳುಕಲ್ಲು ಪೂಜೆ



ಮದುವೆ: ಸುರಗಿನೀರು



ಮದುವೆ: ಹಂದ್ರಗಂಬ ತರುವದು



ನಾಮಕರಣ

